

# ಅಲೆಮಾರಿಯ ಹೆಜ್ಜೆಗಳು



(ಪ್ರವಾಸ ಕಥೆ)



ಎಂ. ವೆಂಕಟಸ್ವಾಮಿ











ಕರ್ನಾಟಕ ಸರ್ಕಾರ

ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಜನಪ್ರಿಯ ಪುಸ್ತಕ ಮಾಲೆ

# ಅಲೆಮಾರಿಯ ಹೆಜ್ಜೆಗಳು

( ಪ್ರವಾಸ ಕಥೆ )

ಎಂ. ವೆಂಕಟಸ್ವಾಮಿ




ಕರ್ನಾಟಕ ಸರ್ಕಾರ
ಕನ್ನಡ ಪುಸ್ತಕ ಪ್ರಾಧಿಕಾರ
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮

ALEMARIYA HEGGEGALU : Travelogue, written by M.Venkataswamy, Published by Administrative Officer, Kannada Pustaka Pradhikara, (Kannada Book Authority), Pampa Mahakavi Road, Chamarajpet, Bangalore -560 018.

ಪ್ರಥಮ ಮುದ್ರಣ : ೨೦೦೧

ಪುಟಗಳು : ೨೦೫ + ೮

ಗ್ರಂಥಸ್ವಾಮ್ಯ : ಕನ್ನಡ ಪುಸ್ತಕ ಪ್ರಾಧಿಕಾರ

ಬೆಲೆ : 50=00

ಮುಖ ಪುಟ : ಎಂ.ಎಸ್. ಶಶಿಧರ್

**ISBN** : 81-7713-055-2

ಮುದ್ರಣ :
ಭಾರತೀಶ ಎಂಟರ್‌ಪ್ರೈಸಸ್,
ಯಳಚೇನಹಳ್ಳಿ
ಬೆಂಗಳೂರು - 560078

## ಮುನ್ನುಡಿ

ಜ್ಞಾನ ಸಂಪಾದನೆ ಮತ್ತು ಜ್ಞಾನ ಪ್ರಸಾರಗಳ ಅತ್ಯಂತ ಪ್ರಬಲ ಮತ್ತು ಪರಿಣಾಮಕಾರೀ ಮಾಧ್ಯಮ ಅಕ್ಷರ ಮಾಧ್ಯಮ. ಈ ಮಾಧ್ಯಮದಲ್ಲಿ ಆಹ್ಲಾದಕಾರಿಯೂ, ಆತ್ಮಾಕರ್ಷಕವೂ, ಜೀವನ ಸೌಂದರ್ಯದಾಯಕವೂ, ಸಂಸ್ಕೃತಿ ಸಂಪನ್ನವೂ, ಬುದ್ಧಿ ಮನಸ್ಸುಗಳ ವರ್ಧಕವೂ ಆದ ಅಪೂರ್ವ ಮಾಧ್ಯಮವೇ ಸಾಹಿತ್ಯ. ನಿತ್ಯಪರಿವರ್ತನಶೀಲವಾದ ಜಗತ್ತಿನ ಜ್ಞಾನ ವಿಜ್ಞಾನ ಸಂಸ್ಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರವಹಣ ಮಾಡುತ್ತ ಮನುಷ್ಯನ ಜೀವನವನ್ನು ಪುಷ್ಟಿಗೊಳಿಸುತ್ತ, ತುಷ್ಟಿಗೊಳಿಸುತ್ತ, ವಿಕಾಸಗೊಳಿಸುತ್ತ ಪೂರ್ಣತೆಯ ಕಡೆಗೆ ಅವನನ್ನು ಕರೆದೊಯ್ಯುವುದೇ ಇದರ ಪರಮ ಗುರಿ. ಇಂಥ ಜೀವನೋತ್ಥಾನಕಾರಿಯಾದ ಉತ್ತಮ ಜ್ಞಾನ ಸಂಪತ್ತನ್ನು ವಿಶಿಷ್ಟ ಹಾಗೂ ಅರ್ಥಪೂರ್ಣ ಗ್ರಂಥಗಳ ಮೂಲಕ ಕನ್ನಡ ಓದುಗರಿಗೆ ಒದಗಿಸುವ ಗುರುತರ ಜವಾಬ್ದಾರಿಯನ್ನು ಕನ್ನಡ ಪುಸ್ತಕ ಪ್ರಾಧಿಕಾರ ಹೊತ್ತುಕೊಂಡು ನಿರ್ವಹಿಸುತ್ತಿದೆ.

ಜ್ಞಾನ, ಸಂಸ್ಕೃತಿ ಮತ್ತು ಸಾಹಿತ್ಯ ಪ್ರಸಾರ ಕಾರ್ಯಕ್ಕೆ ಕರ್ನಾಟಕ ಸರ್ಕಾರ ಬಹು ಹಿಂದಿನಿಂದ ಒತ್ತಾಸೆ ನೀಡುತ್ತ ಬಂದಿದೆ. ಈ ಮೂಲಕ ಪರಂಪರೆಯನ್ನು ಆರಂಭಿಸಿದ ಕೀರ್ತಿ ಕರ್ನಾಟಕ ಕಂಡ ಅತ್ಯಂತ ದಕ್ಷ ಹಾಗೂ ದೂರದೃಷ್ಟಿಯ ಮುಖ್ಯಮಂತ್ರಿಗಳಲ್ಲಿ ಒಬ್ಬರಾದ ಶ್ರೀ ಕೆಂಗಲ್ ಹನುಮಂತಯ್ಯ ಅವರಿಗೆ ಸಲ್ಲಬೇಕು. ಕನ್ನಡದ ಶ್ರೀಮಂತ ಸಾಂಸ್ಕೃತಿಕ ಪರಂಪರೆಯ ಶ್ರೇಷ್ಠ ಗ್ರಂಥಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ತಲುಪಿಸುವ ಸ್ತುತ್ಯ ಕಾರ್ಯವನ್ನು ಅಂದಿನಿಂದ ನಿರ್ವಹಿಸುತ್ತ ಬಹುಬೇಡಿಕೆಯ ನೂರಾರು ಕೃತಿಗಳನ್ನು ಸರ್ಕಾರ ಪ್ರಕಟಿಸಿ ಜನಮನ್ನಣೆಯನ್ನು ಗಳಿಸಿದೆ.

ಇದುವರೆಗೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಿಸುತ್ತಿದ್ದ ಇಂಥ ಪ್ರಾಚೀನ ಹಾಗೂ ಆಧುನಿಕ ಜನಪ್ರಿಯ ಪುಸ್ತಕಗಳನ್ನು ಈಗ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸುತ್ತಿದೆ. ಅಲಭ್ಯವಾಗಿರುವ ಹಾಗೂ ಬಹುಬೇಡಿಕೆಯ, ಸಾಹಿತ್ಯ ಮೌಲ್ಯ ಮತ್ತು ವೈಚಾರಿಕ ಮೌಲ್ಯಗಳನ್ನು ಒಳಗೊಂಡಿರುವ ಕೃತಿಗಳನ್ನು ಅತ್ಯಂತ ಕಡಿಮೆ ಬೆಲೆಯಲ್ಲಿ ಕನ್ನಡ ಸಹೃದಯರಿಗೆ ನೀಡುವುದೇ ಈ "ಜನಪ್ರಿಯ ಪುಸ್ತಕ ಮಾಲೆ"ಯ ಮುಖ್ಯೋದ್ದೇಶ.

ಈ ಮಾಲೆಯಲ್ಲಿ ಇದೀಗ "ಅಲೆಮಾರಿಯ ಹೆಜ್ಜೆಗಳು" ಎಂಬ ಪ್ರವಾಸಕಥನ ಪ್ರಕಟವಾಗುತ್ತಿರುವುದು ಹರ್ಷದ ಸಂಗತಿ. ಇದರ ಲೇಖಕರಾದ ಶ್ರೀ ಎಂ. ವೆಂಕಟಸ್ವಾಮಿ ಅವರು ಭಾರತೀಯ ಭೂ ವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಯ ಭೂವಿಜ್ಞಾನಿಗಳಾಗಿ ದಶಕಗಳ ಕಾಲದಿಂದ ಕಾರ್ಯ ನಿರ್ವಹಿಸಿದ್ದಾರೆ. ಭಾರತದ ಹಲವಾರು ಕಡೆ ತಮ್ಮ ಪದನಿಮಿತ್ತ ಕಾರ್ಯ ನಿರ್ವಹಿಸಿರುವ ಇವರು ತಾವು ಪರಿಚಯಿಸಿದ ಮತ್ತು ದರ್ಶಿಸಿದ ಪ್ರದೇಶಗಳನ್ನು ಒಬ್ಬ ವಿಜ್ಞಾನಿಯ ಕಣ್ಣಿನಿಂದ ಹಾಗೂ ಪ್ರವಾಸಿಯ ಕಣ್ಣಿನಿಂದ ಅವಲೋಕಿಸಿ ಅಲ್ಲಿನ ಸ್ವಾರಸ್ಯಗಳನ್ನು ಈ ಕೃತಿಯಲ್ಲಿ ಕುಂಚಿಸಿದ್ದಾರೆ. ನಮ್ಮಲ್ಲಿ ಹಲವಾರು ಶ್ರೇಷ್ಠ ಪ್ರವಾಸಕಥನಗಳು ಪ್ರಕಟವಾಗಿವೆ.

ಈ ಕಥನಗಳಲ್ಲಿ ಬಹುಪಾಲು ಆಯಾ ಲೇಖಕರು ಮಾಡಿದ ದೇಶ ವಿದೇಶಗಳ ಪರ್ಯಟನವನ್ನು ಮತ್ತು ಅಲ್ಲಿ ತಾವು ಕಂಡ ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ವಿಶೇಷಗಳನ್ನು ನಿರೂಪಿಸಿ, ಆಯಾ ಪ್ರದೇಶಗಳ ಹಲವು ಮುಖ್ಯಾಂಶಗಳ ಪರಿಚಯ ಕನ್ನಡ ಓದುಗರಿಗೆ ದೊರೆಯುವಂತೆ ಮಾಡಿದೆ. ಆದರೆ ಈ ಪ್ರವಾಸಕಥನ ವಿಶಿಷ್ಟ ರೀತಿಯದು. ಬೇರೆ ಬೇರೆ ಪ್ರದೇಶಗಳ ಸೌಂದರ್ಯ ಮತ್ತು ಸಾಂಸ್ಕೃತಿಕ ವೀಕ್ಷಣೆಯ ಉದ್ದೇಶದಿಂದ ಈ ಲೇಖಕರು ಅಲ್ಲಿ ಪ್ರವಾಸ ಮಾಡಿಲ್ಲ. ಇವರ ಪ್ರವಾಸ ಸರಳ ಸುಲಭವಾದುದಲ್ಲ. ಶ್ರದ್ಧೆ, ಸಾಹಸಶೀಲತೆ, ಸಂಶೋಧನಾದೃಷ್ಟಿ, ವಾಸ್ತವ ಪರಿಶೀಲನೆಪ್ರಜ್ಞೆ, ಹಾಗೂ ಅನುಭವ ಪ್ರಾಮಾಣ್ಯಗಳನ್ನು ಗರ್ಭೀಕರಿಸಿಕೊಂಡ ವಸ್ತುನಿಷ್ಠ ಬರವಣಿಗೆ. ಆದ್ದರಿಂದ ಈ ಕೃತಿಯಲ್ಲಿ ಇತಿಹಾಸಕಾರನ ವಾಸ್ತವಪ್ರಜ್ಞೆ, ವಿಜ್ಞಾನಿಯ ಅನ್ವೇಷಣೆ ದೃಷ್ಟಿ, ಜೀವನ ಕುತೂಹಲಿಯ ರಹಸ್ಯ, ಶೋಧಕ ಪ್ರವೃತ್ತಿ, ಸೌಂದರ್ಯಾರಾಧಕನ ಸೃಜನಶೀಲ ಪ್ರತಿಭೆ ಚಿತ್ರಕಾರನ ಕುಶಲ ಕುಸುರಿ ಮುಂತಾದವು ಇಲ್ಲಿ ಮೇಳವಿಸಿದೆ. ಶ್ರೀ ಎಂ. ವೆಂಕಟಸ್ವಾಮಿ ಅವರು ಉತ್ತರ ಮತ್ತು ಉತ್ತರ ಈಶಾನ್ಯ ಭಾರತದ ಹತ್ತಾರು ಪ್ರದೇಶಗಳಲ್ಲಿ ಹುದ್ದೆಯ ನಿಮಿತ್ತ ಕಾರ್ಯ ನಿರ್ವಹಿಸುವ ಸಂದರ್ಭದಲ್ಲಿ ಅವರು ಸಂಚರಿಸಿದಂತಹ ಮತ್ತು ಸಂಶೋಧನೆಗಳನ್ನು ನಡೆಸಿದಂತಹ ಪ್ರದೇಶಗಳ ಜನರ ನಡೆ-ನುಡಿಗಳನ್ನು, ವೇಷ-ಭೂಷಣಗಳನ್ನು, ಜೀವನ ಕ್ರಮಗಳನ್ನು ಸಮಾಜ ವಿಜ್ಞಾನಿಯ ಕಣ್ಣಿನಿಂದ ಗ್ರಹಿಸಿ ಇಲ್ಲಿ ದಾಖಲಿಸಿದ್ದಾರೆ. ಹಾಗೆಯೇ ಈ ವಿಷಯಗಳ ಬಗ್ಗೆ ತಾವು ಇತರರಿಂದ ಕೇಳಿದ ಮತ್ತು ಆ ಬಗ್ಗೆ ಪುಸ್ತಕಗಳಿಂದ ಪಡೆದುಕೊಂಡ ಅಂಶಗಳನ್ನೂ ಸಹ ಇಲ್ಲಿ ನಿರೂಪಿಸಿದ್ದಾರೆ. ಈ ನಿರೂಪಣೆಯಲ್ಲಿ ಮನುಷ್ಯ ಸಂಬಂಧಗಳನ್ನು ಕುರಿತು, ಜೀವನದ ವೈಚಿತ್ರ್ಯಗಳನ್ನು ಕುರಿತು, ಅಲ್ಲಿನ ಮೌಢ್ಯ, ಸಾಹಸ ಹಾಗೂ ಕಷ್ಟ ಕಾರ್ಪಣ್ಯಗಳನ್ನು ಕುರಿತು ಸ್ವಾರಸ್ಯಕರವಾದ ಅಂಶಗಳನ್ನು ಕಲೆಹಾಕಿದ್ದಾರೆ. ಸಾಮಾನ್ಯ ಪ್ರವಾಸಕಥನಗಳಿಂದ ಪ್ರಾಪ್ತವಾಗದ ಕುತೂಹಲಕಾರಿಯಾದ ಮತ್ತು ಕೆಲವು ಸಂದರ್ಭಗಳಲ್ಲಿ ರೋಮಾಂಚಕಕಾರಿಯಾದ, ಬಹುಜನರ ಅರಿವಿಗೆ ಬಾರದ ಸನ್ನಿವೇಶಗಳು ಕೂಡ ಇಲ್ಲಿ ಚಿತ್ರಣಗೊಂಡು ಈ ಪ್ರದೇಶದ ಜನರ ಬಗೆಗಿನ ನಮ್ಮ ತಿಳುವಳಿಕೆಯನ್ನು ವಿಸ್ತರಿಸುತ್ತವೆ. ಶೈಲಿಯೂ ಸಹ ಸರಳವಾಗಿ ಯಾವುದೇ ಸುತ್ತು ಬಳಸಿಲ್ಲದೇ ಹರಿಯುವುದರಿಂದ ಸಹಜವಾಗಿ ಲೇಖಕರ ಅನುಭವಗಳು ಓದುಗರ ಅನುಭವ ವಲಯಕ್ಕೆ ಸುಗಮವಾಗಿ ಪ್ರವೇಶ ಮಾಡುತ್ತವೆ.

ಇಂಥದೊಂದು ವಿಶಿಷ್ಟ ಪ್ರವಾಸಕಥನವನ್ನು ಪ್ರಾಧಿಕಾರಕ್ಕಾಗಿ ಬರೆದುಕೊಟ್ಟಿರುವ ಭೂವಿಜ್ಞಾನಿ ಶ್ರೀ ಎಂ. ವೆಂಕಟಸ್ವಾಮಿ ಅವರಿಗೆ, ಇದನ್ನು ಪ್ರಕಟಿಸಲು ಅನುಮತಿಸಿದ ಕನ್ನಡ ಪುಸ್ತಕ ಪ್ರಾಧಿಕಾರದ ಸದಸ್ಯ ಮಿತ್ರರಿಗೆ, ಸುಂದರವಾಗಿ ಮುದ್ರಿಸಿಕೊಟ್ಟ "ಭಾರತೀಶ ಎಂಟರ್‌ಪ್ರೈಸಸ್"ನ ಮಾಲೀಕರು ಮತ್ತು ಸಿಬ್ಬಂದಿ ವರ್ಗಕ್ಕೆ ಹಾರ್ದಿಕ ಕೃತಜ್ಞತೆಗಳು.

ಡಾ.: ಎಚ್. ಜೆ. ಲಕ್ಕಪ್ಪಗೌಡ
ಅಧ್ಯಕ್ಷರು,
ಕನ್ನಡ ಪುಸ್ತಕ ಪ್ರಾಧಿಕಾರ,
ಬೆಂಗಳೂರು.

ದಿನಾಂಕ : ೨೫-೧-೨೦೦೧

## ನಿಮ್ಮೊಂದಿಗೆ .......

ಕ್ರಿ.ಶ. 1851ರಲ್ಲಿ ಸ್ಥಾಪನೆಗೊಂಡ ಭಾರತೀಯ ಭೂವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆ (Geological Survey of India) ಇಡೀ ಪ್ರಪಂಚದಲ್ಲಿಯೇ ಒಂದು ಅತ್ಯುತ್ತಮವಾದ ಸಂಸ್ಥೆ. ಇಂತಹ ಸಂಸ್ಥೆಯಲ್ಲಿ ಕಳೆದ ಹದಿನೈದು ವರ್ಷಗಳಿಂದ ಭೂವಿಜ್ಞಾನಿಯಾಗಿ ದೇಶದ ಹಲವು ಪ್ರಾಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅವಕಾಶ ನನಗೆ ಒದಗಿ ಬಂದಿದೆ. ಭೂ ವಿಜ್ಞಾನಿಗಳು ಒಂದು ಕಾಲದಲ್ಲಿ ಆನೆ, ಕುದುರೆ, ಮತ್ತು ಎತ್ತಿನ ಗಾಡಿಗಳ ಮೇಲೆ ಪ್ರವಾಸ ಮಾಡಿ ಭೂ ವಿಜ್ಞಾನದ ಸಂಶೋಧನೆಯಲ್ಲಿ ತೊಡಗಿರುತ್ತಿದ್ದರು. ಕಾಲ ಬದಲಾಗಿ ಭೂ ವಿಜ್ಞಾನಿಗಳ ಸಹಾಯಕ್ಕೆ ಜೀಪು ಮತ್ತು ಕಾರುಗಳು ಬಂದವು.

ಭೂವಿಜ್ಞಾನಿಗಳ ಕೆಲಸ ಒಂದು ರೀತಿಯಲ್ಲಿ ವೈವಿಧ್ಯಮಯ ಎನ್ನಬಹುದು. ಇವರು ಒಂದು ದಿನ ಹಿಮಾಲಯದ ಶಿಖರಗಳಲ್ಲಿ ಅಲೆದಾಡುತ್ತಿದ್ದರೆ ಇನ್ನೊಂದು ದಿನ ಸಮುದ್ರದ ತಳದಲ್ಲಿ ಸಂಶೋಧನೆ ನಡೆಸುತ್ತಿರುತ್ತಾರೆ. ಇನ್ನೊಂದು ಕಡೆ ಯಾವುದೊ ಕತ್ತಲ ಗುಹೆಯಲ್ಲಿ ನಮ್ಮ ಪೂರ್ವಜರು ಬಿಡಿಸಿರುವ ಚಿತ್ರಕಲೆಯನ್ನೋ ಅಥವಾ ಅವರು ಬಿಟ್ಟು ಹೋಗಿರುವ ಮಾಹಿತಿಗಳನ್ನೋ ಹುಡುಕುತ್ತಿರುತ್ತಾರೆ. ಮಿಲಿಯಾಂತರ ವರ್ಷಗಳ ಹಿಂದೆ ಭೂಮಿಯ ಮೇಲೆ ನಡೆದಾಡುತ್ತಿದ್ದ ಆನೆ, ಜಿರಾಫೆ, ಪೆಡಂಭೂತಗಳು .... ಹೀಗೆ ಅನೇಕ ರೀತಿಯ ಪ್ರಾಣಿಗಳ ಪಳಯುಳಿಕೆಗಳನ್ನು ಯಾವುದೊ ಪ್ರದೇಶಗಳಲ್ಲಿ ಶಿಲೆಗಳಿಂದ ನಾಜೂಕಾಗಿ ಬೇರ್ಪಡಿಸುವ ಕೆಲಸದಲ್ಲಿ ಮಗ್ನರಾಗಿರುತ್ತಾರೆ. ಮನುಷ್ಯರು ತಲುಪಲಾಗದ ಪ್ರದೇಶಗಳನ್ನು ತಲುಪಿ ಶಿಲೆಗಳ ಸ್ಯಾಂಪಲ್ ತೆಗೆದುಕೊಂಡು ಅವು ಯಾವ ಯಾವ ಕಾಲದ ಶಿಲೆಗಳೆಂದು, ಅವುಗಳಲ್ಲಿ ಯಾವ ಯಾವ ಖನಿಜಗಳು ದೊರಕುತ್ತವೆ ಎನ್ನುವ ಸಂಶೋಧನೆಯಲ್ಲಿ ತೊಡಗಿರುತ್ತಾರೆ. ಇನ್ನು, ಮೇಲಿನ ಮಾಹಿತಿಗಳನ್ನೆಲ್ಲ ದೃಢಪಡಿಸಿಕೊಳ್ಳಲು ಲ್ಯಾಬ್‌ನಲ್ಲಿ ಮೈಕ್ರೋಸ್ಕೋಪ್ ಮುಂದೆಯೊ, ಅತ್ಯಾಧುನಿಕ ಕಂಪ್ಯೂಟರ್ ಮುಂದೆಯೋ ಕುಳಿತು ಸೂಕ್ಷ್ಮ ಸಂಶೋಧನೆಯಲ್ಲಿ ತೊಡಗಿರುತ್ತಾರೆ. ಜೊತೆಗೆ ಭೂವಿಜ್ಞಾನಿಗಳು ತಮ್ಮ ಪ್ರವಾಸದ ಸಮಯದಲ್ಲಿ ಹಲವು ರೀತಿಯ ತೊಂದರೆ ಮತ್ತು ಸಂದಿಗ್ಧತೆಯ ಪರಿಸ್ಥಿತಿಗಳಿಗೆ ಸಿಲುಕಿಕೊಳ್ಳುವುದು ಸರ್ವೇ ಸಾಮಾನ್ಯ. ಹೀಗೆ ಹೇಳುತ್ತಾ ಹೋದರೆ ಪ್ರತಿಯೊಬ್ಬ ಪ್ರಖ್ಯಾತ ಭೂವಿಜ್ಞಾನಿಯ ಆತ್ಮಕಥೆಯೂ ಒಂದೊಂದು ಕುತೂಹಲ ಕಥೆಯಾಗುತ್ತದೆ. ನನ್ನ ಮಟ್ಟಿಗೆ ಹೇಳುವುದಾದರೆ ನಾನೊಬ್ಬ ಪ್ರಖ್ಯಾತ ಭೂವಿಜ್ಞಾನಿ ಅಲ್ಲದಿದ್ದರೂ ನನ್ನ ಸಂಶೋಧನೆಯ ಕಾಲದಲ್ಲಿ ನನಗಾದ ಅನುಭವಗಳನ್ನು ನಿಮ್ಮ ಜೊತೆಗೆ ಹಂಚಿಕೊಳ್ಳುವುದೇ ಈ ಪುಸ್ತಕದ ಮೂಲ ಉದ್ದೇಶವಾಗಿದೆ.

## ಭಾಗ - ೧



## ಭಾಗ - ೨



## ಭಾಗ - ೩

# 1 ಉಕ್ಕು ಸ್ಥಾವರ ಬಿಲಾಯ್ ಕಡೆಗೆ

ಸಮಯ ಬೆಳಗ್ಗೆ ಏಳೂವರೆ ಗಂಟೆ. ದಿನಾಂಕ 17.02.85 ಮದ್ರಾಸಿನಿಂದ ದಿಲ್ಲಿಗೆ ಹೊರಡುವ ಜಿ.ಟಿ. ಎಕ್ಸ್‌ಪ್ರೆಸ್ ರೈಲು ಪ್ಲಾಟ್‌ಫಾರಂನಲ್ಲಿ ರೆಡಿಯಾಗಿ ನಿಂತಿದೆ. ಬಂಗಾಳಕೊಲ್ಲಿಯಿಂದ ಗಾಳಿ ತಣ್ಣಗೆ ನಗರದ ಕಡೆಗೆ ಬೀಸುತ್ತಿದ್ದು, ರೈಲು ಇನ್ನೇನು ಹೊರಡಲು ಅಣಿಯಾಗುತ್ತಿದೆ. ನಾನು ಮತ್ತು ನನ್ನ ಗೆಳೆಯ ಇಳಂಗೋವನ್ ಒಬ್ಬರನ್ನೊಬ್ಬರು ಆಗಾಗ ನೋಡಿಕೊಳ್ಳುತ್ತಿದ್ದರು, ಏನೂ ಮಾತನಾಡುತ್ತಿಲ್ಲ, ಅಷ್ಟೇ ಅಲ್ಲ, ಬರ್ತ್ ಸಿಕ್ಕಿದ್ದರೂ ಕುಳಿತುಕೊಳ್ಳಲಿಲ್ಲ. ಸಮಯದ ಕ್ಷಣಗಳಿಗಿನ್ನ ಎಷ್ಟೋ ವೇಗವಾಗಿ ಬಡಿದುಕೊಳ್ಳುತಿವೆ ನಮ್ಮ ಹೃದಯಗಳು.

ಕೆಲವೇ ಕ್ಷಣಗಳಲ್ಲಿ ರೈಲು ಮದ್ರಾಸ್ ರೈಲ್ವೇ ಸ್ಟೇಷನ್ ಬಿಟ್ಟು ಹೊರಟೇಬಿಟ್ಟಿತು. ಇಳಂಗೋವನ್ ನನ್ನ ಕಡೆಗೊಮ್ಮೆ ನೋಡಿದ. ಅವನ ಕಣ್ಣುಗಳ ಅಂಚಿನಲ್ಲಿ ಹನಿ ಕೂಡಿ ಕೊಳ್ಳುತ್ತಿದ್ದು, ಕರವಸ್ತ್ರದಿಂದ ಒರಸಿಕೊಂಡ. ಗಾಳಿ ತಂಪಾಗಿ ಮತ್ತು ಜೋರಾಗಿ ಬೀಸುತ್ತಿದೆ. ಇಬ್ಬರೂ ಸುಮಾರು ಹೊತ್ತು ಬಾಗಿಲಲ್ಲೆ ನಿಂತುಕೊಂಡಿದ್ದೆವು.

"ನನ್ನ .... ನೀನು ನನ್ನ ಜೊತೆಗೆ ಬರ್ತೀನಿ ಅಂದಿದ್ದಕ್ಕೆ ಈ ಕೆಲಸ ಮಾಡಿಬಿಟ್ಟೆ, ಎಲ್ಲ ನಮ್ಮ ಹಣೆಬರಹ ?" ಎಂದ.

"ಆಯಿತು, ಈಗ ಏನಾಯಿತು ಅಂತ. ನೀನು ಅಷ್ಟು ತಲೆ ಕೆಡಿಸಿಕೊಂಡಿದ್ದೀಯ .. ಎಲ್ಲಾ ಸರಿಹೋಗುತ್ತೆ ಸುಮ್ಮನಿರು" ಎಂದೆ. ರೈಲು ಮದ್ರಾಸಿನ ಹೊರವಲಯ ದಾಟಿ ಹಚ್ಚನ ಹಸಿರಿನ ಭತ್ತದ ಬಯಲುಗಳ ಮಧ್ಯೆ ಓಡುತ್ತಿದೆ.

ಕೆಜಿಎಫ್‌ನ ಜೀವವಿಮೆಯಲ್ಲಿ ಅಸಿಸ್ಟೆಂಟ್ಸ್ ಆಗಿ ಕೆಲಸ ಮಾಡುತ್ತಿದ್ದ ನಾವಿಬ್ಬರೂ ಹಿಂದೆ ಮುಂದೆ ಯೋಚಿಸದೆ ರಾಜೀನಾಮೆ ಕೊಟ್ಟು "ಬಿಲಾಯ್‌ನ" ಸೇಲ್ ನಲ್ಲಿ ಎಕ್ಸಿಕ್ಯೂಟಿವ್ ಟ್ರೈನಿಗಳಾಗಿ ಸೇರಲು ಹೊರಟಿದ್ದೆವು. ಇದಕ್ಕಿಂತ ಮುಖ್ಯವಾದ ವಿಷಯವೆಂದರೆ ಇಬ್ಬರಿಗೂ ಮದುವೆಯಾಗಿ, ಒಂದೊಂದು ಮಗು ಕೂಡ ಇದೆ. ಮದುವೆ, ಹೆಂಡತಿ, ಮಕ್ಕಳು ಎಂದ ತಕ್ಷಣ ಮನುಷ್ಯ ಎಷ್ಟೊಂದು ಭಾವಪರವಶನಾಗಬಲ್ಲ ಎಂಬುದು ನನಗೆ ಈಗೀಗ ಸ್ವಲ್ಪ ಅರ್ಥವಾಗುತ್ತಿತ್ತು. ಹೃದಯದಲ್ಲಿ ಅನೇಕ ಪ್ರಶ್ನೆಗಳು ಏಳುತ್ತಿದ್ದವು. ಹಿಂದಿಭಾಷೆ, ಉತ್ತರ ಭಾರತ, ಅವರ ಸಂಸ್ಕೃತಿ, ಹೆಂಡತಿ ಮಕ್ಕಳು, ಕೆಲಸ ಹೀಗೆ ಏನೇನೋ ಯೋಚನೆಗಳು ?

ಭೂವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದ ನಾನು, ಒಂದು ದಿನ ಭೂವಿಜ್ಞಾನಿಯಾಗಬೇಕೆಂಬ ಆಸೆ ಇಟ್ಟುಕೊಂಡಿದ್ದೆ. ಅದು ಈಗ ಕೂಡಿ ಬಂದಿತ್ತಾದರು, ಯಾವುದಕ್ಕೂ ಒಮ್ಮೆ, ಬಿಲಾಯ್‌ಗೆ ಹೋಗಿ ಎಲ್ಲಾ ನೋಡಿ ಬಂದ ಮೇಲೆ ರಾಜೀನಾಮೆ ನೀಡಿದ್ದರೆ ಚೆನ್ನಾಗಿತ್ತೇನೋ ಎನಿಸಿತು.

ದುಗುಡ ತುಂಬಿದ ಹೃದಯಗಳ ಜೊತೆ ಹೊತ್ತು ತಂದಿದ್ದ ಅಲ್ಪ ಸ್ವಲ್ಪ ಲಗೇಜ್ ಸಮೇತ ನಾಗಪುರದ ರೈಲ್ವೆ ನಿಲ್ದಾಣದಲ್ಲಿ ಇಳಿದು ಬಿಟ್ಟೆವು. ಇಬ್ಬರು ಹಲ್ಲುಜ್ಜಿ ಮುಖ ತೊಳದುಕೊಂಡು ಹರಕು ಮುರುಕು ಹಿಂದಿಯಲ್ಲಿ "ಬಿಲಾಯ್" ಗೆ ಹೋಗುವ ರೈಲಿನ ಸಮಯವನ್ನು ಕೇಳಿ ತಿಳಿದುಕೊಂಡೆವು. ಪ್ಲಾಟ್‌ಫಾರಂ ಮೇಲೆಯೇ ತಯಾರಾಗುತ್ತಿದ್ದ ಪೂರಿ, ಸಬ್ಜಿಯನ್ನು ತಿಂದು ಕೈ ತೊಳೆದುಕೊಂಡೆವು.

ಮೀಸಲಾತಿ ಮದ್ರಾಸಿನಿಂದ ನಾಗಪುರದವರೆಗೆ ಮಾತ್ರ ಸಿಕ್ಕಿದ್ದು, ಅಲ್ಲಿಂದ ಮಾಮೂಲಿ ಬೋಗಿಯಲ್ಲಿ ಪ್ರಯಾಣ ಮಾಡಬೇಕಾಗಿತ್ತು. ಆ ಭೋಗಿ ಎಲ್ಲಿ ಬರುತ್ತದೆಂದು ಕೇಳಿ ಸರಿಯಾಗಿ ಅಲ್ಲೆ ನಿಂತು ಕೊಡಿದ್ದೆವು. ನಮಗೆ ಹಿಂದಿ ಗೊತ್ತಿಲ್ಲದಿದ್ದರಿಂದ ಬೇರೆ ಎಲ್ಲಾ ವಿಷಯಗಳನ್ನು ಬದಿಗೊತ್ತಿ ಭೋಗಿಯ ಒಳಕ್ಕೆ ನುಗ್ಗುವುದೊಂದೇ ಗುರಿಯಾಗಿಟ್ಟು ಕೊಂಡಿದ್ದೆವು.

ಕ್ಷಣಗಳು ಉರುಳಿತ್ತಿವೆ. ಆಗಾಗ ಸಮಯವನ್ನು ನೋಡಿಕೊಳ್ಳುತ್ತಿದ್ದೇವೆ. ಆ ನಿಲ್ದಾಣ ... ಆ ಜನ ... ವಾತಾವರಣ, ಬೇರೆ ಒಂದು ದೇಶದಲ್ಲಿ ನಿಂತಂತೆ ಭಾಸವಾಗುತ್ತಿದೆ. ರೈಲು ದೂರದಲ್ಲಿ ಬರುತ್ತಿರುವುದರಿಂದ ಪ್ಲಾಟ್‌ಫಾರಂನಲ್ಲಿ ಒಂದು ರೀತಿಯ ಚಲನೆ ಶುರುವಾಯಿತು. ಎಲ್ಲರೂ ಲಗುಬಗೆಯಿಂದ ತಮ್ಮ ತಮ್ಮ ಸಾಮಾನುಗಳನ್ನು ತೆಗೆದುಕೊಳ್ಳುತ್ತಿದ್ದಂತೆ ಇನ್ನಷ್ಟು ಗದ್ದಲ ಹೆಚ್ಚಾಯಿತು. ಆ ಕಡೆ ಈ ಕಡೆ ಜನ ಓಡಾಡತೊಡಗಿದರು. ರೈಲು ನಿಧಾನವಾಗಿ ಬಂದು ಉಸಿರುಬುಡುತ್ತಾ ನಿಂತುಕೊಂಡಿತು. ನಮ್ಮ ಅದೃಷ್ಟಕ್ಕೆ ಅದು ಪ್ಯಾಸೆಂಜರ್ ಆಗಿದ್ದು ಒಳಕ್ಕೆ ನುಗ್ಗಲು ಕಷ್ಟವಾಗಲಿಲ್ಲ. ಮತ್ತೆ ಸುಮಾರು ಹೊತ್ತು ಕಳೆದ ಮೇಲೆ ರೈಲು ಚಲಿಸತೊಡಗಿತು.

ಮಕ್ಕಳು, ಯುವಕರು, ಯುವತಿಯರು, ಮುದುಕರು, ಮುದುಕಿಯರು ನಡುವೆ ಅಲ್ಲಲ್ಲಿ ಕೆಲವು ಹಳ್ಳಿಯ ಸೊಗಸುಗಾರ್ತಿಯರು ಸಹ ಕುಳಿತಿದ್ದು ಆಗಾಗ ಕಣ್ಣೋಟದಿಂದ ಚುಚ್ಚುತ್ತಿದ್ದಾರೆ. ಎಲ್ಲಿ ಕೇಳಿದರು ಮರಾಠಿ, ಹಿಂದಿಯೇ . . . ನಮಗೇನು ಅರ್ಥವಾಗಲಿಲ್ಲ. ಕೆಲವರು ಚಹ ಕುಡಿಯುತ್ತಿದ್ದರೆ ಇನ್ನೂ ಕೆಲವರು ಹೊಗೆ ಸೊಪ್ಪನ್ನು ಅಂಗೈಯಲ್ಲಿ ಉಜ್ಜಿ ಒಳತುಟಿಯ ಅಡಿಯಲ್ಲಿ ಬಚ್ಚಿಡುತ್ತಿದ್ದಾರೆ. ಕೆಲವರಿಗೆ ಬಾಯಿ ಕೆಂಪಗೆ ಹೊಳೆಯುತ್ತಿದ್ದರೆ,

ಕೆಲವರು ಹೊಗೆಯನ್ನು ಹೇರಳವಾಗಿ ಉಗುಳುತ್ತಿದ್ದಾರೆ. ಒಟ್ಟಿನಲ್ಲಿ "ಮೇರಾ ಭಾರತ್ ಮಹಾನ್" ಎಂಬಂತೆ ಒಂದು ಮಿನಿ ಭಾರತವೇ ಚಲಿಸುತ್ತಿದೆ. ನಾವು ತಲುಪಬೇಕಾಗಿದ್ದ "ದುರ್ಗ್" ಬಗ್ಗೆ ಇನ್ನೂ ಎಷ್ಟು ದೂರ . . . ? ಯಾವಾಗ ಬರುತ್ತದೆ .... ? ರೈಲು ಎಷ್ಟು ಸಮಯ ನಿಲ್ಲುತ್ತದೆ ? ಎಂದು ಕೇಳುತ್ತಿದ್ದಂತೆ "ದುರ್ಗ್" ನಿಲ್ದಾಣ ಬಂದು ಗಬಗಬನೆ ಇಳಿದುಬಿಟ್ಟೆವು. ಅದೊಂದು ಸಣ್ಣ ನಿಲ್ದಾಣ, ಎದುರಿಗೆ ಒಂದು ಹಳೆಯ ಕಾಲದ ಮನೆಯಂತಹ ಕಟ್ಟಡ. ಕಟ್ಟಡದ ಪಕ್ಕದಲ್ಲಿ ನಿಂತಿದ್ದ ಟಿ.ಟಿಗೆ ಟಿಕೆಟ್ ಕೊಟ್ಟು ಹೊರಕ್ಕೆ ಬಂದೆವಷ್ಟೆ .... ಪೇತಲ ಸೈಕಲ್ ರಿಕ್ಷಾಗಳು ಅವುಗಳ ಚಾಲಕರು ಒಂದು ಕಡೆ, ಮೂರು ಚಕ್ರದ ಟೆಂಪೂಗಳು ಅವುಗಳ ಚಾಲಕರು ಇನ್ನೊಂದು ಕಡೆ, ಅವರ ಜೊತೆಗೆ ಆಟೋದವರು ಸೇರಿ ನಮ್ಮನ್ನು ಮುತ್ತಿಕೊಂಡರು. ಎಲ್ಲೋ ತಪ್ಪಿ ಕಸಾಯಿ ಅಂಗಡಿ ಮಧ್ಯೆ ಬಂದು ಬಿಟ್ಟೆವೇನೋ ಎಂಬಂತೆ ಕಕ್ಕಾಬಿಕ್ಕಿಯಾಗಿಬಿಟ್ಟೆವು.

"ಆಯಿಯೆ ಸಾಬ್. ಕಹಾ ಜಾನಾ .. ಇದರ್ ಆಯಿಯೇ .... ಅರರೇ ಇದರ್ ಆಯಿಯೇ" ... ಒಂದೇ ಕೂಗಾಟ. ನಮ್ಮ ಸ್ಥಿತಿಯನ್ನು ಕಂಡುಕೊಂಡ ಅವರು, ನಮ್ಮನ್ನು ಒಳ್ಳೆ ಬಕರಾಗಳೇ ಎಂದುಕೊಂಡಿರಬೇಕು. ಒಬ್ಬ ಹತ್ತಿರಬಂದು,

"ಕಹಾ ಜಾನಾ ಬೋಲಿಯೇ ?" ಎಂದ.

"ಬಿಲಾಯ್" ಎಂದೆ.

"ಬಿಲಾಯ್ ಮೇ ಕಹಾ ಜಾನಾ ?"

ವಿಳಾಸ ಓದಿ ಹೇಳಿದೆವು.

" ಇಲ್ಲ, ಅಲ್ಲಿಗೆ ಯಾರೂ ಹೋಗುವುದಿಲ್ಲ. ಇದು ದುರ್ಗ್ ನಿಲ್ದಾಣ, ಇಲ್ಲಿಂದ ಬಸ್ಸಿನಲ್ಲಿ ಹೋಗಬೇಕು" ಎಂದ.

ನಾವು, ಹಣ ಸ್ವಲ್ಪ ಜಾಸ್ತಿ ಕೊಡುತ್ತೇವೆಂದು ಆಸೆ ತೋರಿಸಿ ಒಬ್ಬ ಆಟೋದವನನ್ನು ಕುದುರಿಸಿಕೊಂಡೆವು. ಸುಮಾರು ದೂರ ಹೋದ ಮೇಲೆ ನಮ್ಮನ್ನು ಇಳಿಸಿದ ಆಟೋದವನು ಇಲ್ಲಿಂದ ಮುಂದಕ್ಕೆ ಹೋಗುವುದಿಲ್ಲವೆಂದು ತಿಳಿಸಿ ಹಣ ತೆಗೆದುಕೊಂಡು ಹೊರಟು ಬಿಟ್ಟ.

ಸ್ವಲ್ಪ ಸುಮಾರಾಗಿ ಬಟ್ಟೆ ಧರಿಸಿದವರನ್ನೆಲ್ಲ ಇಂಗ್ಲೀಷ್ ಭಾಷೆಯಲ್ಲಿ ಕೇಳುತ್ತಾ ಕೇಳುತ್ತಾ, ಬೆವರು ಸುರಿಸುತ್ತಾ ಕಾಲೆಳೆದುಕೊಂಡು ನಡೆಯ ತೊಡಗಿದೆವು. ಎಷ್ಟು ದೂರ ನಡೆದರೂ ನಾವು ತಲುಪಬೇಕಿದ್ದ ಸ್ಥಳ ದೂರವಾಗುತ್ತಲೇ ಹೋಗುತ್ತಿತ್ತು. ಅಗಲವಾದ ರಸ್ತೆಗಳ ಉದ್ದಕ್ಕೂ ಇರುವ "ಸೇಲ್" ಕಂಪೆನಿಯ ನೀಟಾದ ಕ್ವಾರ್ಟರ್ಸ್‌ಗಳ ಮುಂದೆ ಸುಂದರವಾದ

ಹೂದೋಟಗಳನ್ನು ಬೆಳೆಸಿದ್ದಾರೆ. ಈ ಮನೆಗಳ ಮಧ್ಯೆ ನನಗೂ ಒಂದು ಮನೆ ಸಿಗಬಹುದೆ ಎನ್ನುವ ಆಸೆ ನನ್ನ ಮನದಲ್ಲಿ ಒಂದು ಕ್ಷಣ ಮಿಂಚಿ ಮಾಯವಾಯಿತು.

ಹಾಗೂ ಹೀಗೂ "ಸೇಲ್" ಕಂಪೆನಿಯ ಆಡಳಿತ ಕಛೇರಿ ತಲುಪಿದೆವು. ನಮಗೆ ಮುಂದೆಯೇ ಹತ್ತಾರು ಟ್ರೈನಿಗಳು ಅಲ್ಲಿಗೆ ಆಗಲೇ ಧಾವಿಸಿದ್ದರು. ನಮ್ಮಿಬ್ಬರ ಹೆಸರುಗಳನ್ನು ನೊಂದಾಯಿಸಿದ ಮೇಲೆ ಹತ್ತಿರದ ಬ್ಯಾಚುಲರ್ ಹಾಸ್ಟೆಲ್‌ಗೆ ಹೋಗುವಂತೆ ತಿಳಿಸಿದರು. ಅಲ್ಲಿಂದ ನೇರವಾಗಿ ಹಾಸ್ಟೆಲ್ ತಲುಪಿದೆವು. ಅಲ್ಲಿಗೆ ಹೋದ ತಕ್ಷಣ ಮೂವರು ಟ್ರೈನಿಗಳಿಗೆ ಒಂದೊಂದು ದೊಡ್ಡದಾದ ಕೊಠಡಿ ತೋರಿಸಿದರು. ನಮ್ಮ ಜೊತೆಗೆ ರಾಜಾ ಕೃಷ್ಣನ್ ಸೇರಿಕೊಂಡ. ತಮಿಳು ನಾಡಿನ ರಾಜಾ ಕೃಷ್ಣನ್ ಕೂಡ ಒಂದು ಮಗುವಿನ ತಂದೆಯಾಗಿದ್ದದ್ದು ಇನ್ನೊಂದು ವಿಶೇಷ. ಆ ಹಾಸ್ಟೆಲ್ ಮತ್ತು ಅದರ ಕೋಣೆಗಳನ್ನು ನೋಡಿದ ತಕ್ಷಣವೇ ನನಗೇಕೋ ಗುಮಾನಿ ಎದ್ದಿತು. ಸಧ್ಯಕ್ಕೆ ಹಾಸ್ಟೆಲ್‌ನಲ್ಲಿ ಮೆಸ್ ಪ್ರಾರಂಭವಾಗಿಲ್ಲದ ಕಾರಣ ಸುಮಾರು ದೂರ ನಡೆದು ಹೋಗಿ ಕಂಪೆನಿಯ ಕಾರ್ಮಿಕರ ಕ್ಯಾಂಟಿನ್‌ನಲ್ಲಿ ತಟ್ಟೆ ಊಟ ಮಾಡುತ್ತಿದ್ದೆವು. ತಟ್ಟೆ ಊಟ ಏನೇನೂ ಸಾಕಾಗುತ್ತಿರಲಿಲ್ಲ.

ಕೆಜಿಎಫ್‌ನ ಜೀವವಿಮೆಯಲ್ಲಿದ್ದಾಗ ಮನೆ ಊಟಮಾಡುತ್ತಿದ್ದ ನಮಗೆ ಈ ಸ್ಥಿತಿ ಒದಗಿದ್ದಕ್ಕೆ ಬಹಳ ಪಶ್ಚಾತ್ತಾಪ ಪಡತೊಡಗಿದೆವು. ಎರಡನೆಯ ದಿನ ಎಲ್ಲರನ್ನೂ ವೈದ್ಯಕೀಯ ಪರೀಕ್ಷೆಗಾಗಿ ಕಂಪೆನಿಯ ಆಸ್ಪತ್ರೆಗೆ ಬರುವಂತೆ ತಿಳಿಸಲಾಯಿತು. ನಾವು ಮೂವರು ನಡೆದೇ ಕಂಪೆನಿಯ ಆಸ್ಪತ್ರೆ ತಲುಪಿದೆವು. ವಿಶೇಷ ವೈದ್ಯಾಧಿಕಾರಿಗಳು ಮೆಡಿಕಲ್ ಚೆಕಪ್‌ಗಿಂತ ತರಲೆ ಪ್ರಶ್ನೆಗಳನ್ನೆ ಜಾಸ್ತಿ ಕೇಳುತ್ತಿದ್ದರು.

ಡಾ. ಸವರ್ಣಕರ್ ಎಂಬ ವೈದ್ಯರು "See what is the necessity of your appointment ? Absolutely there is no necessity to this company. Come on tell me what you people will be going to do . . the company needs non of your service ..." ಹೀಗೆ ಹೇಳುವಾಗ ಅವರ ಮುಖದ ಮೇಲೆ ಕೆಸರು ಎರಚಿದಂತಿತ್ತು.

ಒಟ್ಟಿನಲ್ಲಿ ಅವರ ಪ್ರಶ್ನೆಗಳ ಹಿಂದಿನ ಸಾರಾಂಶ, ನಾವು ಈ ಕೆಲಸಕ್ಕೆ ನಾಲಾಯಕ್ಕು ಎನ್ನುವಂತಿತ್ತು. ನನಗೆ ತಲೆ ಗಿರ್ರನೆ ತಿರುಗುವಂತಾಯಿತು. ಇವನು ಎಲ್ಲಾದರೂ ಒಬ್ಬನೆ ಕತ್ತಲಲ್ಲಿ ಸಿಕ್ಕಿದರೆ ಕತ್ತು ಹಿಸುಕಿ ಸಾಯಿಸಬೇಕೆನಿಸಿತು. ಜೀವ ವಿಮೆ ಕೆಲಸಕ್ಕೆ ರಾಜೀನಾಮೆ ಬೇರೆ ಕೊಟ್ಟು ಬಂದಿದ್ದೇನೆ. ಈಗ ಏನು ಮಾಡಬೇಕೆಂಬುದು ತೋಚದೆ ಕಂಗಾಲಾಗಿ ಬಿಟ್ಟೆ. ಇದಕ್ಕೂ ಸಾಲದೆಂಬಂದೆ ಎಲ್ಲಾ ಡಾಕ್ಟರುಗಳೂ ಒಂದಲ್ಲಾ ಒಂದು ರೀತಿಯಲ್ಲಿ ಒಬ್ಬರಿಗೆ

ಕಣ್ಣು ನೋಟ ಸರಿ ಇಲ್ಲ, ಇನ್ನೊಬ್ಬರಿಗೆ ಬಣ್ಣದ ಕುರುಡುತನವಿದೆ, ಎದೆ ಉಬ್ಬುಸವಿದೆ, ರಕ್ತ ಸರಿಯಾದ ಪ್ರಮಾಣವಲ್ಲಲ್ಲ, ಕೆಲವರ ಕಿವಿಗಳು ಸೂಕ್ಷ್ಮವಾಗಿಲ್ಲ, ಕೆಲವರ ಎತ್ತರ ಮತ್ತು ತೂಕ ಕಡಿಮೆ ಇದೆ, ಹೀಗೆ ಏನೇನೋ ಹೇಳುತ್ತಾ ಯಾರಿಗೂ ಸಂಪೂರ್ಣವಾದ ವೈದ್ಯಕೀಯ ಪ್ರಮಾಣ ಪತ್ರ ನೀಡಲಿಲ್ಲ. ಇದರಿಂದ ಇನ್ನಷ್ಟು ಗಾಬರಿಯಾದ ನಾವು ತ್ರಿಶಂಕು ಸ್ಥಿತಿಯನ್ನು ಅನುಭವಿಸತೊಡಗಿದೆವು.

ನೇಮಕ ಪತ್ರದಲ್ಲಿ ಎಲ್ಲೂ ವೈದ್ಯಾಧಿಕಾರಿಯ ಪ್ರಮಾಣ ಪತ್ರದ ಬಗ್ಗೆ ಉಲ್ಲೇಖವಿರಲಿಲ್ಲ. ಎಲ್ಲಾ ಕಂಪೆನಿಯವರು ಮತ್ತು ಸರ್ಕಾರದವರು ನೇಮಕ ಮಾಡಿಕೊಳ್ಳುವುದಕ್ಕಿಂತ ಮುಂಚೆಯೇ ವೈದ್ಯಕೀಯ ಪರೀಕ್ಷೆ ನಡೆಸಿದರೆ ಇವರು ನೇಮಕ ಪತ್ರ ಕಳುಹಿಸಿದ ಮೇಲೆ ಈ ರೀತಿ ತೊಂದರೆ ಮಾಡುವುದನ್ನು ನೋಡಿದರೆ ಎಲ್ಲಾ ರೀತಿಯ ಗುಮಾನಿಯು ಶುರುವಾಯಿತು.

ಒಂದು ದಿನ, ಎರಡು ದಿನ, ಮೂರುದಿನ, ಮಧ್ಯೆಯಲ್ಲಿ ಭಾನುವಾರ ಹೀಗೆ ಏಳು ದಿನಗಳು ಕಳೆದವು. ವೈದ್ಯಾಧಿಕಾರಿಗಳ ಪರೀಕ್ಷೆಗಳು ಇನ್ನೂ ನಡೆಯುತ್ತಲೇ ಇದ್ದವು. ಒಂದು ವಾರದ ನಂತರ ಹಾಗೂ ಹೀಗೂ ಬಂದಿದ್ದ ಟ್ರೈನಿಗಳಲ್ಲಿ ಮುಕ್ಕಾಲು ಪಾಲು ಆಯ್ಕೆಯಾದರು. ಅಳಿದುಳಿದ ಟ್ರೈನಿಗಳ ಪರದಾಟ ಹೇಳತೀರದು, ಅದೂ ನನ್ನ ತರಹ ರಾಜೀನಾಮೆ ನೀಡಿ ಬಂದವರದು. ಆಯ್ಕೆ ಆಗದವರ ಪಟ್ಟಿಯಲ್ಲಿ ನಾನೂ ಇದ್ದೆ. ಮೂರು ದಿನಗಳ ಹಿಂದೆ ಬಲಗೈ ಮೇಲೆ ಚುಚ್ಚು ಮದ್ದು ಚುಚ್ಚಿದ ಸ್ಥಳ ಇನ್ನೂ ಉಬ್ಬಿಕೊಂಡಿದೆ. ಒಬ್ಬ ವಾರ್ಡ್‌ಬಾಯ್ ಇದು ಕ್ಷಯ ರೋಗದ ಲಕ್ಷಣವಾಗಿದ್ದು, ನೀನು ಆಯ್ಕೆಯಾಗುವುದು ಸಂಶಯವೇ ಎಂದು ಹೇಳಿದ. (ಈ ಪ್ರಯೋಗ ನಡೆದು ಹದಿನೈದು ವರ್ಷಗಳೇ ಕಳೆದುಹೋದವು, ಆದರೆ ಕ್ಷಯರೋಗದ ಲಕ್ಷಣ ಇನ್ನೂ ಕಾಣಿಸಿಕೊಳ್ಳಲಿಲ್ಲ) ಏನು ಮಾಡಬೇಕೋ ಒಂದೂ ಅರ್ಥವಾಗಲಿಲ್ಲ. ಮನಸ್ಸೆಲ್ಲಾ ಖಾಲಿ ಖಾಲಿ ಕೆಲವೊಂದು ಸಲ ದುಃಖ ಉಮ್ಮಳಿಸಿ ಬರುತ್ತಿತ್ತು. ಆದರೂ ಯಾರಿಗೂ ತೋರಿಸಗೊಡದೆ ಒಬ್ಬನೇ ನೋವು ಅನುಭವಿಸುತ್ತಿದ್ದೆ. ರಕ್ತ ಪರೀಕ್ಷೆ ಮಾಡಬೇಕೆಂದು ಸುಮಾರು ಮುಕ್ಕಾಲು ಟೆಸ್ಟ್‌ಟ್ಯೂಬಿನಷ್ಟು ರಕ್ತವನ್ನು ಎಡ ಒಳ ಮೊಳಕೈಯಿಂದ ಎಳೆದುಕೊಂಡಿದ್ದರಿಂದ ಕೈ ಮೇಲಕ್ಕೆತ್ತಲಾಗದೆ ನೋವಾಗುತ್ತಿತ್ತು.

ನಾನು, ಇಳಂಗೋವನ್ ಹತ್ತಿರದ ಜೀವವಿಮೆ ಕಛೇರಿಗೆ ಹೋಗಿ ಯೂನಿಯನ್ ಕಾರ್ಯದರ್ಶಿಯನ್ನು ಸಂಧಿಸಿ, ರಾಜೀನಾಮೆ ಕೊಟ್ಟು ಒಂದು ವಾರವಾಗಿದೆ ಮತ್ತೆ ವಾಪಸ್ ಪಡೆಯಲಾಗುತ್ತದೆಯ ಎಂದು ವಿಚಾರಿಸಿದೆವು. ನಮ್ಮ ಕತೆಯನ್ನು ಕೇಳಿದ ಅವನು ಬೇಗಾಗಿ ಸಾಧ್ಯವಾದರೆ ತಕ್ಷಣವೇ ಪ್ರಯತ್ನಿಸಿ, ರಾಜೀನಾಮೆ ಪತ್ರ ನಿಮ್ಮ ಬ್ರಾಂಚಿನಲ್ಲೇ ಇದ್ದರೆ ಸಾಧ್ಯವಾಗಬಹುದು, ಒಂದು ವೇಳೆ ಡಿವಿಜಿನಲ್ ಕಛೇರಿಗೆ ಕಳುಹಿಸಿಬಿಟ್ಟಿದ್ದರೆ ಏನೂ ಪ್ರಯೋಜನವಾಗುವುದಿಲ್ಲ ಎಂದ. ರಾಜೀನಾಮೆ ಪತ್ರವನ್ನು ಒಂದು ವಾರ ಇಟ್ಟಿರಲಿಕ್ಕೆ ಸಾಧ್ಯವೇ

ಇಲ್ಲವೆಂದು ನಾವೇ ಊಹಿಸಿಕೊಂಡು ಸುಮ್ಮನಾಗಿಬಿಟ್ಟೆವು. ಅಷ್ಟೇ ಅಲ್ಲ, ಬರುವಾಗ ಜೀವವಿಮೆ ಸಿಬ್ಬಂದಿಯಿಂದ ಭರ್ಜರಿಯಾಗಿ ಬೀಳ್ಕೊಡಿಗೆ ಬೇರೆ ಪಡೆದಿದ್ದ ನಾವು ಮತ್ತೆ ಹೋಗಿ ಕೆಲಸ ಕೊಡಿ ಎಂದು ಯಾವ ಮುಖವಿಟ್ಟುಕೊಂಡು ಕೇಳುವುದು ?

ಮಾರನೆಯ ದಿನ ಇಳಂಗೋವನ್ ಮತ್ತು ರಾಜಾಕೃಷ್ಣನ್ ವೈದ್ಯಾಧಿಕಾರಿಯ ಪ್ರಮಾಣ ಪತ್ರ ಪಡೆದಿದ್ದು, ಈಗ ನಾನು ಮಾತ್ರ ಉಳಿದುಬಿಟ್ಟಿದ್ದೆ. ಆ ರಾತ್ರಿ ಮೂವರು ಹಾಸ್ಟೆಲ್ ಕೋಣೆಯಲ್ಲಿ ಮಲಗಿದ್ದೇವೆ. ಸುಮಾರು ಹೊತ್ತಾದರು ನಿದ್ದೆ ಬಂದಿರಲಿಲ್ಲ. ತಂಪಾಗಿ ಬೀಸುತ್ತಿದ್ದ ಗಾಳಿ, ಹೋಳಿ ಹಬ್ಬದ ಹಾಡುಗಳನ್ನು ಸರಾಗವಾಗಿ ಸುರುಳಿ ಸುರುಳಿಯಾಗಿ ಹೊತ್ತು ಸಾಗುತ್ತಿದೆ. ಹುಣ್ಣಿಮೆಯ ಬೆಳಕಿನಲ್ಲಿ, ಯುವಕರು ಬೆಂಕಿಯ ಸುತ್ತ ಢೋಲು ಮತ್ತು ಕಿಂಜರಿಯನ್ನು ಬಾರಿಸುತ್ತ ಸರಾಗವಾಗಿ ಕುಣಿಯುತ್ತ ಹಾಡುತ್ತಿದ್ದಾರೆ. ನಾವು ಬಂದಾಗಿನಿಂದ ಇದು ನಡೆಯುತ್ತಲೇ ಇದೆ.

ಇದ್ದಕ್ಕಿದ್ದಂತೆ ಕತ್ತಲಲ್ಲಿ ಎದ್ದು ಕುಳಿತುಕೊಂಡ ರಾಜಾಕೃಷ್ಣನ್

"ಸಾರ್, ಒಂದು ಕೇಳ್ವಿ ಕೇಕ್ಕರೆ ತಪ್ಪಾನೆನಿಕಾದಿಂಗು . . . ನೀಂಗು ರಂಡು ಪೇರು ಬುದ್ಧಿಶಾಲಿಂಗು ಇಂಡ ಮಾದರಿ ಮಡಯತನಮಾನ ಪ್ಲಾನ್ ಎಪ್ಪಿಡಿ ಪಣ್ಣಿಂಗು . . .?" ಎಂದ.

ಬಹುಶಃ ಈ ಪ್ರಶ್ನೆಗೆ ಕತ್ತಲೂ ಕೂಡ ಕಣ್ಣುಬ್ಬುಗಳೇರಿಸಿ ನಕ್ಕಿರಬೇಕು.

ಮುಂದಿನ ದಿನಗಳಲ್ಲಿ ಇನ್ನಷ್ಟು ನಿಗೂಢಗಳು ಹೊರಬಿದ್ದವು. ಎಲ್ಲಾ ಭೂ ಶಾಸ್ತ್ರಜ್ಞರು ಪೂರ್ತಿ ವರ್ಷ "ಸೇಲ್" ಕಂಪೆನಿಗೆ ಸಂಬಂಧ ಪಟ್ಟ ಅದುರು ಮತ್ತು ಕಲ್ಲಿದ್ದಲು ಗಣಿಗಳಿರುವ ಪ್ರದೇಶಗಳಲ್ಲಿ ವಾಸಿಸಬೇಕಾಗಿದ್ದು, ಎಲ್ಲಾ "ಸೇಲ್" ಕಂಪೆನಿಗಳು ಉತ್ತರ ಭಾರತದಲ್ಲೇ ಇದ್ದು ನಾನು ದಕ್ಷಿಣ ಕಡೆಗೆ ಬರುವುದಕ್ಕೆ ಅವಕಾಶವೇ ಇರಲಿಲ್ಲ. ಇದೆಲ್ಲಾ ಯೋಚಿಸುತ್ತಾ ಹೋದಂತೆ ನನ್ನ ತಲೆ ಸಿಡಿದು ಹೋಗುವಂತೆ ಭಾಸವಾಗುತಿತ್ತು.

ಇದರ ನಡುವೆ ಸುಶೀಲ ಮಗುವಿನ ಮೊದಲು ವರ್ಷದ ಹುಟ್ಟು ಹಬ್ಬವನ್ನು ಆಚರಿಸಿದ್ದಾಗಿ ಮತ್ತು ಅವನಿಗೆ ಆಗಾಗ ಜ್ವರ ಬೇರೆ ಬರುತ್ತಿದೆ ಎಂದು ಪತ್ರವನ್ನು ಬರೆದಿದ್ದಳು.

ಒಂದು ದಿನ ಬೆಳಿಗ್ಗೆ ಇಳಂಗೋವನ್ ಮತ್ತು ರಾಜಾಕೃಷ್ಣನ್‌ಗೆ "ಕೆಜಿಎಫ್‌ಗೆ ಹೋಗುತ್ತಿದ್ದೇನೆ" ಎಂದು ತಿಳಿಸಿದೆ. ಹೌಹಾರಿದ ಇಬ್ಬರೂ

"ಈ ಕೆಲಸಾನು ಬಿಟ್ಹೋಗುತ್ತಿದ್ದೀಯಾ" ಎಂದರು.

"ಹೌದು ಈ ದರಿದ್ರ ಕೆಲಸ ಸುಮ್ಮನೆ ಕೊಟ್ಟರೂ ಬೇಡ" ಎಂದು ಹೇಳಿ "ದುರ್ಗ್ ರೈಲ್ವೆ ನಿಲ್ದಾಣಕ್ಕೆ ಬಂದು ರೈಲಿನಲ್ಲಿ ಕುಳಿತುಬಿಟ್ಟೆ. ಹಿಂದೆಯೇ ಬಂದ ಇಬ್ಬರೂ ಸುಮಾರು

ಹೊತ್ತು ನನ್ನನ್ನು ಹೋಗದಂತೆ ಮನ ಒಲಿಸಿ ನೋಡಿದರು. ಆದರೆ ನಾನು ಮಾತ್ರ ನಿರ್ಧಾರ ಬದಲಿಸಲಿಲ್ಲ.

ರೈಲು ನಿದಾನವಾಗಿ ಚಲಿಸಲಾರದೆ ಚಲಿಸತೊಡಗಿತು. ಇಬ್ಬರೂ ಭಾರವಾದ ಹೃದಯಗಳನ್ನು ಹೊತ್ತು ಗಾಳಿಯಲ್ಲಿ ಕೈ ಬೀಸಿದರು. ನನ್ನ ಕಣ್ಣುಗಳಲ್ಲಿ ಹನಿ ಕೂಡಿಕೊಳ್ಳುತ್ತಿತ್ತು. ಮುಖಕ್ಕೆ ಅಡ್ಡವಾಗಿ ಕೈಗಳನ್ನಿಟ್ಟುಕೊಂಡೆ.

ಒಂದು ಹಗಲು, ಎರಡು ರಾತ್ರಿ "ದುರ್ಗ್" ನಿಂದ ಕೆಜಿಎಫ್‌ವರೆಗೂ ಯೋಚನೆಗಳು ನನ್ನ ಮನಸ್ಸಿನಲ್ಲಿ ಹಾದು ಹೋಗುತ್ತಿದ್ದವು. ನಾನು ಸೇರುವ ದಡವಾದರು ಯಾವುದು .... ? ಯಾವಾಗ ... ? ಹೇಗೆ ? ಒಂದೂ ಅರ್ಥವಾಗಲಿಲ್ಲ. ಒಬ್ಬನೇ ಆಗಿದ್ದರೆ ಎಲ್ಲಾದರೂ ಹೋಗಿಬಿಡಬಹುದಿತ್ತು. ಹೇಗಾದರೂ ಬದುಕಬಹುದಿತ್ತು. ಆದರೆ ಹೆಂಡತಿ, ಮಗು . . . ? ಇದಕ್ಕೆಲ್ಲಕ್ಕಿಂತ ಮುಖ್ಯವಾಗಿ ಯಾವ ರೀತಿಯ ಆರ್ಥಿಕ ಆಧಾರವೂ ಇರಲಿಲ್ಲ. ತಂದೆ ತಾಯಿ ಹಳ್ಳಿಯಲ್ಲಿದ್ದರು.

ಈಗ ಸದ್ಯಕ್ಕೆ ಇರುವ ಒಂದೇ ಆಧಾರವೆಂದರೆ ಸುಶೀಲಳ ಮನೆ. ಎಷ್ಟು ದಿನಗಳು . . . ? ರಾತ್ರಿ ಸುಮಾರು ಒಂದು ಗಂಟೆ ಇರಬಹುದು ಮೃದುವಾಗಿ ಬಾಗಿಲು ತಟ್ಟಿದೆ, ಹೃದಯವನ್ನು ತಾನೇ ತಟ್ಟಿಕೊಂಡಂತಾಗುತ್ತಿತ್ತು. ಯಾರು ? ಅತ್ತೆ ಪ್ರಶ್ನಿಸಿದರು.

"ಅಕ್ಕಯ್ಯ ನಾನು" (ಅತ್ತೆಯನ್ನು ಅಕ್ಕಯ್ಯ ಎಂದೇ ಕರೆಯುತ್ತಿದ್ದೆ)

"ವೆಂಕಟಸ್ವಾಮಿ ಬಂದು ಬಿಟ್ಟ, ಬಾಗಿಲು ತೆಗೆಯಿರಿ, ಬಾಗಿಲು ತೆಗೆಯಿರಿ" ಎಂದರು. ಬಾಗಿಲು ತೆಗೆದುಕೊಂಡಿತು. ಕೈಯಲ್ಲಿದ್ದ ಸೂಟುಕೇಸನ್ನು ಕೆಳಗಿಟ್ಟು ತಲೆ ತಗ್ಗಿಸಿಕೊಂಡು ಬೂಟಿನ ಲೇಸುಗಳನ್ನು ಬಿಚ್ಚತೊಡಗಿದೆ.

"ಯಾಕಪ್ಪ ಬಂದುಬಿಟ್ಟೆ ...?"

"ಬಂದು ಬಿಟ್ಟೆ."

"ಕೆಲಸ... ?"

"ಕೆಲಸ ಬಿಟ್ಟೆ" ಎಂದೆ. ಮಾವ ಎಚ್ಚರವಾಗಿದ್ದರೂ ನಿದ್ದೆ ಮಾಡುತ್ತಿರುವಂತೆ ಹಾಗೆ ಮಲಗಿದ್ದರು. ಸುಶೀಲ ಮಲಗಿದ್ದ ಕೊಠಡಿ ತಲುಪಿದೆ. ಆಶ್ಚರ್ಯದ ಜೊತೆಗೆ ಬೆರಗು ಕಣ್ಣುಗಳಿಂದ ಕನಸಿನಲ್ಲಿ ನೋಡುತ್ತಿರುವಂತೆ ಸುಶೀಲ ನೋಡುತ್ತಿದ್ದಳು. ಪಕ್ಕದಲ್ಲೇ ತೊಟ್ಟಿಲಲ್ಲಿ ಸೊಳ್ಳೆ ಪರದೆ ಒಳಗೆ ಮಗು ಎಲ್ಲವನ್ನು ಮರೆತು ನಿದ್ದೆ ಮಾಡುತ್ತಿತ್ತು. ಸನ್ನಿವೇಶ ತನ್ನ ಹಿಡಿತವನ್ನು ಕಳೆದು ಕೊಂಡಂತೆ ನನ್ನಲ್ಲಿನ ದುಗುಡ ಸ್ವಲ್ಪ ಸಡಿಲವಾಯಿತು. ರಾತ್ರಿ

ಬೆಳಗಾಯಿತು.

ನಾನು ಕೆಜಿಎಫ್ ಬಿಟ್ಟ ಮೇಲೆ ನಮ್ಮ ಮಾವ ಜೀವವಿಮೆ ವ್ಯವಸ್ಥಾಪಕರನ್ನು ಸಂಧಿಸಿ ರಾಜೀನಾಮೆ ಹಿಂತೆಗೆದುಕೊಳ್ಳುವ ಬಗ್ಗೆ ವಿಚಾರಿಸಿದಾಗ ಸಾಧ್ಯವಾಗುವುದಿಲ್ಲ ಎಂದು ತಿಳಿಸಿದರಂತೆ ಒಂದು ತಿಂಗಳಾಯಿತು... ಎರಡು ತಿಂಗಳಾಯಿತು. ... ಮಧ್ಯದಲ್ಲಿ ದಿನಪತ್ರಿಕೆ, ಉದ್ಯೋಗ ವಾರ್ತಾ ಪತ್ರಿಕೆಗಳನ್ನು ಓದುತ್ತಾ ಕಂಡ ಕಂಡ ಉದ್ಯೋಗಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಾ ಪರೀಕ್ಷೆಗಳನ್ನು ಬರೆಯುತ್ತಾ ಹೋದೆ. ಜೀವವಿಮೆಯಲ್ಲಿದ್ದಾಗಲೂ ಕೆಲವು ಪರೀಕ್ಷೆಗಳನ್ನು ಬರೆದು ಒಂದೆರಡು ಸಂದರ್ಶನಗಳನ್ನು ಮುಗಿಸಿದ್ದೆ. ಕೆಲವು ಪತ್ರಿಕೆಗಳಲ್ಲಿ ಜಾಹಿರಾತು ಬಂದ ಮೇಲೆ ಆರುತಿಂಗಳಿಗೆ ಪರೀಕ್ಷೆ ನಡೆದು, ಹನ್ನೆರಡು ತಿಂಗಳಿಗೆ ಫಲಿತಾಂಶ ಬಂದು ಉದ್ಯೋಗ ಬರುವ ಹೊತ್ತಿಗೆ ಕೆಲವರು ಮುದುಕರಾಗಿಬಿಡುತ್ತಿದ್ದರು.

ಎಲ್ಲಿ ಹೋದರೂ, ಯಾರ ಜೊತೆ ಮಾತನಾಡಿದರೂ ನನ್ನ ಕೆಲಸದ ಬಗ್ಗೆಯೇ ವಿಚಾರಿಸುತ್ತಿದ್ದರು. ನನಗೆ ಗೊತ್ತಾದವರು ಎದುರಾದ ತಕ್ಷಣ ನೋಡಿಯೂ ನೋಡದಂತೆ ತಪ್ಪಿಸಿಕೊಂಡು ಬಿಡುತ್ತಿದ್ದೆ. ಆದಷ್ಟು ಒಬ್ಬನೇ ಇರುವುದಕ್ಕೆ ಪ್ರಯತ್ನಪಡುತ್ತಿದ್ದೆ.

ದೇವರುಗಳ ಮೇಲೆ ವಿಶ್ವಾಸವಿಲ್ಲದ ನಾನು ಆಗಾಗ ಯಾವ್ಯಾವುದೋ ಹೆಸರಿಲ್ಲದ, ಹೆಸರಿದ್ದ ದೇವರುಗಳನ್ನು ನೆನೆಯತೊಡಗಿದೆ. ಒಟ್ಟಿನಲ್ಲಿ ಯಾವುದೋ ಒಂದು ಕೆಲಸ ಸಿಗಬಹುದೆಂಬ ಮಹದಾಸೆಯನ್ನು ತುಂಬಿಕೊಂಡು ದಿನಗಳನ್ನ ತಳ್ಳುತ್ತಿದ್ದೆ. ಆದರೆ ಎಷ್ಟು ದಿನಗಳು ಎಂಬುವುದೇ ದೊಡ್ಡ ಪ್ರಶ್ನೆಯಾಗಿತ್ತು.

* * *

## 2 ಹೊಸ ಉದ್ಯೋಗ ಲಕೋಟೆಯೊತ್ತು ಲಖನೌಗೆ

ಒಂದು ದಿನ ಇದ್ದಕ್ಕಿದ್ದಂತೆ ಅಂಚೆಯವನು ಒಂದು ಲಕೋಟೆಯನ್ನು ತಂದುಕೊಟ್ಟ. ಕೈಗಳಿಗೆ ಹೃದಯ ಬಂದಂತೆ ಲಕೋಟೆಯನ್ನು ಹೂವಿನಂತೆ ಬಿಚ್ಚಿದೆ. ಯುಪಿಎಸ್‌ಸಿ, ಡಾಲ್ ಹೌಸ್, ನವದೆಹಲಿ, ದಿನಾಂಕ, ವಿಳಾಸ, ರಿ. ಸಂಖ್ಯೆ 1194. ನೀವು ಯುಪಿಎಸ್‌ಸಿ ಮುಖಾಂತರ ಭೂಶಾಸ್ತ್ರಜ್ಞರಾಗಿ ಆಯ್ಕೆಯಾಗಿದ್ದೀರೆಂದು ತಿಳಿಸಲು ಆಶಿಸುತ್ತೇವೆ. ಶೀಘ್ರವೇ ನೇಮಕ ಪತ್ರ ನಿಮಗೆ ತಲುಪಲಿದ್ದು, ತಯಾರಾಗಿರುವುದು. ತಕ್ಷಣವೇ ಜಾತಿಯ ಪ್ರಮಾಣ ಪತ್ರವನ್ನು ಕಳುಹಿಸಿಕೊಡುವುದು.

ಮೈಯೆಲ್ಲಾ ಜಮ್ಮೆಂದು ಪುಳಕಗೊಂಡಿತು. ತಕ್ಷಣವೇ ನೋಂದಣಿ ಅಂಚೆಯ ಮುಖಾಂತರ ಒಂದು ಮನವಿ ಪತ್ರವನ್ನು ಬರೆದುಕೊಂಡೆ. ಒಂದು, ಎರಡು, ಮೂರು ... ಸರಿಯಾಗಿ ಮೂವತ್ತು ದಿನಗಳಿಗೆ ನೇಮಕ ಪತ್ರ ನೋಂದಣಿ ಅಂಚೆಯ ಮುಖಾಂತರ ಬಂದೇಬಿಟ್ಟಿತು.

ನನಗಿಂತ ಒಂದು ವರ್ಷ ಸೀನಿಯರ್ ಆದ ಧರ್ಮನ್ ಲಖನೌದಲ್ಲಿ ಇರುವುದಾಗಿ ತಿಳಿದು ಒಂದು ಸಣ್ಣ ಮನೆಯನ್ನು ಬಾಡಿಗೆಗೆ ಹಿಡಿಯುವಂತೆ ತಿಳಿಸಿ ಪತ್ರ ಬರೆದೆ. ಮೂರು ವಾರಗಳಾದರೂ ಉತ್ತರ ಬರಲಿಲ್ಲ.

ಮದ್ರಾಸಿನ ಮುಖಾಂತರ ಜಿ.ಟಿ. ಎಕ್ಸ್‌ಪ್ರೆಸ್‌ನಲ್ಲಿ ಪ್ರಯಾಣ ಪ್ರಾರಂಭಿಸಿದ ನಾನು ಮೊ ಮೊದಲಿಗೆ ಸಂಪೂರ್ಣವಾಗಿ ಒಬ್ಬನೇ ಉತ್ತರ ಭಾರತದ ಕಡೆಗೆ ಪ್ರಯಾಣ ಮಾಡುತ್ತಿದ್ದು ಎಲ್ಲವನ್ನೂ ಬಹಳ ಸೂಕ್ಷ್ಮವಾಗಿ ನೋಡತೊಡಗಿದೆ. ಮದ್ರಾಸು, ಗುಂಟೂರು, ನೆಲ್ಲೂರು, ವಿಜಯವಾಡ, ಸಿರ್‌ಪುರ್ ಕಾಗಝ್‌ನಗರ್, ಏಲೂರು, ಚಂದ್ರಾಪುರ, ವಾರ್ಧಾ, ನಾಗಪುರ, ಭೂಪಾಲ್, ಮುಖಾಂತರ ಜಾನ್ಸಿ ತಲುಪಿದಾಗ ಮರು ದಿನ ಒಂದು ಗಂಟೆ ರಾತ್ರಿ. ವಿಶಾಲವಾದ ಉದ್ದುದ್ದವಾದ ಪ್ಲಾಟ್‌ಫಾರಂಗಳ ಮೇಲೆ ನಿಯಾನ್ ಲೈಟ್‌ಗಳು ಬಂಗಾರದ ಮಳೆಯಂತೆ ಬೆಳಕನ್ನು ಚೆಲ್ಲುತ್ತಿವೆ. ಪೋಲೀಸರು ಬಂದೂಕುಗಳನ್ನು ಹೆಗಲಿಗೆ ನೇತುಹಾಕಿಕೊಂಡು ಅಡ್ಡಾಡುತ್ತಿದ್ದಾರೆ. ಅಷ್ಟೇನೂ ಜನ ಜಂಗುಳಿ ಇಲ್ಲದಿದ್ದರೂ ಸುಮಾರು ಜನ ಇದ್ದಾರೆ. ಕೆಲವರು ಕೂತ ಕಡೆಯೇ ಸಾಮಾನುಗಳ ತಬ್ಬಿ ತೂಕಡಿಸುತ್ತಿದ್ದರೆ. ಇನ್ನೂ ಕೆಲವರು ಯಾವ ರೀತಿಯ ಅಂಜಿಕೆಯೂ ಇಲ್ಲದೆ ಉದ್ದುದ್ದವಾಗಿ ಕೈಕಾಲುಗಳನ್ನು ಚೆಲ್ಲಿ ಮಲಗಿದ್ದಾರೆ.

ಲಖನೌಗೆ ಹೋಗಬೇಕಾದ ಎಕ್ಸ್‌ಪ್ರೆಸ್ ರೈಲು ಬೆಳಿಗ್ಗೆ ಎಂಟು ಗಂಟೆಗೆ ಇರುವುದಾಗಿ ತಿಳಿಯಿತು. ಅದಕ್ಕಿಂತ ಮುಂಚೆ ರಾತ್ರಿ ಒಂದೂವರೆ ಗಂಟೆಗೆ ಒಂದು ಷಟಲ್ ಗಾಡಿ ಇರುವುದಾಗಿ, ಅದು ಸುಮಾರು ಮಧ್ಯಾಹ್ನ ಹನ್ನೆರಡು ಗಂಟೆಗೆ ಲಖನೌ ತಲುಪುವುದಾಗಿ ತಿಳಿಯಿತು. ರಾತ್ರಿಯಲ್ಲಾ ರೈಲು ನಿಲ್ದಾಣದಲ್ಲಿ ತೂಕಡಿಸುವುದಕ್ಕಿಂತ ಗಾಡಿಯಲ್ಲಿ ಕುಳಿತಿರುವುದೇ ವಾಸಿ ಎಂದು ಷಟಲ್‌ಗಾಡಿಯಲ್ಲಿ ಕುಳಿತು ಬಿಟ್ಟೆ.

ಭೋಗಿಗಳೆಲ್ಲ ಖಾಲಿಯಾಗಿದ್ದು ಒಳಗೊಳಗೆ ಅಂಜಿಕೆಯಾದರೂ ಧೈರ್ಯ ತಂದುಕೊಂಡು ಒಂದು ಕಿಟಕಿ ಪಕ್ಕದಲ್ಲಿ ಕುಳಿತುಕೊಂಡೆ. ನಿದ್ದೆ ಮಾತ್ರ ಹತ್ತಿರ ಸುಳಿಯಲಿಲ್ಲ. ಉ. ಪ್ರದೇಶ ಎಂದ ತಕ್ಷಣ ಜಗಳ, ಗೂಂಡಾ, ಢಕಾಯಿತಿ, ಬಿಸಿಲು, ಚಳಿ, ನೆರೆ ಹೀಗೆ ಏನೇನೋ ಜ್ಞಾಪಕಕ್ಕೆ ಬರುತ್ತಿತ್ತು.

ಕೆಜಿಎಫ್ ಬಿಡುವುದಕ್ಕಿಂತ ಮುಂಚೆ ಬಹಳ ಜನ ಅಯ್ಯೋ, ಅವೆಲ್ಲ ದರಿದ್ರ ರಾಜ್ಯಗಳು ಯಾಕಾದರೂ ಆ ಕಡೆಗೆ ಹೋಗುತ್ತಿದ್ದೀಯ ಎಂದು ಎಚ್ಚರಿಕೆ ನೀಡಿದ್ದರು. ಒಂದು ಕಡೆ ತೂಕಡಿಕೆ, ಇನ್ನೊಂದು ಕಡೆ ಎಚ್ಚರಿಕೆ, ಸುಮಾರು ಸಮಯವಾದ ಮೇಲೆ ಬುಡ್ಡಿ ದೀಪಗಳಂತೆ ಭೋಗಿಗಳ ಒಳಗೆ ಲೈಟುಗಳು ಉರಿಯತೊಡಗಿದವು. ಮುರಿದ ಟಕಿ ಬಾಗಿಲುಗಳು, ಹೇರಳವಾದ ಕಸ, ಕಡ್ಡಿ ಮತ್ತು ಹರಕು ಮುರುಕು ಸಾಮಾನುಗಳನ್ನು ಹೊಂದಿದ್ದ ದೇಶೀ ಪ್ರಯಾಣಿಕರಿದ್ದ ರೈಲು. ಬರಿ ಬಡವರು ಪ್ರಯಾಣ ಮಾಡುವ ರೈಲೇನೋ ಎನ್ನುವಂತಿತ್ತು. ಬರು ಬರುತ್ತಾ ಇನ್ನೂ ಕೆಲವರು ಬೇರೆ ರೈಲುಗಳಲ್ಲಿ ಮಾಸಲಾತಿ ಸಿಗದವರು ಮತ್ತಿತರರು ನಾನಿದ್ದ ಬೋಗಿಗೆ ಬರತೊಡಗಿದರು. ನನ್ನಲ್ಲಿ ಸ್ವಲ್ಪ ಸಮಾಧಾನ ಮೂಡುವಂತಾಯಿತು.

ಒಂದು, ಎರಡು, ಮೂರು ಸಿಳ್ಳೆಗಳನ್ನು ಊದಲಾಯಿತು. ಅನಂತರ ಒಂದು ಉದ್ದವಾದ ಸಿಳ್ಳೆಯೊಡನೆ ಅಚಲವಾಗಿ ನಿಂತಿದ್ದ ಒಂದು ದೊಡ್ಡ ಬೆಟ್ಟ ನಿಧಾನವಾಗಿ ಚಲಿಸಿದಂತೆ ರೈಲು ಚಲಿಸತೊಡಗಿತು. ಜನರೆಲ್ಲ ಸ್ವಲ್ಪ ಸಮಾಧಾನಗೊಂಡು "ಅಬ್ಬಾ" ಎನ್ನುತ್ತ ನಿಟ್ಟುಸಿರಿಟ್ಟರು.

ಬಿಸಿ ಬಿಸಿ ಚಹ ಕುಡಿದ ಜನ ಮಣ್ಣಿನ ಕುಡಿಕೆಗಳನ್ನು ಕಿಟಕಿ ಮೂಲಕ ಲಟಲಟನೆ ಪ್ಲಾಟ್‌ಫಾರಂ ಮೇಲೆ ಎಸೆಯುತ್ತಿದ್ದಂತೆ ಗಾಳಿ ಸುಯ್ಯನೆ ಕಿಟಕಿಗಳ ಒಳಕ್ಕೆ ನುಗ್ಗಿ ಬರುತ್ತಿತ್ತು. ಜನ ಆಹ್ಲಾದಕರವಾಗಿ ಧರಿಸಿದ್ದ ಬಟ್ಟೆಗಳನ್ನು ಇನ್ನಷ್ಟು ಸಡಿಲಗೊಳಿಸಿ ಗಾಳಿಗೆ ತಮ್ಮ ಮೈಯನ್ನು ಒಡ್ಡಿದರು.

ಸುಮಾರು ಐದಾರು ಕಿ.ಮೀ.ಗಳ ದೂರ ಚಲಿಸಿದ ರೈಲು ವೇಗವಾಗಿ ಉಸಿರು ಬಿಡುತ್ತಾ ನಿಂತುಕೊಂಡಿತು. ಮತ್ತೆ ಜವರು, ಬೀಡಿ ಹೊಗೆ, ಕಿರಿ ಕಿರಿ ಮಾತುಗಳು ಒಂದೇ ಜಿಗುಪ್ಸೆ. ಮತ್ತೆ ಗಾಲಿಗಳ ಶಬ್ದ, ಬರುಬರುತ್ತಾ ಗಾಳಿ ಇನ್ನಷ್ಟು ತಂಪಾಗಿ ಬೀಸುತ್ತಿದ್ದು,

ರೈಲು ಎಷ್ಟು ಸಲ ನಿಂತಿತೋ, ಎಷ್ಟು ಸಲ ಚಲನೆ ಗೊಂಡಿತೋ ನಿದ್ದೆ ಎಚ್ಚರ, ನಿದ್ದೆ ಎಚ್ಚರ ಹೀಗೆ ಮುಂದುವರಿದಿತ್ತು.

ರೈಲು ಪಶ್ಚಿಮದಿಂದ ಪೂರ್ವದ ಕಡೆಗೆ ಸಾಗುತ್ತಿದ್ದು ಬಾನಲ್ಲಿ ಸುಮಸುಮ ಬೆಳಗು ಮೂಡುತ್ತಿತ್ತು. ಸಮತಟ್ಟಾದ ಗಂಗಾಬಯಲು, ಗೋಧಿಪೈರು, ತೊಗರಿ, ಕಬ್ಬು, ನೇಗಿಲಿಡಿದ ರೈತರು, ಎತ್ತುಗಳು, ಗುಂಪು ಗುಂಪಾದ ಮಾವಿನ ತೋಪುಗಳು, ಹಾರುವ ಪಕ್ಷಿಗಳು ಒಟ್ಟಿನಲ್ಲಿ ಮೊದಲ ನೋಟಕ್ಕೆ ಸುಂದರವಾಗಿ ಕಾಣುವ ದೃಶ್ಯಗಳು.

ಅರ್ಧ ಗಂಟೆಗೆ ಒಮ್ಮೆ ನಿಲ್ಲುತ್ತಾ ಸಾಗುತ್ತಿದ್ದ ಆ ರೈಲಿನಲ್ಲಿ ಹಾಲಿನ ಡಬ್ಬಿಗಳ ಜೊತೆಗೆ ಹಳ್ಳಿ ಜನ ತುಂಬಿಕೊಳ್ಳುತ್ತಿದ್ದರು. ಮಧ್ಯೆ ಮಧ್ಯೆ ಯಾರೋ ಸರಪಳಿ ಎಳೆದಾಗ ಕಿರ್ರನೆ ಕಿರುಚಿಕೊಳ್ಳುವ ರೈಲು ನಿಂತುಕೊಳ್ಳುತ್ತಿತ್ತು, ಮತ್ತೆ ಸಾವರಿಸಿಕೊಂಡು ಚಲಿಸುತ್ತಿತ್ತು. ಹೀಗೆ ಸಾಗುತ್ತಾ ಸಾಗುತ್ತಾ ಮಧ್ಯಾಹ್ನ ಒಂದು ಗಂಟೆಯಾಯಿತು, ಎರಡು ಗಂಟೆಯಾಯಿತು, ಕಾನ್‌ಪುರ್ ಕೂಡ ಬರಲಿಲ್ಲ. ಬಿಸಿಲು ಬಣಗುಡುತ್ತಿದ್ದು, ಕುಳಿತಿದ್ದ ಆಸನಗಳು ಕೂಡ ಉರಿಯುತ್ತಿದ್ದವು. ಸಮಯ ಕಳೆದಂತೆ ಹಸಿವು, ಬಾಯಾರಿಕೆ ಜಾಸ್ತಿಯಾಗುತ್ತಿದ್ದು, ಅಲ್ಲಲ್ಲಿ ಮಾರುತ್ತಿದ್ದ ತಿಂಡಿಗಳನ್ನು ತೆಗೆದುಕೊಂಡು ತಿನ್ನುವುದಕ್ಕೆ ಮನಸ್ಸು ಒಪ್ಪುತ್ತಿರಲಿಲ್ಲ. ನೀರು ಕುಡಿಯಲೂ ಸಹ ಹೇಸಿಗೆ ಆಗುತ್ತಿತ್ತು. ಲಖನೌ ಬಂದಮೇಲೆ ಒಂದು ಒಳ್ಳೆ ನಾಜೂಕಾದ ಹೋಟೆಲಿನಲ್ಲಿ ಊಟ ಮಾಡಬೇಕೆಂದು ಕೊಂಡೆ. ಆದರೆ ಯಾವಾಗ ? ಸಮಯ ಎರಡೂವರೆ ಘಂಟೆಯಾಗಿದ್ದು ಕಾನ್‌ಪುರ್ ಈಗ ಹತ್ತಿರ ಹತ್ತಿರ ಬರುತ್ತಿದ್ದು ಬಾಯಾರಿಕೆ ತಡೆದುಕೊಳ್ಳಲಾಗಲಿಲ್ಲ. ರೈಲು ನಿಂತಿದ್ದೇ ತಡ ಕಿಟಕಿಯಲ್ಲೇ ಎರಡು ರುಪಾಯಿಗೆ ಪೂರಿ, ಸಬ್ಜಿ, ತೆಗೆದುಕೊಂಡು ತಿಂದಾದ ಮೇಲೆ ಒಂದು ಗೋಲ್ಡ್ ಸ್ಪಾಟ್ ಕುಡಿದು ಹಸಿವು ಬಾಯಾರಿಕೆ ಎರಡನ್ನು ತಾತ್ಕಾಲಿಕವಾಗಿ ನಿವಾರಿಸಿಕೊಂಡೆ.

ಬರ್ಫ್ ನೀರನ್ನು ಉದ್ದುದ್ದವಾದ ಗಾಜಿನ ಲೋಟಾಗಳಲ್ಲಿ ತೆಗೆದುಕೊಂಡು ಕುಡಿಯುತ್ತಿದ್ದ ಜನ ಹಣವನ್ನೂ ಕೊಡುತ್ತಿದ್ದರು: ಒಂದು ಲೋಟಾ ನೀರಿಗೆ ಇಪ್ಪತ್ತೈದು ಪೈಸೆ. ವ್ಯಾಪಾರ ಹೊಸದಾಗಿ ಕಂಡರೂ ಈ ವಾತಾವರಣಕ್ಕೆ ಸರಿ ಎನಿಸಿತು. ಸಣ್ಣ ಸಣ್ಣ ಮಕ್ಕಳು ಮಡಿಕೆಯಲ್ಲಿದ್ದ ನೀರನ್ನು ಹತ್ತು ಪೈಸೆಗಳಿಗೆ ಒಂದು ಲೋಟಾದಂತೆ ಮಾರುತ್ತಿದ್ದರು. ನನಗೂ ಒಂದು ಲೋಟಾ ನೀರು ಕುಡಿಯುವ ಆಸೆಯಾದರೂ ಕುಡಿಯಲಿಲ್ಲ.

ರೈಲು ಸುಮಾರು ಹೊತ್ತು ವಿಶ್ರಾಂತಿ ತೆಗೆದುಕೊಂಡ ಮೇಲೆ ಮತ್ತೆ ಚಲಿಸ ತೊಡಗಿತು. ಸುಮಾರು ಒಂದೂವರೆ ಗಂಟೆ ಚಲಿಸದ ಮೇಲೆ ವಿಶಾಲವಾದ ಸಮತಟ್ಟಾದ ಬಯಲಲ್ಲಿ ವಿಶಾಲವಾಗಿ ಹರಡಿಕೊಂಡಿರುವ ಮನೆಗಳು ಕಾಣಿಸಿಕೊಂಡವು. ಓಹೋ .... ? ಲಖನೌ ಬಂದೇ ಬಿಟ್ಟಿತು. ನಿಲ್ದಾಣದಲ್ಲಿ ಗಜಿ ಬಿಜಿ ಜನ, ಒಂದೇ ಗದ್ದಲ. ಇಳಿದು ಸುತ್ತಲೂ

ನೋಡಿದೆ. ಎಲ್ಲಿನೋಡಿದರೂ ಉಗುಳಿ ಉಗುಳಿ ಕೆಂಪಗೆ ಕಾಣುವ ಪಾನ್ ಕಲೆಗಳು ಇನ್ನೂ ಸಾಲದೆಂಬಂತೆ ಹೊಸದಾಗಿ ಉಗುಳುತ್ತಿರುವ ಬಾಯಿಗಳು. ಬಿಸಿಲು, ಬೆವರು, ಹೊಗೆ, ಮೂತ್ರ ವಾಸನೆ. ಆ ರೈಲು ನಿಲ್ದಾಣ ಹಂದಿಗಳ ಗಟಾರಿನಂತೆ ಕಾಣುತ್ತಿತ್ತು.

ನಿಲ್ದಾಣದಿಂದ ಬಿರಬಿರನೆ ಹೊರಕ್ಕೆ ನಡಿದದ್ದೇ ತಡ ಸುಮಾರು ಜನ ಹೊರಕ್ಕೆ ಹೋಗಲು ದಾರಿ ಬಿಡದೆ... "ಕಹಾ ಜಾನಾ"? ಆಟೋಮೆ ಆಯಿಯೇ .. , ಸೈಕಲ್ ರಿಕ್ಷಾ ಮೆ ಆಯಿಯೇ, ಟೆಂಪೋಮೆ ಆಯಿಯೇ ... " ಎನ್ನುತ್ತ ಅಡ್ಡಗಟ್ಟಿ ಕೇಳತೊಡಗಿದರು. ಕೈ ತಿರುಗಿಸುತ್ತಾ, ತಲೆ ಅಲ್ಲಾಡಿಸುತ್ತಾ ಹೊರಕ್ಕೆ ತಪ್ಪಿಸಿಕೊಂಡು ಬರುವಷ್ಟರಲ್ಲಿ ತಲೆ ತಿರುಗಿದಂತಾಯಿತು. ಸುಮಾರು ದೂರ ಬಂದ ಮೇಲೂ ಸೈಕಲ್ ರಿಕ್ಷಾದವರು ಹಿಂದೆಯೇ ಬರುತ್ತಿದ್ದರು. ಯಾರ ಕಡೆಯೂ ನೋಡದೆ ರಸ್ತೆಗೆ ಬಂದು ಬಿಟ್ಟೆ. ದೂರದಿಂದ ಬಹಳ ಭವ್ಯವಾಗಿ ಕಾಣುವ ಆ ನಿಲ್ದಾಣದ ಒಳಾಂಗಣ ಮಾತ್ರ ಹೇಸಿಗೆ ಹುಟ್ಟಿಸುತ್ತಿತ್ತು.

ಭಾನುವಾರವಾದುದರಿಂದ ಇಲ್ಲೆ ಎಲ್ಲಾದರೂ ಹೋಟೆಲಿನಲ್ಲಿ ರಾತ್ರಿ ತಂಗಿದ್ದು ಬೆಳಿಗ್ಗೆ ನೇರವಾಗಿ ಆಫೀಸಿಗೆ ಹೋಗ ಬೇಕೆಂದು ತೀರ್ಮಾನಿಸಿ ರಸ್ತೆಯ ಉದ್ದಕ್ಕೂ ನಡೆಯ ತೊಡಗಿದೆ. ಎಲ್ಲಿ ನೋಡಿದರೂ ಹಿಂದಿ ಬರಹಗಳು , ದೊಡ್ಡ ದೊಡ್ಡದಾದ ಸಿನಿಮಾ ಪೋಸ್ಟರುಗಳು ಮತ್ತು ಜಾಹಿರಾತು ಫಲಕಗಳು. ಇವೆಲ್ಲಕ್ಕಿಂತ ಮಿಗಿಲಾಗಿ ನನ್ನ ಮನ ಚಿಂತೆಗೆ ಎಡವಿದ್ದು ಉರಿ ಬಿಸಿಲು ಮತ್ತು ಬೆವರಿನ ಮಧ್ಯೆ ತೊಳಲಾಡುತ್ತಿರುವ ನರಪೇತಲು ಸೈಕಲ್ ರಿಕ್ಷಾವಾಲಾಗಳ ಪರಿಸ್ಥಿತಿ. ಸುಮಾರು ಸಮಯ ಓಡಾಡಿ ಕಾಲುಗಳು ಸೋತ ಮೇಲೆ ಎತ್ತರವಾದ ಹೋಟೆಲುಗಳಿರುವ ರಸ್ತೆಯನ್ನು ಬಿಟ್ಟು ಹಿಂದಿನ ಗಲ್ಲಿಯ ಹೋಟೆಯೊಂದರಲ್ಲಿ ಇಣುಕಿದೆ. ಹೋಟೆಲಿನ ಹುಡುಗ ಮೂವತ್ತು ರೂಪಾಯಿಗಳ ಒಂದು ಕೋಣೆ ತೋರಿಸಿದ. ಐವತ್ತು ರೂಪಾಯಿಗಳನ್ನು ಕೌಂಟರ್‌ನಲ್ಲಿ ಮುಂಗಡವಾಗಿ ನೀಡಿ ಕೋಣೆ ತಲುಪಿದೆ. ಸ್ನಾನ ಮಾಡಿ ಬಟ್ಟೆ ಬದಲಿಸಿಕೊಂಡು ವಿಶ್ರಾಂತಿ ಪಡೆಯಲು ಮಂಚದ ಮೇಲೆ ಮಲಗಿಕೊಂಡೆ. ಮೇಲೆ ನೇತಾಡುತ್ತಿದ್ದ ಒಂದು ಹಳೆ ಕಾಲದ ಫ್ಯಾನ್ ಎಷ್ಟು ಕಾಲದಿಂದ ಬೆವರು ಸುರಿಸಿತ್ತೋ ಏನೋ ? ಸುಸ್ತಾಗಿ ನನ್ನ ಮೇಲೆ ಬಿದ್ದರೂ ಬೀಳಬಹುದೆಂದು ದೂರ ಸರಿದು ಮಲಗಿಕೊಂಡೆ.

ಸ್ವಲ್ಪಕಾಲ ಸುದಾರಿಸಿಕೊಂಡಮೇಲೆ ಊಟ ಮಾಡಲು ಮುಖ್ಯ ಬೀದಿಗೆ ಬಂದೆ. ಅದೇ ಗಜಿ ಬಿಜಿ, ಅದೇ ಗದ್ದಲ, ಅದೇ ಜನ. ಒಂದು ರೆಸ್ಟೋರೆಂಟಿನ ಒಳಗೆ ಹೋಗಿ ಖಾಲಿ ಇದ್ದ ಕುರ್ಚಿಯಲ್ಲಿ ಕುಳಿತು ಕೊಂಡೆ. ಸ್ವಲ್ಪ ಸಮಯವಾದ ಮೇಲೆ ಒಬ್ಬ ಪಗಡಿ ಧರಿಸಿರುವ ಮಾಣಿ ಬಂದು,

"ಹ ! ಸಾಬ್ ಬೋಲಿಯೇ" ಎಂದ. ಮೀಲ್ಸ್ ಸಿಕ್ಕುತ್ತದೆಯೇ ಎಂದು ಇಂಗ್ಲೀಷ್‌ನಲ್ಲಿ ಕೇಳಿದೆ.

"ಎಸ್ ಅವೈಲೆಬಲ್" ಎಂದ

"ಒನ್ ಮೀಲ್ಸ್" ಎಂದೆ. ಈಗ ಅವನಿಗೆ ಅರ್ಥವಾಗಿರಬಹುದು. ನಾನು ಹೊಸಬನೆಂದು.

"ಎವರಿಥಿಂಗ್ ಈಸ್ ಸಪರೇಟ್, ಅಲಗ್ ಅಲಗ್ ದಾಮ್" ಎಂದ.

ಅವನಿಗೆ ಇಂಗ್ಲೀಷ್ ಭಾಷೆ ಬರುತ್ತಿದ್ದುದರಿಂದ ನನಗೆ ಬೇಕಾದುದ್ದನ್ನು ತೆಗೆದುಕೊಂಡೆ. ಊಟದ ಜೊತೆಗೆ ಈರುಳ್ಳಿ, ಮೂಲಂಗಿ, ಹಸಿಮೆಣಸಿನಕಾಯಿ, ನಿಂಬೆ ಹಣ್ಣಿನ ಸಲಾಡ್ ಕೊಟ್ಟ. ಅಲ್ಲಿನ ಜನ ಊಟವಾದ ಮೇಲೆ ನಿಂಬೆಹಣ್ಣನ್ನು ನೀರಿನಲ್ಲಿ ಹಿಸಿಕಿ ಸೆಕೆಯನ್ನು ಗುಳುಂ ಎಂದು ನುಂಗಿ ಕೊಳ್ಳುತ್ತಿದ್ದರು. ನಾನೂ ಹಾಗೆ ಮಾಡಿದೆ. ಊಟಕ್ಕಿಂತ ಸಾಲೆಡ್ ಇಷ್ಟವಾಯಿತು. ಊಟ ಮಾಡಿ ಹೊರಕ್ಕೆ ಬರುವುದರೊಳಗೆ ಬಟ್ಟೆ ಎಲ್ಲಾ ತೊಯ್ದು ತೊಪ್ಪೆಯಾಗಿತ್ತು. ಹೋಟೆಲಿಗೆ ಬಂದ ತಕ್ಷಣ ಬಟ್ಟೆಯೆಲ್ಲಾ ಬಿಚ್ಚಿ ಫ್ಯಾನಿನ ಕೆಳಗೆ ಕುಳಿತುಕೊಂಡೆ.

ಬೆಳಿಗ್ಗೆ ಎದ್ದಿದ್ದೇ ತಣ್ಣೀರಿನಲ್ಲಿ ಸ್ನಾನ ಮಾಡಿದ ಮೇಲೆ ಸ್ವಲ್ಪ ನೆಮ್ಮದಿ ಎನಿಸಿತು. ಆದರೆ ಅದು ಕೇವಲ ಅರ್ಧಗಂಟೆ ಮಾತ್ರ ಮತ್ತೆ ಬೆವರು ಉಕ್ಕ ತೊಡಗಿತು. ಬಟ್ಟೆ ಬದಲಾಯಿಸಿ ಕೊಂಡು ಹೋಟೆಲ್ ಕೋಣೆ ಖಾಲಿ ಮಾಡಿ, ಮಿಕ್ಕ ಹಣ ಹಿಂದಕ್ಕೆ ಪಡೆದು ನಾನು ಹೋಗಬೇಕಾಗಿರುವ ವಿಳಾಸದ ಬಗ್ಗೆ ವಿಚಾರಿಸಿದೆ. ಅವನ ಭಾಷೆ ನನಗೆ, ನನ್ನ ಭಾಷೆಗೆ ಅವನಿಗೆ ಅರ್ಥವಾಗದೆ ತಲೆ ಕೆರೆದುಕೊಂಡು ಹೊರಕ್ಕೆ ಬಂದೆ

ರೈಲ್ವೆ ನಿಲ್ದಾಣಕ್ಕೆ ಎದುರಿರುವ ಟೆಂಪೋ ನಿಲ್ದಾಣದಿಂದ ಮಹಾ ನಗರಕ್ಕೆ ಹೋಗುವ ಟೆಂಪೋ ಯಾವುದು ಎಂದು ಕೇಳಿ ಕುಳಿತುಕೊಂಡೆ. ಸುಮಾರು ಮೂವತ್ತು ನಿಮಿಷಗಳಾದ ಮೇಲೆ ಒಂದು ಸಣ್ಣ ನಿಲ್ದಾಣದಲ್ಲಿಎಲ್ಲರೂ ಇಳಿದುಕೊಂಡರು, ನಾನೂ ಇಳಿದುಕೊಂಡೆ. ಸ್ವಲ್ಪ ನಾಜೂಕಾಗಿ ಬಟ್ಟೆ ಧರಿಸಿದವರನ್ನು ನಿಲ್ಲಿಸಿ ವಿಳಾಸ ತೋರಿಸುತ್ತಾ, ಕೇಳುತ್ತಾ ನಡೆದೆ. ಎಲ್ಲರೂ ಹಿಂದಿಯಲ್ಲೇ ಉತ್ತರ ನೀಡ ತೊಡಗಿದರು. ಕೆಲವರು ಇಂಗ್ಲೀಷಿನಲ್ಲಿ ಮಾತನಾಡಲು ಆಸೆಯಿಂದ ಪ್ರಯತ್ನ ಪಟ್ಟರು, ಕೊನೆಗೆ ಹಿಂದಿಯಲ್ಲೇ ಮುಗಿಸುತ್ತಿದ್ದರು.

ಒಳ್ಳೆ ಸೊಗಸಾದ ಮನೆಗಳು, ನೇರವಾದ ರಸ್ತೆಗಳು, ಕಿಟಕಿಗಳ ಮೇಲೆ ತಣ್ಣನೆ ಗಾಳಿಯನ್ನು ಬೀಸುತ್ತ ಕುಳಿತಿರುವ ಏರ್‌ಕೂಲರ್‌ಗಳು. ಅಡ್ಡ ಬಂದ ಒಬ್ಬ ಸೈಕಲ್ ಸವಾರನನ್ನು ನಿಲ್ಲಿಸಿ ವಿಳಾಸ ತೋರಿಸಿದೆ. ಒಂದೆರಡು ಕ್ಷಣ ನನ್ನನ್ನು ನೋಡಿದ. ಸುಮಾರು ಇಪ್ಪತ್ತೈದು ವರ್ಷಗಳು ತುಂಬಿರುವ ಯುವಕ ಒಂದೆರಡು ಇಂಗ್ಲೀಷ್ ಪದಗಳನ್ನು ಬೆರಸಿ ಹಿಂದಿಯಲ್ಲಿ,

"ಆಪ್ ನಯಾ ಆಯಾ ಕ್ಯಾ?" ಎಂದ.

"ಹೌದು" ಎಂದೆ.

"ನಾನು ಅದೇ ಆಫೀಸಿನಲ್ಲಿ ತಾತ್ಕಾಲಿಕ ಬೆರಳಚ್ಚುಗಾರನಾಗಿ ಕೆಲಸ ಮಾಡುತ್ತಿದ್ದೆ, ಇತ್ತೀಚೆಗೆ ಬೇರೆ ಕೆಲಸ ಸಿಕ್ಕಿದ ಮೇಲೆ ಆ ಕೆಲಸವನ್ನು ಬಿಟ್ಟುಬಿಟ್ಟೆ. ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ ಬನ್ನಿ" ಎಂದ. ನಾನು ನಡೆದೆ ಹೋಗೋಣ ಎಂದೆ. ಇಲ್ಲ ಬನ್ನಿ ಏನೂ ತೊಂದರೆ ಇಲ್ಲ ಎಂದು ಸೈಕಲ್ ಹಿಂದೆ ಕೂಡಿಸಿಕೊಂಡು ಒಂದೆರಡು ತಿರುವುಗಳನ್ನು ಬಳಸಿಕೊಂಡು ಒಂದು ಮುಖ್ಯ ರಸ್ತೆಯಲ್ಲಿ ಸೈಕಲ್ ನಿಲ್ಲಿಸಿದ.

"ಅಲ್ಲಿ ಕಾಣುತ್ತಿದೆಯಲ್ಲಾ ಅದೇ ಕಟ್ಟಡ, ನನಗೆ ಆಫೀಸಿಗೆ ಸಮಯವಾಗಿರುವುದರಿಂದ ನಾನು ಹೋಗುತ್ತೇನೆ, ನಮಸ್ಕಾರ್" ಎಂದು ಹೊರಟೇ ಬಿಟ್ಟ.

ಸಮಯ ನೋಡಿಕೊಂಡೆ ಇನ್ನೂ ಒಂಬತ್ತು ಘಂಟೆ ಕೂಡ ಆಗಿಲ್ಲ. ಅದೊಂದು ಎರಡಂತಸ್ತಿನ ಕಟ್ಟಡವಾಗಿದ್ದು ಗೇಟಿನ ಹತ್ತಿರ ಹೋಗಿ ನಿಂತು ಕೊಂಡೆ. ಕಾವಲುಗಾರ ಹತ್ತಿರ ಬಂದು,

"ಕ್ಯಾ ಸಾಬ್ ?" ಎಂದ.

"ಹಮ್ ಡ್ಯೂಟಿ ಜಾಯಿನ್.. ಆಯಾ " ಎಂದೆ. ಅವನಿಗೆ ಅರ್ಥವಾಯಿತು. ಸೆಟೆದು ನಿಂತು, ಒಂದು ಸೆಲ್ಯೂಟ್ ಹೊಡೆದ ನಂತರ ಗೇಟನ್ನು ಸರಸರನೆ ತೆಗೆದ. ಒಳಕ್ಕೆ ನಡೆದು ಸುತ್ತಲೂ ನೋಡಿದೆ. ಕಛೇರಿ ಬಾಗಿಲು ಇನ್ನೂ ತೆಗೆದಿಲ್ಲ. ಹೊರಗಿದ್ದ ಸೋಫಾ ತೋರಿಸಿ ...

"ಇದರ್ ಬೈಠಿಯೆ ಸಾಬ್" ಎಂದ. ಸೋಫಾ ಮೇಲೆ ಸೀಲಿಂಗ್ ಫ್ಯಾನ್ ನಿಧಾನವಾಗಿ ತಿರುಗುತ್ತಿದ್ದು ಅದರ ಕೆಳಗೇ ಕುಳಿತುಕೊಂಡೆ.

"ಆಪ್ ಕಹಾ ಕಾ ರಹನೇವಾಲಾ ಹೈ ಸಾಬ್" ಕೇಳಿದ.

"ಬೆಂಗಳೂರು, ಕರ್ನಾಟಕ" ಎಂದೆ.

ಕಣ್ಣುಬ್ಬುಗಳನ್ನೇರಿಸಿ "ಬಂಗಲೂರ್.. ಕರ್ನಾಟಕ .. ? ಲೋಗ್ ಬೋಲ್‌ತೆ ಹೈ ಸಾಬ್ ಆಪ್ ಕಾ ದೇಶ್ ಬಹುತ್ ಅಚ್ಛಾ ಹೈ ಕರ್ಕೆ".. ಎಂದ. ಕೆಲವು ಪದಗಳು ಮಾತ್ರ ಅರ್ಥವಾದರೂ ಸಾರಾಂಶ ತಿಳಿದು ಹೋಯಿತು. ಎರಡೇ ದಿನಗಳಲ್ಲಿ ಇಷ್ಟು ಹಿಂದಿ ಕಲಿತುಕೊಂಡೆನೆ ಎನ್ನುವಂತಾಗಿತ್ತು.

ಅಷ್ಟರಲ್ಲಿ ಒಂದು ಬಜಾಜ್ ಸ್ಕೂಟರ್ ಒಳಕ್ಕೆ ಬಂದಿತ್ತು. ಸ್ಕೂಟರ್ ನಿಲ್ಲಿಸಿದ

ವ್ಯಕ್ತಿ ಒಂದು ಬ್ರೀಫ್‌ಕೇಸನ್ನು ಕೈಯಲ್ಲಿ ಹಿಡಿದುಕೊಂಡು ಹಿಂದಕ್ಕೆ ನೋಡಿದ. ಎತ್ತರವಾದ ಮತ್ತು ಸೊಗಸಾದ ದೇಹ ಹೊಂದಿರುವ ಆ ವ್ಯಕ್ತಿಯ ಮುಖದಲ್ಲಿ ಒಂದು ರೀತಿಯ ಗಾಂಭೀರ್ಯವಿದ್ದು, ನೋಡಲು ಒಬ್ಬ ವಿಜ್ಞಾನಿಯಂತೆ ಕಾಣುತ್ತಿದ್ದ.

"ಹಲೋ .... ನಾನು ಅಮಿತ್ ಮುಖರ್ಜಿ" ಎಂದು ಕೈ ಕುಲುಕಿ ನೇರವಾಗಿ ಕೋಣೆಗೆ ಕರೆದುಕೊಂಡು ಹೋಗಿ ಸ್ವಲ್ಪ ಸಮಯ ಔಪಚಾರಿಕವಾಗಿ ಮಾತನಾಡಿದರು. ಮೇಜಿನ ಮೇಲಿದ್ದ ಗಂಟೆ ಬಾರಿಸಿ ಆ ಧನಿರಾಮ್‌ನನ್ನು ಕಳುಹಿಸಿ ಎಂದು ಅಟೆಂಡರ್‌ಗೆ ಆಜ್ಞೆ ಮಾಡಿದರು. ಕೆಲವೇ ಕ್ಷಣಗಳಲ್ಲಿ ಧನಿರಾಮ್ ಬಂದಿದ್ದ.

"ನೋಡು ಇವರು ಹೊಸದಾಗಿ ಸೇರಲು ಬಂದಿದ್ದಾರೆ. ವ್ಯವಸ್ಥಾಪಕರು ಬರುವುದಕ್ಕಿಂತ ಮುಂಚೆ ಎಲ್ಲಾ ಫಾರ್ಮ್ಸ್‌ಗಳನ್ನು ತುಂಬಲು ಕೊಡು" ಎಂದರು. ಧನಿರಾಮ್ ನನ್ನನ್ನು ಕರೆದುಕೊಂಡು ಹೋಗಿ ಮತ್ತೊಂದು ಸ್ಥಳದಲ್ಲಿ ಕೂರಿಸಿ ಎಲ್ಲಾ ಫಾರ್ಮ್ಸ್‌ಗಳನ್ನು ತುಂಬಲು ಸಹಾಯ ಮಾಡಿದ. ವ್ಯವಸ್ಥಾಪಕರು ಬಂದ ಮೇಲೆ ತಿಳಿಸುತ್ತೇನೆ ಎಂದು ಹೇಳಿ ಮತ್ತೊಂದು ಕೋಣೆಗೆ ಕರೆದುಕೊಂಡು ಹೋಗಿ ಕೆಲವು ಭೂ ಶಾಸ್ತ್ರಜ್ಞರನ್ನು ಪರಿಚಯಿಸಿದ. ಬಂದವರೆಲ್ಲಾ ಸಾಂಪ್ರದಾಯಕವಾಗಿ ಮತ್ತು ಕುಶಲವಾಗಿ ಮಾತನಾಡಿಸಿದರು. ಆದರೆ ವ್ಯವಸ್ಥಾಪಕರು ಮಾತ್ರ ಬರಲಿಲ್ಲ.

ಧರ್ಮನ್ ಬಗ್ಗೆ ವಿಚಾರಿಸಿದಾಗ ಕೆಜಿಎಫ್‌ಗೆ ಹೋಗಿರುವುದಾಗಿ ಹಾಗೂ ಅವನು ಇರುವ ವಿಭಾಗವೇ ಬೇರೆ ಎಂದು ತಿಳಿದು, ನನ್ನ ವಸತಿ ಮತ್ತು ಊಟದ ಬಗ್ಗೆ ಸ್ವಲ್ಪ ಚಿಂತೆ ಉಂಟಾಯಿತು.

ಫ್ಯಾನ್‌ಗಳು ಮತ್ತು ಏರ್ ಕೂಲರ್‌ಗಳು ಒಂದೇ ಸಮನೆ ಹವೆಯನ್ನು ಬೀಸುತ್ತಿದ್ದು, ಕೊಠಡಿ ತಂಪಾಗಿದೆ. ಮಧ್ಯಾಹ್ನದ ಊಟಕ್ಕಾಗಿ ಎಲ್ಲರೂ ಮನೆಗೆ ಹೊರಟು ಹೋದ ಮೇಲೆ ಉಳಿದಿದ್ದ ಮೂವರು ನನ್ನನ್ನು ಕರೆದುಕೊಂಡು ಹತ್ತಿರದ ಹೋಟೆಲ್ ಕಡೆಗೆ ನಡೆದರು. ನಾಲ್ಕು ಜನರು ಒಂದು ಸಣ್ಣದಾದ ಮೇಜಿನ ಮೇಲೆ ಕುಳಿತುಕೊಂಡೆವು. ಹೋಟೆಲಿನಲ್ಲಿ ಜನ ತುಂಬಿದ್ದಾರೆ.

"ನಿಮಗೇನು ಬೇಕು... ?" ಪಾಂಡೆ ಕೇಳಿದರು.

" ನನ್ನನ್ನು ಏನೂ ಕೇಳಬೇಡಿ, ನೀವು ತೆಗೆದುಕೊಂಡಿದ್ದೇ ನನಗೂ ಎಂದೆ".

"ಹ್ಹ.... ಇದಲ್ವೆ ಮಾತು" ಎಂದು ಜೋರಾಗಿ ನಕ್ಕರು. ಈರುಳ್ಳಿ, ಟೊಮೆಟೋ, ಮೆಣಸಿನಕಾಯಿ, ಮತ್ತು ನಿಂಬೆ ಇರುವ ಸಲಾಡ್ ತಟ್ಟೆಗಳು ಮೊದಲು ಬಂದವು. ನಂತರ

ರಾಗಿ ರೊಟ್ಟಿಯಷ್ಟು ದಪ್ಪ ಇರುವ ಎರಡೆರಡು ತಂಡೂರಿ ರೋಟಿಗಳು, ಜೊತೆಗೆ ಒಗ್ಗರಣೆ ಹಾಕಿದ ದಾಲ್ ಮತ್ತು ಪಾಲಕ್ ಪನ್ನೀರ್ ಸಬ್ಜಿ. ಒಂದು ತಂಡೂರಿ ರೋಟಿಯನ್ನು ತಿನ್ನುವುದರೊಳಗೆ ನನಗೆ ಬೆವರು ಸುರಿದು ಹೋಯಿತು. ಅವರೆಲ್ಲಾ ಆಗಲೇ ಎರಡೂ, ಮೂರು ರೋಟಿಗಳನ್ನು ಮುಗಿಸಿ ನನ್ನ ಕಡೆ ನೋಡಿ ನಗುತ್ತಿದ್ದಾರೆ.

"ಅನ್ನ ತೊಕ್ಕೋ ಡಿಯರ್..." ಪಾಂಡೆ ಹೇಳಿದರು.

"ಇಲ್ಲ ಸಾರ್ ಏನೂ ಬೇಡ" ಎಂದೆ.

" ಅರೇ, ಬರೀ ಎರಡು ತಂಡೂರಿಗಳಿಗೆ ಹೆದರಿ ಬಿಟ್ಟರೆ ಹೇಗೆ ನವ್ ಜವಾನ್" ಎಂದು ನಕ್ಕರು.

ಎಲ್ಲರ ಖರ್ಚನ್ನೂ ಪಾಂಡೆ ಒಬ್ಬರೇ ಪಾವತಿ ಮಾಡಿ ಹೊರಗಿದ್ದ ಪೆಟ್ಟಿಗೆ ಅಂಗಡಿಯಲ್ಲಿ ಏಕ್‌ಸೋ ಬೀಸ್ ಮತ್ತು ಕಟ್ಟಾ ಬೆರೆಸಿದ ಪಾನ್ ತೆಗೆದುಕೊಂಡು ನನಗೂ ಆಫರ್ ಮಾಡಿದರು. ನಾನು ತೆಗೆದುಕೊಳ್ಳಲಿಲ್ಲ. ಮತ್ತೆ ಆಫೀಸಿಗೆ ಬರುವಷ್ಟರಲ್ಲಿ ವ್ಯವಸ್ಥಾಪಕರು ಬಂದಿದ್ದು, ನನ್ನನ್ನು ಕರೆಸಿದರು.

"ಬಾಸ್" ತನ್ನ ಕೆಳಗಿನವರನ್ನು ಕೋಣೆಗೆ ಕರೆದಾಗ ಏರುವ ದುರ್ಬಲ ಉದ್ವೇಗ ನನಗೂ ಏರುತ್ತಿತ್ತು. ಮೃದುವಾಗಿ ಅವರ ಕೋಣೆಯ ಕಡೆ ನಡೆಯ ತೊಡಗಿದೆ. "ಬಿ.ಎಸ್. ಶ್ರೀವಾತ್ಸವ" ಎಂಬ ಬಿಳಿಅಕ್ಷರಗಳನ್ನು ನೇತುಹಾಕಿಕೊಂಡಿರುವ ಬಾಗಿಲನ್ನು ತಳ್ಳಿ

"ನಾನು ಬರಬಹುದೇ ಸಾರ್ ?" ಎಂದೆ.

"ಓ.. ದಯವಿಟ್ಟು ಬನ್ನಿ" ಎಂದು ಮುಂದಿದ್ದ ಕುರ್ಚಿ ತೋರಿಸಿದರು. ಕುಳಿತುಕೊಳ್ಳುವುದಕ್ಕಿಂತ ಮುಂಚೆ ಕೈ ಕುಲುಕಿ

"ನಾನು ವೆಂಕಟಸ್ವಾಮಿ" ಎಂದೆ.

"ಒಳ್ಳೆಯದು ಕುಳಿತುಕೊಳ್ಳಿ" ಎಂದರು. ಕುಳಿತುಕೊಂಡೆ. ಕೋಣೆಯ ಗೋಡೆಗಳ ಮೇಲೆ ಭೂವಿಜ್ಞಾನಕ್ಕೆ ಸಂಬಂಧ ಪಟ್ಟಹಲವು ರೀತಿಯ ನಕ್ಷೆಗಳು ಅಲಂಕಾರಗೊಂಡಿವೆ.

"ಯಾವ ಭಾಗಕ್ಕೆ ಸೇರಿದವರು ನೀವು ?"

"ಬೆಂಗಳೂರು."

"ಓ ಉದ್ಯಾನನಗರ ಬೆಂಗಳೂರಿನವರೆ ?"

"ಹೌದು ಸಾರ್" ಎಂದೆ.

"ಹಲವು ಸಲ ಬೆಂಗಳೂರು, ಮೈಸೂರು ಎಲ್ಲಾ ನೋಡಿದ್ದೇನೆ. ಯಾವ ವಿಶ್ವ ವಿದ್ಯಾನಿಲಯ... ?"

"ಬೆಂಗಳೂರು ವಿಶ್ವವಿದ್ಯಾನಿಲಯ" ಹೇಳಿದೆ.

"ಭೂವಿಜ್ಞಾನದಲ್ಲಿ ವಿಶೇಷವಾಗಿ ಯಾವ ವಿಷಯವಾಗಿ ನೀನು ಓದಿದ್ದೀರಿ. ..?" ಕೇಳಿದರು.

"ಇಲ್ಲ ಯಾವ ವಿಷಯವನ್ನು ವಿಶೇಷವಾಗಿ ಓದಿಲ್ಲ ಎಲ್ಲಾ ಜನರಲ್ ಜಿಯಾಲಜಿ" ಹೇಳಿದೆ.

"ನಿಮಗೆ ಯಾವುದಾದರೂ ವಿಷಯದಲ್ಲಿ ವಿಶೇಷ ಆಸಕ್ತಿ ಇದೆಯೇ...?" ಪ್ರಶ್ನಿಸಿದರು.

"ಸಧ್ಯಕ್ಕೆ ಹಾಗೇನು ಇಲ್ಲ, ಚಿನ್ನದ ಸಂಶೋಧನೆಯಲ್ಲಿ ಕೆಲಸ ಮಾಡುವ ಆಸೆ ಇದೆ "

"ಆದರೆ ಚಿನ್ನವನ್ನೆಲ್ಲಾ ಕರ್ನಾಟಕದಲ್ಲೆಬಿಟ್ಟು ಇಲ್ಲಿ ಬಂದಿದ್ದೀಯಲ್ಲಾ" ಎಂದು ಜೋರಾಗಿ ನಕ್ಕರು.

"ಎಲ್ಲಿ ಉಳಿದುಕೊಂಡಿದ್ದೀಯ ?" ಕೇಳಿದರು. ಎಲ್ಲೂ ಇಲ್ಲ ಬೆಳಿಗ್ಗೆಯೇ ಹೋಟೆಲ್ ಖಾಲಿ ಮಾಡಿ ನೇರವಾಗಿ ಆಫೀಸಿಗೆ ಬಂದೆ.

"ಎ ಕೌನ್ ಹೈ ಭಾಯ್ ಉದರ್ ತೋಡಾ ಬುಲಾವ್" ಎಂದರು.

"ಸಾಬ್, ನಂಬಿಯಾರ್ ಸಾಬ್ ಔರ್ ರಾವತ್ ಸಾಬ್ ಹೈ ಸಾಬ್" ಎಂದ ಸೇವಕ. ಅಷ್ಟರಲ್ಲಿ ನಂಬಿಯಾರ್ ಒಳಕ್ಕೆ ಬಂದ.

"ದೇಕೋ ಭಾಯ್ ಇವರು ಹೊಸದಾಗಿ ಬಂದಿದ್ದಾರೆ. ಸಧ್ಯಕ್ಕೆ ಒಂದೆರಡು ದಿನ ನಿಮ್ಮ ಮನೆಯಲ್ಲಿ ಇರಿಸಿಕೊಂಡು ಮನೆ ಹುಡುಕಿಕೊಡಿ" ಎಂದು ಆಜ್ಞೆ ಮಾಡುತ್ತಾ, "ಸಧ್ಯಕ್ಕೆ ನೀವು ಹೋಗ ಬಹುದು" ಎಂದು ಹೇಳಿ ಹೊರಕ್ಕೆ ಕಳುಹಿಸಿಕೊಟ್ಟರು.

ನನಗೆ ಸ್ವಲ್ಪ ಮುಜುಗರ ವಾದರೂ ಬೇರೆ ದಾರಿಯಿಲ್ಲ. ಸಾಯಂಕಾಲ ನಂಬಿಯಾರ್ ಮತ್ತು ರಾವತ್ ಜೊತೆಗೆ ಅವರ ಮನೆಯ ಕಡೆಗೆ ನಡೆಯತೊಡಗಿದೆ. ಸಣ್ಣದಾದ ಮನೆ ಚೊಕ್ಕಟವಾದ ಎರಡು ಕೋಣೆಗಳು. ಒಂದು ಕೋಣೆಯಲ್ಲಿ ಎರಡು ಒಂಟಿ ಮಂಚಗಳು, ಇನ್ನೊಂದು ಕೋಣೆಯಲ್ಲಿ ಕೆಲವು ಕುರ್ಚಿಗಳು. ಒಂದು ಮೇಜು, ಬಟ್ಟೆಗಳಿಡುವ ನಿಲುಗಡೆ ಜೊತೆಗೆ ಇನ್ನಷ್ಟು ಬ್ಯಾಚುಲರ್‌ಗಳು ಉಪಯೋಗಿಸುವ ವಸ್ತುಗಳು. ಎದುರಿಗೆ ಕಾಂಪೌಂಡಿನಲ್ಲಿ ಸಣ್ಣದಾದ ಅಡಿಗೆ ಮನೆ ಮತ್ತು ಸ್ನಾನಗೃಹ.

ಬಂದ ತಕ್ಷಣ ಸೆಖೆಗೆ ಬಟ್ಟೆಗಳನ್ನು ಬಿಚ್ಚಿ ಒಬ್ಬೊಬ್ಬರಾಗಿ ಸ್ನಾನ ಮಾಡಿದ ಮೇಲೆ ಅಡಿಗೆ ಮಾಡಲು ಶುರು ಮಾಡಿದರು. ನಾನು ಮಾತ್ರ ಏನೂಮಾಡದೆ ಪುಸ್ತಕಗಳನ್ನು ಓದುತ್ತಾ ಆಗಾಗ ಅವರ ಜೊತೆ ಮಾತನಾಡುತ್ತ ಇದ್ದೆ. ಸಾಯಂಕಾಲ ಎಲ್ಲರೂ ಒಂದು ಸಣ್ಣ ವಾಕ್ ಮಾಡಿ ಬಂದಮೇಲೆ ಊಟಕ್ಕೆ ಬಡಿಸಲಾಯಿತು. ಮೊದಲ ಬಾರಿಗೆ ಕುಕ್ಕರ್‌ನಲ್ಲಿ ಮಾಡಿದ್ದ ಅನ್ನವನ್ನು ತಿನ್ನುತ್ತಿದ್ದೆ. ಬಿಡಿಬಿಡಿಯಾದ ಬಿಳಿಯಾದ ಸೋನಾ ಮಸೂರಿ ಅನ್ನದ ಜೊತೆಗೆ ಪರ್‌ವಲ್ ಆಲೂಗಡ್ಡೆ ಸಬ್ಜಿ, ದಾಲು ಒಂದು ರೀತಿಯ ಹೊಸತನ, ಹೊಸದಾದ ರುಚಿ. ಒಟ್ಟಿನಲ್ಲಿ ಸರಳವಾದ ಊಟವಾದರೂ ಬಹಳ ಇಷ್ಟವಾಯಿತು. ಪರ್‌ವಲ್ ಕೂಡ ಮೊದಲಬಾರಿಗೆ ತಿಂದಿದ್ದೆ.

ಮರುದಿನ, ಬೆಳಿಗ್ಗೆಯೇ ಸ್ನಾನಮಾಡಿ ಕುಳಿತಿದ್ದಾಗ ಮಾಮೂಲಿಯಾಗಿ ಮಾತನಾಡುತ್ತಿದ್ದ ನಂಬಿಯಾರ್ ಇದ್ದಕ್ಕಿದ್ದಹಾಗೆ.... Are you a Brahmin ? ಪ್ರಶ್ನಿಸಿದ. No, I am not a Brahmin ಎಂದೆ. ಮತ್ತೆ ಪ್ರಶ್ನಿಸಲಿಲ್ಲ. ನಾನೂ ಮಾತನಾಡಲಿಲ್ಲ. ಮತ್ತೆ ಕೆಲವು ಕ್ಷಣಗಳಾದ ಮೇಲೆ, `Dont take otherwise' ನಗುತ್ತಾ ಹೇಳಿದ. `No it's alright' ಎಂದೆ.

" ನಿನಗೆ ಗೊತ್ತೇ, ನಾನು ಕೂಡ ದಕ್ಷಿಣ ಭಾರತದವನೇ ?"

"ಹೌದು ಹೆಸರಲ್ಲೇ ಗೊತ್ತಾಗುತ್ತದೆ" ಎಂದೆ.

"ಇಲ್ಲ, ಇನ್ನೂ ಸ್ವಲ್ಪ ಜಟಿಲವಿದೆ. ನಮ್ಮ ತಂದೆ ಮಲೆಯಾಳಿ, ತಾಯಿ ಶ್ರೀವತ್ಸವ. ಓದಿದ್ದೆಲ್ಲಾ ಸಾಗರ ವಿಶ್ವವಿದ್ಯಾನಿಲಯ, ಮಧ್ಯಪ್ರದೇಶ. ಅಷ್ಟೇ ಅಲ್ಲ, ನಾನು ಮದುವೆಯಾಗುವುದು ಕೂಡ ಶ್ರೀವತ್ಸವ ಹೆಣ್ಣು, ಪ್ರೀತಿಸಿ ಮದುವೆ ಆಗುತ್ತಿದ್ದೇನೆ. ಮನಶಾಸ್ತ್ರದಲ್ಲಿ ಡಾಕ್ಟರೇಟ್ ಮಾಡುತ್ತಿದ್ದಾಳೆ" ಹೀಗೆ ಹೇಳುತ್ತಾ ಹೋದ.

ಮತ್ತೆ ವಿಷಯ ಬದಲಿಸಿ " Even though basically I am a South Indian, I hate Soth Indians and their narrow mindedness.. ನಿನಗೊಂದು ವಿಷಯ ಗೊತ್ತೇ .. ?" ಏನು ಎನ್ನುವಂತೆ ನೋಡಿದೆ.

"ಭಾರತದ ಭೂಪಟ ನೋಡಿದ್ದಿ ತಾನೆ " ?

"ನೋಡಿದ್ದೇನೆ"

"ಮೇಲಿಂದ ಕೆಳಕ್ಕೆ ಸಂಕುಚಿತ ಗೊಳ್ಳುತ್ತಾ ಹೋಗುತ್ತದೆ" ನಂಬಿಯಾರ್ ಹೇಳುವ ವಿಷಯ ಆಗಲೇ ಅರ್ಥವಾಗಿದ್ದರೂ ಕೂಡ,

"ಹೌದು, ಸಂಕುಚಿತ ಆಗುತ್ತಾ ಹೋಗುತ್ತದೆ" ಎಂದೆ.

"ಹಾಗೆ ಮನುಷ್ಯನ ಮನಸ್ಸುಕೂಡ ಮೇಲಿಂದ ವಿಶಾಲವಾಗಿ ಶುರುವಾಗಿ ಕೆಳಕ್ಕೆಹೋಗುತ್ತಾ ಹೋಗುತ್ತಾ ಸಂಕುಚಿತ ಗೊಳ್ಳುತ್ತದೆ" ಎಂದ.

ಯಾವ ರೀತಿಯಲ್ಲಿ ಪ್ರತಿಕ್ರಿಯೆ ತೋರಿಸಬೇಕೋ ತೋಚಲಿಲ್ಲ. ಆಗ ನನ್ನ ಮುಖ ಪೆಳಿತಗೊಂಡಂತೆ ಆಗಿರಬೇಕು ...?

"ಎಲ್ಲಾ ದಕ್ಷಿಣ ಭಾರತದವರೂ ಒಂದೇ ಅಲ್ಲ, ನೀನು ತಲೆ ಕೆಡಿಸಿಕೊಳ್ಳ ಬೇಡ ವೆಂಕಟ್" ಎಂದ ನಂಬಿಯಾರ್ ಜೋರಾಗಿ ನಕ್ಕ, ನನಗೆ ಮನಸ್ಪೂರ್ತಿಯಾಗಿ ನಗಲಾಗಲಿಲ್ಲ.

ಆರು ದಿನಗಳಾದರೂ ಬರದಿದ್ದ ಧರ್ಮನ್ ಏಳನೇ ದಿನ ಸಾಯಂಕಾಲ ಇದ್ದಕ್ಕಿದ್ದಂತೆ ಕಾಣಿಸಿಕೊಂಡು

"ಸಾರಿ" ಯೋ ಸಾಮಿ ... ಏನೋ ತುರ್ತು ಕೆಲಸ ಇದ್ದುದ್ದರಿಂದ ಕೆಜಿಎಫ್‌ಗೆ ಹೋಗಿಬಿಟ್ಟೆ. ನಾನು ಹೋದರೆ ಏನಂತೆ ಇವರೆಲ್ಲ ಇದ್ದಾರಲ್ಲಾ, ಏನೂ ಚಿಂತೆ ಮಾಡಬೇಡ, ಎಲ್ಲಾ ನಮ್ಮ ಗೆಳೆಯರೇ, ನಿನಗೇನು ಬೇಕು ಹೇಳು. ನಾನಿದ್ದೇನೆ, ನಾನು ಬಂದು ಬಿಟ್ಟನಲ್ಲಾ." ಹೀಗೆ ಒಂದೇ ಸಮನೆ ಮಾತನಾಡುತ್ತಾ ಇದ್ದ, ಅದೂ ಹಿಂದಿ, ತಮಿಳು ಎರಡನ್ನೂ ಬೆರೆಸಿ.

" ನಡಿ ನಮ್ಮ ಮನೆಗೆ ಹೋಗೋಣ, ವಂದನೆಗಳು, ಶ್ರೀಮಾನ್ ನಂಬಿಯಾರ್, ನಮ್ಮ ಗೆಳೆಯನನ್ನು ನಿಮ್ಮ ಮನೆಯಲ್ಲಿ ಇಟ್ಟುಕೊಂಡಿದ್ದಕ್ಕೆ" ಎಂದ.

"ಧರ್ಮನ್, ಸ್ವಲ್ಪ ಹೊತ್ತು ಬಾಯಿ ಮುಚ್ಚಿಕೊಂಡು ಕುಳಿತುಕೋ, ಇನ್ನೂ ಮನೆ ಒಳಗೇನೇ ಬಂದಿಲ್ಲ, ಆಗಲೇ ಹೊರಟಿದ್ದೀಯಾ ?" ನಂಬಿಯಾರ್ ಹೇಳಿದ.

" ಓಹ್, ಧರ್ಮನ್ ನಿನ್ನ ಪ್ರೇಯಸಿ ಹೇಗಿದ್ದಾಳೆ ... ?" ರಾವತ್ ಕೇಳಿದ. ಹ್ಹ.. ಹ್ಹ.. ಎಂದು ಜೋರಾಗಿ ನಕ್ಕ ಧರ್ಮನ್

"ಹೋ ಸಾಲಿ ಎಲ್ಲಿ ಕೊಡ್ತಾಳೆ.. ಎಲ್ಲಾ ಮದುವೆ ಆದ ಮೇಲೆ, ಮದುವೆ ಆದ ಮೇಲೆ ಎನ್ನುತ್ತಾಳೆ" ಎಂದ.

"ಹಾಗಾದರೆ ಏನೂ ಕೊಡಲಿಲ್ಲವೇ..? ಏನೂ .." ರಾವತ್ ಛೇಡಿಸಿದ.

"ನಾನು ಬಿಡುತ್ತೇನೆಯೇ ....?"

"ಏನು ಮಾಡಿದೆ .. ?" ಪ್ರಶ್ನಿಸಿದ.

"ನೋಡು ಅದೆಲ್ಲ ಹೆಳ್ಬೇಕೆ ... ಮುತ್ತು, ಮೇಲ್ಮೇಲೆ ಮಾಮೂಲಿ... " ಎಂದ ನಗುತ್ತಾ.

"ಮತ್ತೆ ಇನ್ನೇನು ?"

"ಏನೂ ಸಿಕ್ಕಿಲ್ಲಾ" ಅಂದೆ. ರಾವತ್ ಹೇಳಿದ,

"ಇದೆಲ್ಲಾ ಏನು ಲೆಕ್ಕಾನೇ ..?" ಧರ್ಮನ್ ಹೇಳಿದ,

"ಇನ್ನೇನು ಮದುವೆ ಆಗುವುದಕ್ಕಿಂತ ಮುಂಚೆ ಇಷ್ಟು ಸಾಲದೆ ...?" ರಾವತ್ ಹೇಳಿದ

"ನೀನು ಇನ್ನೂ ಚಿಕ್ಕ ಹುಡುಗ ಸುಮ್ಮನೆ ಇರು" ಧರ್ಮನ್ ಹೇಳಿದ. ರಾವತ್ ಭುಜಗಳನ್ನು ಕುಪ್ಪಳಿಸುತ್ತಾ ನಗತೊಡಗಿದ.

ಎಲ್ಲರೂ ಅಲ್ಲೇ ಊಟಮಾಡಿದ ಮೇಲೆ ನಂಬಿಯಾರ್ ಮತ್ತು ರಾವತ್ ಗೆ ಕೃತಜ್ಞತೆಗಳನ್ನು ಸಲ್ಲಿಸಿ ನೇರವಾಗಿ ಧರ್ಮನ್ ಹಿಂದೆ ಹೋಗದೆ ಊಟ ಮತ್ತು ವಸತಿಗೆ ಹಣ ಕೊಡಲು ಹೋಗಿ ನಾನು ನಂಬಿಯಾರ್‌ನಿಂದ ಬೈಸಿಕೊಂಡೆ. ಸಂಕುಚಿತ ಮತ್ತು ವಿಶಾಲ ಭಾರತ ತನಗೆ ತಾನೇ ಹೊರಬಿದ್ದಿತ್ತು.

* * *

## 3 ಲಖನೌ, ಧರ್ಮನ್, ಹಿಂದಿ ಇತ್ಯಾದಿ

ಧರ್ಮನ್ ಮತ್ತು ನಾನು, ನನ್ನಲ್ಲಿದ್ದ ಸೂಟ್‌ಕೇಸ್ ಜೊತೆಗೆ ಸೈಕಲ್ ರಿಕ್ಷಾ ಏರಿ ಧರ್ಮನ ಮನೆಯ ಕಡೆಗೆ ಹೊರಟೆವು. ಸಾಯಂಕಾಲ ಎಂಟು ಗಂಟೆ, ಗಾಳಿ ಬೀಸುತ್ತಿದ್ದರೂ ಸೆಕೆಯ ತಾಪ ಇನ್ನೂ ಕಡಿಮೆಯಾಗಿರಲಿಲ್ಲ, ಸುಮಾರು ದೂರ ತಿರುವುಗಳಲ್ಲಿ ಸೈಕಲ್ ರಿಕ್ಷಾ ಏರುತ್ತಾ ಇಳಿಯುತ್ತಾ ಹೋಗುತ್ತಿದೆ, ನನಗ್ಯಾಕೋ ಅವನ ಅವಸ್ಥೆಯನ್ನು ನೋಡಲಾಗಲಿಲ್ಲ. ಧರ್ಮನ್ ಸಿಗರೇಟು ಹೊಗೆ ಬಿಡುತ್ತಾ ತಮಿಳಿನಲ್ಲಿ ಒಂದೇ ಸಮನೆ ಮಾತನಾಡುತ್ತಿದ್ದಾನೆ.

"ಕೆಜಿಎಫ್ ಅಂತಹ ಕೆಟ್ಟ ಸ್ಥಳ ಇನ್ನೊಂದಿಲ್ಲ. ಹುಡುಗರೂ, ಹುಡುಗಿಯರು ಯಾರೂ ಸರಿಯಿಲ್ಲ .. ಆ ಗಣಿ ಒಂದೇ ಅವರಿಗೆ ಆಧಾರ. ಅದರಲ್ಲೂ ಕಳ್ಳತನ ಮಾಡಿ ಎಲ್ಲಾ ಮುಗಿದುಹೋಗಿದೆ. ಇವತ್ತೋ ನಾಳೆಯೋ ಮುಚ್ಚಿ ಬಿಡುತ್ತಾರೆ. ತಮಿಳುನಾಡಿನಲ್ಲೂ ಸೇರಿಸೊದಿಲ್ಲ ಇವರನ್ನು. ಅದೇನೋ ಮೀಸಲಾತಿ ಇರುವುದರಿಂದ ಸ್ವಲ್ಪ ಮಟ್ಟಿಗೆ ಗೆದ್ದುಕೊಂಡರು". (ಧರ್ಮನ್ ಕೂಡ ಮೀಸಲಾತಿ ಗುಂಪೇ) .. ಹೀಗೆ ಮಾತನಾಡುತ್ತಲೇ ಇದ್ದಾನೆ.

ಸೈಕಲ್ ರಿಕ್ಷಾದವನು ಬೆವರಿನಿಂದ ಪೂರ್ತಿ ಒದ್ದೆಯಾಗಿದ್ದು, ಅವನ ಬಟ್ಟೆ ಬೆನ್ನಿಗೆ ಅಂಟಿಕೊಂಡಿದೆ.

"ಧರ್ಮನ್, ಮನೆ ಹತ್ತಿರ ಇದ್ದರೆ ಇಳಿದು ನಡೆದೇ ಹೋಗೋಣ. ನನಗ್ಯಾಕೋ ಸೈಕಲ್ ರಿಕ್ಷಾದಲ್ಲಿ ಕೂರಲು ಮನಸ್ಸೇ ಬರುತ್ತಿಲ್ಲ" ಎಂದೆ.

"ಯೋ ಇದಕ್ಕೆಲ್ಲಾ ಯೋಚಿಸಿದರೆ ಆಗುತ್ತಾ. ನೀನು ಕುಳಿತುಕೊಳ್ಳುವುದಿಲ್ಲಾ ಅಂದರೆ ಬೇರೆಯವರು ನಡೆದೇ ಹೋಗುತ್ತಾರೇನು ? ಸರಿ ಎಲ್ಲರೂ ನಡೆದೇಹೋಗಲು ಶುರುಮಾಡಿದರೆ ಅವರ ಹೊಟ್ಟೆ ಪಾಡಾದರೂ ಹೇಗೆ ? ಇದು ಒಂದು ತರಹ ಅಮಾನುಷ ಒಪ್ಪಿಕೊಳ್ಳುತ್ತೇನೆ, ಇದಾದರೂ ಪರವಾಗಿಲ್ಲ. ನಾವೂ ಕುಳಿತಿದ್ದೇವೆ, ಅವನೂ ಕುಳಿತಿದ್ದಾನೆ. ಕಲ್ಕತ್ತಾದಲ್ಲಿ ನೋಡಿದ್ದೀಯಾ ? ಅದೂ ಕಮ್ಯೂನಿಸ್ಟರ ರಾಜ್ಯದಲ್ಲಿ. ಕೈಯಲ್ಲಿ ಎತ್ತಿನ ಗಾಡಿಯನ್ನು ಹಿಡಿದುಕೊಂಡು ಬರೀ ಕಾಲಲ್ಲೇ ಓಡುತ್ತಾರೆ. ಬಸ್ಸು ಲಾರಿ ಟ್ರ್ಯಾಂ ಗಾಡಿಗಳ ಜೊತೆಯಲ್ಲಿ, ಅದೂ ಇದಕ್ಕಿನ್ನ ಅಮಾನುಷ ಅಲ್ಲವೇ ... ? ಎಲ್ಲಾ ಹೊಟ್ಟೆಗಾಗಿ ... ಗೇಣು ಬಟ್ಟೆಗಾಗಿ. ಯಾವ ನನ್ನಮಗ ಬಂದರೂ ಏನೂ ಆಗುವುದಿಲ್ಲ. ಇಲ್ಲೆಲ್ಲಾ ನೋಡು ನ್ಯಾಯವಾಗಿ ಸಂಪಾದಿಸಿದ್ದೇಯಾದರೆ ಇಷ್ಟು ದೊಡ್ಡ ದೊಡ್ಡ ಮಹಲುಗಳನ್ನು ಕಟ್ಟಲು ಸಾಧ್ಯವೇ ? ಇದೆಲ್ಲ ಕಳ್ಳರ ಯುಗ."

ಧರ್ಮನ್ ಇಷ್ಟೆಲ್ಲಾ ಯಾವಾಗ ಕಲಿತುಕೊಂಡನೋ ಅರ್ಥವಾಗಲಿಲ್ಲ. ಯಾಕೆಂದರೆ ಜ್ಞಾನಭಾರತಿಯ ಹಾಸ್ಟೆಲಿನಲ್ಲಿದ್ದಾಗ ನಾನಾದರೂ ಡಿ.ಎಸ್.ಎಸ್., ಬಂಡಾಯ ಅದೂ ಇದೂ ಎಂದು ಓಡಾಡುತ್ತಿದ್ದೆ. ಆದರೆ ಧರ್ಮನ್ ಮಾತ್ರ ಎಲ್ಲಿಗೂ ಬರುತ್ತಿರಲಿಲ್ಲ. ಅಷ್ಟರಲ್ಲಿ ರಿಕ್ಷಾ ಮನೆ ಹತ್ತಿರ ಬಂದಿದ್ದು, ಕೆಳಕ್ಕೆ ಇಳಿದಿದ್ದೇ ಧರ್ಮನ್ ರಿಕ್ಷಾದವನು ಕೇಳಿದಷ್ಟು ಹಣ ಕೊಟ್ಟು ಬೀಗ ತೆಗೆದು ವಿದ್ಯುತ್ ಸ್ವಿಚ್ ಒತ್ತಿದ. ಅದೊಂದು ಹಳೆಮನೆ. ಗೋಡೆಗಳು ಸುಣ್ಣ ಕಂಡು ಸುಮಾರು ವರ್ಷಗಳೇ ಕಳೆದಿವೆ. ಸಣ್ಣ ಪುಟ್ಟ ಸಾಮಾನುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಅಡಿಗೆ ಕೋಣೆಯಲ್ಲೂ ಅಷ್ಟೆ. ಆದರೆ ಬ್ಯಾಚುಲರ್ ಅಡಿಗೆ ಮಾಡಿಕೊಳ್ಳುವಷ್ಟು ಸಾಮಾನುಗಳಿವೆ.

ಬಂದಿದ್ದ ಸೆಖೆಗೆ ಬಟ್ಟೆಗಳನ್ನೆಲ್ಲಾ ಬಿಚ್ಚಿ ಎರಡು ಚಾಪೆಗಳ ಮೇಲೆ ಹಾಸಿಗೆಗಳನ್ನು ಹಾಸಿ ಕುಳಿತುಕೊಂಡೆವು. ಕುಡಿಯುವ ನೀರನ್ನು ಪಕ್ಕದಲ್ಲಿ ತಂದಿಟ್ಟುಕೊಂಡೆ. ಮೇಲೆ ಸೀಲಿಂಗ್ ಫ್ಯಾನು ಕಾಣದೆ ರಾತ್ರಿಯೆಲ್ಲಾ ಕಳೆಯುವುದಾದರೂ ಹೇಗೆ ಎಂಬ ಭಯ ಶುರುವಾಯಿತು. ಮನೆ ಪ್ರತ್ಯೇಕವಾಗಿದ್ದು ದಿನವೆಲ್ಲಾ ಬೀಳುವ ಬಿಸಿಲನ್ನು ಪೂರ್ತಿಯಾಗಿ ಹೀರಿಕೊಂಡ ಗೋಡೆಗಳು ಈಗ ನಿಧಾನವಾಗಿ ಹೊರಸೂಸುತ್ತಿದ್ದು ಸೆಕೆ ತಡೆದುಕೊಳ್ಳಲಾರದಷ್ಟಿತ್ತು. ಮನೆಯ ಒಂದು ಕಡೆ ಮಾತ್ರ ಬಾಗಿಲು ಕಿಟಕಿಗಳಿದ್ದು, ಗಾಳಿ ಹೇಗೆ ಬೀಸಿದರೂ ಒಳಕ್ಕೆ ಬರಲು ಅವಕಾಶವೇ ಇರಲಿಲ್ಲ.

ಟೀವಿ ರೇಡಿಯೋ ಎರಡೂ ಇಲ್ಲದೆ ಬರೀ ಧರ್ಮನ್ ಮಾತುಗಳ ಮೇಲೆಯೇ ನನ್ನ ಪ್ರಪಂಚ ನಿಂತಿತ್ತು. ಆ ಸೆಕೆಯಲ್ಲೂ ಸಿಗರೇಟ್ ಸೇದುತ್ತಿದ್ದ ಧರ್ಮನ್ ಪ್ರಪಂಚದ ಯಾವುದೋ ಮೂಲೆಯ ಒಂದು ಕಂಬವನ್ನ ಬಿಗಿಯಾಗಿ ಹಿಡಿದುಕೊಂಡವನಂತೆ ಮಾತನಾಡುತ್ತಿದ್ದಾನೆ. ರಾತ್ರಿ ಹನ್ನೊಂದು, ಹನ್ನೆರಡು ಗಂಟೆಯಾದರೂ ನಿದ್ದೆ ಬರಲಿಲ್ಲ. ಸೆಕೆಗೆ ಕೈ ಬೀಸಣಿಕೆಯಿಂದ ಗಾಳಿ ಬೀಸಿ ಬೀಸಿ ಕೈ ಸೋತುಹೋಗಿ, ನಿದ್ದೆ ತನಗೆ ತಾನೆ ಯಾವಾಗಲೋ ಬಂದಿತ್ತು.

ಮತ್ತೆ ಕಣ್ಣು ತೆರೆದಾಗ ಕಿಟಕಿಗಳಲ್ಲಿ ಬೆಳಕಿನ ಕಿರಣಗಳು ಸೂಸುತ್ತಿದ್ದರೂ ಎದ್ದೇಳಲು ಮನಸ್ಸು ಬರಲಿಲ್ಲ. ಶಕ್ತಿಯನ್ನೆಲ್ಲ ಕಳೆದುಕೊಂಡಂತೆ ದೇಹದಲ್ಲಿ ತ್ರಾಣವೇ ಇರಲಿಲ್ಲ. ಒಂದು ಗ್ಲಾಸ್ ನೀರನ್ನು ಕುಡಿದು ಸ್ವಲ್ಪಹೊತ್ತು ಸುಧಾರಿಸಿಕೊಂಡಮೇಲೆ ತುಸು ಶಕ್ತಿ ಬಂದಂತಾಯಿತು. ನಂತರ ದೈನಂದಿನ ಕೆಲಸಗಳು ಶುರುವಾದವು. ಸ್ನಾನ ಅಡಿಗೆ ಮಾಡಿಮುಗಿಸಿ ಊಟ ಮಾಡುವಾಗ ಗೊತ್ತಾಯಿತು, too many cooks spoil the broth ಎಂದು.

ಆಫೀಸಿಗೆ ಹೊರಡುವ ಮುಂಚೆ ಕೆಲವು ಸಬ್ಜಿಗಳ ಹೆಸರುಗಳನ್ನು ಧರ್ಮನ್ ನಿಂದ ಕೇಳಿಕೊಂಡೆ. ಯಾಕೆಂದರೆ ನಾನು ಒಬ್ಬನೇ ಹೋಟೆಲಿಗೆ ಹೋಗಬೇಕಾದಲ್ಲಿ ಸಬ್ಜಿಗಳ

ಹೆಸರುಗಳನ್ನಾದರೂ ಹೇಳಬೇಕಲ್ಲವೇ ? ಆಲೂಮಟ್ಟರ್ (ಆಲೂಗಡ್ಡೆ - ಬಟಾಣಿ ) ಆಲೂ ಗೋಬಿ ( ಆಲೂ - ಹೂ ಕೋಸು), ಪಾಲಕ್ ಪನ್ನೀರ್ ( ಸೊಪ್ಪು ಪನ್ನೀರ್, ಹಾಲಿನಲ್ಲಿ ಮಾಡಿದ್ದು), ಬೈಗನ್ ( ಬದನೆ), ರಾಜ್ಮಾ ( ದೊಡ್ಡ ಅಲಸಂದಿ) ಹೀಗೆ.

ಇಬ್ಬರೂ ತಮ್ಮ ತಮ್ಮ ಕಛೇರಿಗಳ ಕಡೆಗೆ ನಡೆದವು. ಅದೇ ಮಧ್ಯಾಹ್ನ ನಾನು ಒಬ್ಬನೇ ಹೋಟೆಲಿಗೆ ಹೋಗಬೇಕಾಗಿ ಬಂತು. ನೇರವಾಗಿ ಹೋಟೆಲಿಗೆ ಹೋಗಿ ಕುಳಿತುಕೊಂಡೆ. ಮಾಣಿ ಹತ್ತಿರ ಬಂದಿದ್ದೇ,

"ದೋ ರೋಟಿ, ಏಕ್ ಬೆಹನ್ ಸಬ್ಜೀ ಲಾವ್" ಎಂದೆ ಜೋರಾಗಿ. ಅಕ್ಕ ಪಕ್ಕದಲ್ಲಿದ್ದವರು ನನ್ನ ಕಡೆ ಹುಬ್ಬೇರಿಸಿ ನೋಡಿದರು.

"ಕ್ಯಾ ಸಾಬ್ . .?" ಮತ್ತೆ ಮಾಣಿ ಕೇಳಿದ.

"ದೋ ರೋಟಿ, ಏಕ್ ಬೆಹನ್ ಸಬ್ಜಿ ಲಾವ್ " ಎಂದೆ. ಇನ್ನಷ್ಟು ಜೋರಾಗಿ ಅವನಿಗೆ ಕೇಳಿಸಿತೋ ಇಲ್ಲವೋ ಎಂಬಂತೆ. ಮಾಣಿ ತಲೆ ಕೆರೆದು ಕೊಂಡು ಯೋಚಿಸಿದ. ಆಗಲೇ ಸುತ್ತಲೂ ನಗುತ್ತಿದ್ದವರ ಪೈಕಿ ಒಬ್ಬ,

"ಅರೇ ಬೈ ಸಾಬ್‌ಕ ಕಹಿ ಬೈಗನ್ ಸಬ್ಜೀ ತು ನೈ ಹೈ ಕ್ಯಾ ...?" ಎಂದ. ದಿಢೀರನೆ ದಿವ್ಯಜ್ಞಾನ ಪಡೆದ ಮಾಣಿ ಮತ್ತೆ

"ದೋ ರೋಟಿ ಏಕ್ ಬೆಹನ್ ಸಬ್ಜಿ" ಎಂದು ಜೋರಾಗಿ ಆಜ್ಞೆ ಮಾಡಿದ. ಎಲ್ಲರೂ ಗೊಳ್ಳನೆ ನಕ್ಕರು. ಹೊರಕ್ಕೆ ಬರುವ ತನಕ ನನ್ನ ಸ್ಥಿತಿ ಬಹಳ ಗಂಭೀರವಾಗಿತ್ತು. ಬೈಗನ್ ಎಂದರೆ ಬದನೆ, ಬೆಹನ್ ಎಂದರೆ ತಂಗಿ. ಈ ತಮಾಷೆಯನ್ನು ಧರ್ಮನಿಗೆ ಹೇಳಿ ಅವನು ಇಡೀ ಆಫೀಸಿನಲ್ಲೆಲ್ಲಾ ಪ್ರಸಾರ ಮಾಡಿಬಿಟ್ಟ.

ಧರ್ಮನ್ ಹೊಸದಾಗಿ ಲಖನೌಗೆ ಬಂದಾಗ ಒಂದು ತಮಾಷೆ ನಡೆದಿತ್ತಂತೆ. ಸೈಕಲ್ ರಿಕ್ಷಾದವನನ್ನು ನಿಲ್ಲಿಸಿ, ಹೋಗಬೇಕಾದ ಸ್ಥಳದ ಹೆಸರೇಳಿ ಎಷ್ಟು ತೆಗೆದುಕೊಳ್ಳುತ್ತೀಯ ಎಂದನಂತೆ. ಸೈಕಲ್ ರಿಕ್ಷಾದವನು ಸಾಬ್ ದೇಡ್ (ಒಂದೂವರೆ) ರೂಪಾಯಿ ಕೊಡಿ ಎಂದಾಗ, ನೈ ನೈ ಹಮ್ ಡಾಯಿ ರುಪಾಯ್ (ಎರಡೂವರೆ) ದೇಂಗೆ. ಧರ್ಮನ್ ಹೇಳಿದನಂತೆ. ಸ್ವಲ್ಪ ಗೊಂದಲಗೊಂಡ ರಿಕ್ಷಾದವನು ಆಸನವನ್ನು ಚೆನ್ನಾಗಿ ಒರೆಸಿ ಕೂರಿಸಿಕೊಂಡು ಮನೆಯ ಹತ್ತಿರ ಬಿಟ್ಟಾಗ ಧರ್ಮನ್ ಒಂದೂವರೆ ರೂಪಾಯಿ ಕೊಟ್ಟನಂತೆ. ಈಗ ನಿಜವಾಗಿಯೂ ಗೊಂದಲಗೊಂಡ ರೀಕ್ಷಾದವನು ಡಾಯ್ ರೂಪಾಯಿ ಕೊಡಿ ಎಂದು ಜಗಳಾನೇ ಶುರು ಮಾಡಿದನಂತೆ. ಧರ್ಮನ್, ಡಾಯ್‌ಗೆ ಒಂದೂವರೆ ರೂಪಾಯಿ ಎಂದು ತಿಳಿದುಕೊಂಡಿದ್ದ ಕಾರಣ ಅಕ್ಕಪಕ್ಕದವರೆಲ್ಲಾ ಸೇರಿ ಜಗಳವನ್ನು ಬಂದ್ ಮಾಡಿಸಿದರಂತೆ.

ಆಗಾಗ ಸಾಯಂಕಾಲ ಅಡಿಗೆ ಮಾಡಲು ಬೋರಾಗಿ, "ಮಾಮಿ ಮೆಸ್‌ಗೆ" ಹೋಗುತ್ತಿದ್ದೆವು. ತಮಿಳು ನಾಡಿಂದ ಬಂದು ಲಖನೌನಲ್ಲಿ ನೆಲೆಸಿರುವ ಒಂದು ತಮಿಳು ಕುಟುಂಬ ಹತ್ತಿರದಲ್ಲೇ ಒಂದು ಮೆಸ್ ನಡೆಸುತ್ತಿತ್ತು. ಅಲ್ಲಿಗೆ ಬರುತ್ತಿದ್ದವರೆಲ್ಲ ತಮಿಳು ಬ್ಯಾಚುಲರ್‌ಗಳೇ. ಮೂರು ತಲೆಮಾರುಗಳ ಕೊಂಡಿಗಳಂತೆ, ಮೂವರು ಹೆಂಗಸರೆ, ಮೆಸ್ ನಡೆಸುತ್ತಿದ್ದರು. ಸುಮಾರು ಎಪ್ಪತ್ತೈದು ವರ್ಷಗಳ ಹಣ್ಣು ಹಣ್ಣಾದ ಮುದುಕಿ ಕೆಲಸ ಮಾಡುವ ಒಂದು ಹುಡುಗಿಯ ಜೊತೆ ತಟ್ಟೆ ಗ್ಲಾಸುಗಳನ್ನು ತೊಳೆದುಕೊಡುತ್ತಿದ್ದರೆ, ಸುಮಾರು ಐವತ್ತು ವರ್ಷಗಳ ಹೆಂಗಸು ಅಡಿಗೆ ತಯಾರಿಯನ್ನು ನೋಡಿಕೊಳ್ಳುತ್ತಿದ್ದಳು. ಸುಮಾರು ಮೂವತ್ತೈದು ವರ್ಷಗಳ ಹೆಂಗಸು ಎಲ್ಲರಿಗೂ, ತಿಂಡಿ ಊಟ ಬಡಿಸುತ್ತಾ ಲೆಕ್ಕ ಬರೆದುಕೊಳ್ಳುತ್ತಾ, ಹಣ ವಸೂಲಿ ಮಾಡಿ ಕೊಳ್ಳುತ್ತಿದ್ದಳು. ತಿನ್ನುವಷ್ಟು ಅನ್ನ, ಒಂದು ಪಲ್ಯ, ರಸಂ, ಮೊಸರು, ಉಪ್ಪಿನಕಾಯಿ ಇಷ್ಟೇ ಊಟದ ಐಟಂಗಳು. ಯಾವುದೋ ಕಾರ್ಖಾನೆಯಲ್ಲಿ ಒಂದೇ ರೀತಿಯ ಫಾರ್ಮುಲಾದಲ್ಲಿ ತಯಾರು ಮಾಡಿದಂತಹ ರುಚಿ. ಏನೇ ತರಕಾರಿ ಹಾಕಿದ್ದರೂ, ವಾರಗಟ್ಟಲೆ ಅದೇ ರುಚಿ. ಅದೆಲ್ಲಾ ಒಂದು ಕಡೆಗಿರಲಿ, ಸಹಿಸಲಾರದ ವಿಷಯ ಎಂದರೆ ಅವರು ತಿನ್ನುತ್ತಿದ್ದ ರೀತಿ. ಅನ್ನದ ಜೊತೆ ರಸಂ ಮತ್ತು ಮೊಸರು ಕಲಸುವ ಸಮಯದಲ್ಲಿ ಅವರ ಕಡೆಗೆ ನೋಡಲಾಗುತ್ತಿರಲಿಲ್ಲ. ನನಗೆ ಬಹಳಷ್ಟು ಸಲ ವಾಕರಿಕೆ ಬರುತ್ತಿತ್ತು. ಕೆಲವರು ತಿನ್ನುವಾಗಲಂತೂ ಸಹಿಸಲಸಾಧ್ಯವಾದ ಸಪ್ಪಳ. ಬೆರಳುಗಳಲ್ಲಿ ಹಿಸುಕುವುದು , ಹಿಂಡುವುದು, ತಟ್ಟೆಗೆ ಹಾಕಿ ತೀಡುವುದು ನೆಕ್ಕುವುದು, ಅಬ್ಬಬ್ಬ ಒಟ್ಟಿನಲ್ಲಿ ವರ್ಣಿಸಲಾಗದ ಕೃತ್ಯವೆನ್ನಬೇಕು. ಸಾಧ್ಯವಾದಷ್ಟು ಬೇಗನೆ ಒಂದು ಗೋಡೆಯ ಮೂಲೆಯಲ್ಲಿ ಕುಳಿತು ತಲೆ ಮೇಲಕ್ಕೆ ಎತ್ತದೆ ಊಟ ಮಾಡಿ ಹೊರಕ್ಕೆ ಬಂದು ಬಿಡುತ್ತಿದ್ದೆ.

ಸುಮಾರು  ಒಂದು ತಿಂಗಳು ಅವಸ್ಥೆ ಬಿದ್ದಮೇಲೆ ಆ ಕಡೆ ಹೋಗುವುದನ್ನೇ ಬಿಟ್ಟುಬಿಟ್ಟೆ. ಅದಾದ ಸುಮಾರು ಹತ್ತು ವರ್ಷಗಳ ಕಾಲ ನನ್ನ ಉತ್ತರ ಭಾರತ ಮತ್ತು ಉತ್ತರ ಈಶಾನ್ಯದ ಸೇವೆಯಲ್ಲಿ ಬೆಂಗಾಲಿ, ಯುಪಿ, ಒರಿಯಾ, ಬಿಹಾರಿ, ಎಂ.ಪಿ., ಕಾಶ್ಮೀರಿ, ರಾಜಾಸ್ಥಾನಿ, ಗುಜರಾತಿ, ನಾಗಾ, ಮಣಿಪುರಿ, ಅಸ್ಸಾಮಿ, ಮತ್ತು ಮುಸ್ಲೀಂ ಜನರ ಜೊತೆ ಕುಳಿತು ಊಟ ಮಾಡಿದ್ದೇನೆ, ಆದರೆ ಎಲ್ಲೂ ಆ ರೀತಿಯ ಅನುಭವವಾಗಲಿಲ್ಲ.

ಕಛೇರಿಯ ಹತ್ತಿರದಲ್ಲೆ ಒಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡೆ. ಎರಡು ತಿಂಗಳು ಸಂಬಳವನ್ನು ಒಟ್ಟಿಗೆ ಪಡೆದು ಕೆಜಿಎಫ್ ಕಡೆಗೆ ಪ್ರಯಾಣ ಪ್ರಾರಂಭಿಸಿದೆ. ಲಖನೌದಿಂದ ಝಾನ್ಸಿಗೆ ಬಾಂಬೆ - ಗೋರಖ್‌ಪುರ್ ರೈಲಿನಲ್ಲಿ, ಝಾನ್ಸಿಯಿಂದ ಮದ್ರಾಸಿಗೆ, ಜಿ.ಟಿ. ಎಕ್ಸ್‌ಪ್ರೆಸ್‌ನಲ್ಲಿ ಮತ್ತು ಮದ್ರಾಸ್‌ನಿಂದ ಬಂಗಾರಪೇಟೆಗೆ ಮದ್ರಾಸ್ - ಬೆಂಗಳೂರು ರೈಲಿನಲ್ಲಿ ಪ್ರಯಾಣ ಮಾಡಿ ಬಂಗಾರಪೇಟೆ ತಲುಪಿದೆ. ಸುಶೀಲಳಿಗೆ ಪತ್ರ ಬರೆದು ತಯಾರಾಗಿರುವಂತೆ ಮೊದಲೆ ತಿಳಿಸಿದ್ದೆ.

ಈಗ ನನ್ನಲ್ಲಿ ಕುಟ್ಟುತ್ತಿರುವ ಒಂದೇ ಪ್ರಶ್ನೆ ಎಂದರೆ ಉತ್ತರ ಭಾರತದಲ್ಲಿ ಹೆಚ್ಚೆಚ್ಚು ಜನ ಬೆಳ್ಳಗೆ ಇರುವುದು. ನನ್ನ ಪತ್ನಿ ಸುಶೀಲಳ ಹೆಸರು ಸುಶೀಲ ಎನ್ನುವುದಕ್ಕಿಂತ ಶ್ಯಾಮಲೆ ಎಂದಿದ್ದರೆ ಚೆನ್ನಾಗಿ ಒಪ್ಪುತ್ತಿತ್ತು. ಕಾರಣ ಅವಳ ಕಪ್ಪಾದ ಬಣ್ಣ. ಒಂದೂವರೆ ವರ್ಷದ ಮಗ ಕ್ರಾಂತಿ ಕೂಡ ಸುಮಾರು ಕಪ್ಪೆ, ಅವರಿಬ್ಬರೇ ಅಲ್ಲ, ನಾನೂ ಕೂಡ ಕಪ್ಪೆ. ನಾನು ಕಪ್ಪಾಗಿರುವುದರ ಬಗ್ಗೆ ನನಗೇನೂ ಆತಂಕ ಇರಲಿಲ್ಲ. ಆದರೆ ಸುಶೀಲ ಕಪ್ಪಾಗಿರುವುದು...?

ಬಂಗಾರಪೇಟೆ ರೈಲ್ವೆ ನಿಲ್ದಾಣದಲ್ಲಿ ಇಳಿದಿದ್ದೇ ಲಖನೌಗೆ ಟಿಕೆಟ್ ಕಾದಿರಿಸಿ ಕೆಜಿಎಫ್ ತಲುಪಿದೆ. ನಮ್ಮ ತಂದೆ ತಾಯಿ, ಅತ್ತೆ ಮಾವ, ಸಂಬಂಧಿಕರನ್ನು ಭೇಟಿ ಮಾಡಿ, ಸುಶೀಲ ಮತ್ತು ಕ್ರಾಂತಿಯ ಜೊತೆಗೆ ಲಖನೌ ಕಡೆಗೆ ಹೊರಡಲು ತಯಾರಿ ಮಾಡಿಕೊಂಡೆ. ಹೋಗುವ ದಿನ, ಮಾವ ಒಂದು ಗೋಣಿಚೀಲದಲ್ಲಿ ಕೆಲವು ಅಡಿಗೆ ಪಾತ್ರೆಗಳನ್ನು ತುಂಬಿ ಮೂಟೆ ಕಟ್ಟಿದರೆ, ನಾನು ಸೂಟ್‌ಕೇಸಿನಲ್ಲಿ ಬಟ್ಟೆಗಳನ್ನು ತುಂಬಿಕೊಂಡೆ. ಇವೆರಡರ ಜೊತೆಗೆ ಇನ್ನೊಂದು ಸಣ್ಣ ಕೈ ಬ್ಯಾಗು. ಬಂಗಾರ ಪೇಟೆಯಿಂದ ಮದ್ರಾಸ್ ಮುಖಾಂತರ ಲಖನೌ ಕಡೆಗೆ ನಮ್ಮ ಪ್ರಯಾಣ ಪ್ರಾರಂಭವಾಯಿತು.

ರೈಲಿನಲ್ಲಿ, ಪಕ್ಕದಲ್ಲಿ ಕುಳಿತಿದ್ದ ಸುಶೀಲಳನ್ನು ಆಗಾಗ ನೋಡುತ್ತಾ ಕಪ್ಪಾಗಿದ್ದರು "ಗುಡ್ ಲುಕಿಂಗ್" ಎನ್ನುವಷ್ಟು ಸುಂದರವೆ ಎಂದುಕೊಳ್ಳುತ್ತಾ ಯೋಚಿಸುತ್ತಿದ್ದೆ. ಆಗಲೆ ತೊದಲು ನುಡಿಗಳನ್ನು ಸೃಷ್ಟಿಸುತ್ತಿದ್ದ ಕ್ರಾಂತಿ ಕೂಡ ಕಪ್ಪಾಗಿದ್ದು ನೋಡಲು ಸುಂದರವಾಗಿಯೇ ಕಾಣುತ್ತಿದ್ದ. ಎರಡೂವರೆ ದಿನಗಳಾದ ಮೇಲೆ ಲಖನೌ ನಿಲ್ದಾಣ ಬಂದಿತು. ನಿಲ್ದಾಣದಲ್ಲಿ ಇಳಿಯುವುದಕ್ಕಿಂತ ಮುಂಚೆ, ಸುಶೀಲ

"ರೀ ನನಗೇಕೋ ಭಯಾ ಆಗುತ್ತೆ" ಎಂದಳು.

"ಏನೂ ಆಗುವುದಿಲ್ಲ ನಾನಿಲ್ಲವೆ ....," ಧೈರ್ಯ ಹೇಳಿದೆ. ಸಾಮಾನುಗಳನ್ನು ಕೂಲಿ ಆಳಿನ ಕೈಯಲ್ಲಿ ಹೊರಸುತ್ತಾ, ಕ್ರಾಂತಿಯನ್ನು ಎತ್ತಿಕೊಂಡು ನಿಲ್ದಾಣದಿಂದ ಹೊರಕ್ಕೆ ನಡೆದು ಬರುತ್ತಿದ್ದಂತೆ, ಸುಶೀಲ ಹಿಂದೆಯೇ ಬರತೊಡಗಿದಳು. ಸೈಕಲ್ ರಿಕ್ಷಾದವರು ಮತ್ತು ಟ್ಯಾಕ್ಸಿಯವರು ಹಿಂದೆ ಮುಂದೆ ಕೂಗಾಡುತ್ತ ಬರುತ್ತಿದ್ದು, ಕೆಲವರಂತು ಅಡ್ಡಗಟ್ಟಿ ನಿಲ್ಲುತ್ತಿದ್ದಾರೆ, ಹೊರಕ್ಕೆ ಬಂದ ಕೂಲಿ ಸಾಮಾನುಗಳನ್ನು ಇಳಿಸಿ ಹಣ ತೆಗೆದುಕೊಂಡು ಹೊರಟು ಬಿಟ್ಟ. ಹಿಂದೆಯೆ ಬಂದಿದ್ದ ಒಬ್ಬ ಸೈಕಲ್ ರಿಕ್ಷಾದವನಿಗೆ ಹನ್ನೆರಡು ರೂಪಾಯಿಗಳನ್ನು ಕೊಡುವುದಾಗಿ ತಿಳಿಸಿ ಮಹಾನಗರಕ್ಕೆ ಹೋಗುವಂತೆ ಮೂವರು ಕುಳಿತುಕೊಂಡೆವು.

ಸಾಯಂಕಾಲದ ಸೂರ್ಯ ಪಶ್ಚಿಮದ ಕಡೆಗೆ ವಾಲಿದ್ದರೂ, ಬಿಸಿಲಿನ ತಾಪ ಕಡಿಮೆಯಾಗಿರಲಿಲ್ಲ. ರೈಲ್ವೆ ನಿಲ್ದಾಣ ಚಾರ್‌ಬಾಗಿನಿಂದ ಹಜ್‌ರತ್‌ಗಂಜ್ ದಾಟಿ ಗೋಮತಿ

ನದಿಯ ಇಳಿಜಾರಿನಲ್ಲಿ ಸೈಕಲ್ ರಿಕ್ಷಾ ಹೋಗುತ್ತಿದೆ. ನಮ್ಮನ್ನು ಹಿಂದಕ್ಕೆ ಹಾಕಿ ವೇಗವಾಗಿ ಹೋಗುತ್ತಿರುವ ಸೈಕಲ್ ರಿಕ್ಷಾ ಒಂದರಲ್ಲಿ ಇಬ್ಬರು ಮುಸ್ಲೀಮ್ ಹೆಂಗಸರು ಕುಳಿತಿದ್ದಾರೆ. ಇಬ್ಬರೂ ಕಪ್ಪಾದ ಬುರ್ಖಾ ಧರಿಸಿದ್ದರೂ ಮುಖವಾಡ ಮುಚ್ಚಿರಲಿಲ್ಲ. ಕೆಂಪಾದ ಗೋಧಿ ಬಣ್ಣದ ಔರತ್‌ಗಳು. ನಮ್ಮ ಕಡೆಯೇ ನೋಡುತ್ತ ನಗುತ್ತಿದ್ದಾರೆ...?

"ರೀ ಸ್ವಾಮಿ" ಎಂದಳು ಸುಶೀಲ.

"ಏನು" ಎನ್ನುವಂತೆ ಸುಶೀಲಳ ಕಡೆಗೆ ನೋಡಿದೆ.

"ಅವರು ನನ್ನನ್ನೇ ನೋಡಿ ನಗುತ್ತಿದ್ದಾರೆ" ಎಂದಳು. ನನಗೂ ಹಾಗೆ ಅನ್ನಿಸಿತು.

"ಆಯಿತು , ನೀನು ಜೋರಾಗಿ ನಗು ಎಂದೆ. ಸುಶೀಲ ಅವರ ಕಡೆ ನೋಡಿ ಜೋರಾಗಿ ನಕ್ಕಳು ಅಷ್ಟೆ. ಅನಂತರ ಅವರಿಬ್ಬರು ನಮ್ಮ ಕಡೆಗೆ ತಿರುಗಿಯೂ ನೋಡಲಿಲ್ಲ.

ಗೋಮತಿ ಸೇತುವೆಯ ಮುಖಾಂತರ ಗೋಲ್ ಮಾರ್ಕೆಟ್ ದಾಟಿದ ಸೈಕಲ್ ರಿಕ್ಷಾ ಮನೆಯ ಮುಂದೆ ನಿಂತುಕೊಂಡಿತು. ಸೈಕಲ್ ರಿಕ್ಷಾದವನು ಬೆವರು ಮು[illegible]ಯಾಗಿದ್ದ, ಅವನ ಸ್ಥಿತಿ ನೋಡಲಾಗದೆ ಹದಿನೈದು ರೂಪಾಯಿಗಳನ್ನು ಕೊಟ್ಟು ಕಳುಹಿಸಿದೆ.

ನಮ್ಮ ಮನೆ ಹಿಂದಿನ ಮನೆಯಾಗಿದ್ದರಿಂದ, ಸಾಮಾನುಗಳನ್ನು ಮನೆಯ ಮುಂದೆ ಇರಿಸಿ ಮುಂದೆ ಹೋಗಿ ಬಾಗಿಲು ತಟ್ಟಿದೆ. "ಆಯಾ" ಎಂಬ ಧ್ವನಿಯನ್ನು ಕೇಳಿ ಹಿಂದಕ್ಕೆ ಬಂದು ನಿಂತುಕೊಂಡೆ. ಬಾಗಿಲೇನೋ ತೆರೆದುಕೊಂಡಿತು. ಬಾಗಿಲಲ್ಲಿ ದೊಡ್ಡ ಹೊಟ್ಟೆಯ ಕಿಶೋರ್ ಶ್ರೀವತ್ಸವ ಒಂದೇ ಒಂದು ತುಂಡು ಪಂಚೆಯಲ್ಲಿ ಸ್ನಾನದ ಕೋಣೆಯಿಂದ ಹಾಗೆ ಬಂದು ನಿಂತಿದ್ದ. ಸುಶೀಲಳನ್ನು ಪರಿಚಯಿಸಿದೆ. ಕಿಶೋರ್ ಶ್ರೀವತ್ಸವ ಎರಡೂ ಕೈಗಳನ್ನು ಜೋಡಿಸಿ "ನಮಸ್ಕಾರ್" ಎಂದಿದ್ದೆ ಹಿಂದಕ್ಕೆ ತಿರುಗಿಕೊಂಡ. ತುಸು ಸೆಳೆತಗೊಂಡ ಸುಶೀಲ ಮುಖವನ್ನು ಕಹಿ ಮಾಡಿಕೊಂಡಳು. ಬ್ಯಾಂಕ್‌ನಲ್ಲಿ ವ್ಯವಸ್ಥಾಪಕನಾಗಿದ್ದ ಕಿಶೋರ್ ಶ್ರೀವತ್ಸವ ಮನೆಯ ಮಾಲಿಕೆ ಅವಿವಾಹಿತ ಸ್ತ್ರೀ ವೀಣಾ ಸಿನ್ಹಳ ತಂಗಿಯ ಗಂಡ, ಎಲ್ಲರೂ ಒಂದೇ ಮನೆಯಲ್ಲಿದ್ದರು.

ಏನೇನೂ ಸಾಮಾನುಗಳಿಲ್ಲದ ಕಾರಣ ಸಣ್ಣ ಮನೆಯೂ ಖಾಲಿ ಖಾಲಿ ಆಗಿ ಕಾಣುತ್ತಿತ್ತು. ಸಾಮಾನುಗಳನ್ನು ಪಟ್ಟಿ ಮಾಡಿಕೊಂಡು ನಿಶಾಂತ್‌ಗಂಜ್ ಮಾರ್ಕೆಟ್ ಕಡೆಗೆ ನಡೆಯತೊಡಗಿದೆ. ಎರಡು ಬಕೆಟ್‌ಗಳು, ಸ್ಟೋವ್, ಒಂದೆರಡು ಅಲ್ಯೂಮಿನಿಯಂ ಪಾತ್ರೆಗಳು, ಪ್ಲಾಸ್ಟಿಕ್ ಜರಿಕೇನ್, ಮಿಟ್ಟಿಥೇಲ್, ಬೇಳೆ, ಸಕ್ಕರೆ, ಉಪ್ಪು ಹೀಗೆ ಪಟ್ಟಿಯಲ್ಲಿದ್ದ

ಎಲ್ಲಾ ಸಾಮಾನುಗಳನ್ನು ರಿಕ್ಷಾದಲ್ಲಿ ಹಾಕಿಕೊಂಡು ಬಂದೆ. ಬಂದಿದ್ದೇ ಬಕೆಟ್‌ಗಳಲ್ಲಿ ತಣ್ಣೀರು ಹಿಡಿದು ಸ್ನಾನಮಾಡಿದ ಸುಶೀಲ ಅಡಿಗೆ ಶುರುಮಾಡಿದಳು. ನಾನು ಕ್ರಾಂತಿಯನ್ನು ಆಡಿಸ ತೊಡಗಿದೆ. ಸುತ್ತಲೂ ಮನೆಗಳಿದ್ದು ನಮ್ಮ ಮನೆ ಎರಡಂತಸ್ತಿನ ಕೆಳಮನೆಯಾಗಿದ್ದರಿಂದ ಸ್ವಲ್ಪ ತಂಪಾಗಿತ್ತು.

ರಾತ್ರಿ ಸುಮಾರು ಎಂಟು ಗಂಟೆಯಾಗಿತ್ತು. ಬಾಗಿಲನ್ನು ಯಾರೋ ಕುಟ್ಟಿದರು. ಬಾಗಿಲು ತೆಗೆದಿದ್ದೇ,

"ಮೇ ಐ ಕಮ್ ಇನ್" ? ಎಂಬ ಸ್ವರದ ಜೊತೆಗೆ ನೈಟಿಯಲ್ಲಿದ್ದ ವೀಣಾ ಸಿನ್ಹ ಬಾಗಿಲಲ್ಲಿ ನಿಂತಿದ್ದಳು. ಸುಶೀಲಳಿಗೆ ಪರಿಚಯಿಸಿದೆ. ಕ್ರಾಂತಿ ಪಿಳಿ ಪಿಳಿಯಾಗಿ ನೋಡಿದ. ಮೆಟ್ರಿಕ್ಯುಲೇಷನ್ ಓದಿದ್ದ ಸುಶೀಲ ಅತ್ತ ಇಂಗ್ಲೀಷು ಗೊತ್ತಿಲ್ಲದೆ, ಇತ್ತ ಹಿಂದಿಯೂ ಗೊತ್ತಿಲ್ಲದೆ ವೀಣಾ ಸಿನ್ಹಳ ಮಾತುಗಳಿಗೆ ಪೆದ್ದು ಪೆದ್ದಾಗಿ ಉತ್ತರ ನೀಡುತ್ತ ಕಣ್ಣು ಕಣ್ಣು ಬಿಡುತ್ತಿದ್ದಳು. ಸನ್ನಿವೇಶ ಕೈ ಮೀರುವುದಕ್ಕಿಂತ ಮುಂಚೆಯೇ ಮಧ್ಯೆ ಪ್ರವೇಶಿಸಿದ ನಾನು ವೀಣಾ ಸಿನ್ಹಳಿಗೆ ಇಂಗ್ಲೀಷಿನಲ್ಲಿ ಸುಶೀಲಳಿಗೆ ತೆಲುಗಿನಲ್ಲಿ ತರ್ಜುಮೆ ಮಾಡತೊಡಗಿದೆ.

ವೀಣಾ ಸಿನ್ಹಾ ಹೋದ ಮೇಲೆ ಸುಶೀಲ ನಮ್ಮ ಮನೆಯಲ್ಲಿ ಏನೂ ಸಾಮಾನುಗಳಿಲ್ಲ, ಎಲ್ಲಾ ಕೊಂಡುಕೊಳ್ಳಬೇಕೆಂದು ರಾಗ ಶುರುಮಾಡಿದಳು. (ಆ ರಾಗ ಇನ್ನೂ ಮುಂದುವರಿಯುತ್ತಲೇ ಇದೆ.) ಸುಶೀಲ ಇಂಗ್ಲೀಷ್ ಮತ್ತು ಹಿಂದಿ ಭಾಷೆಗಳನ್ನು ಈಜು ಕಲಿಯುವವರು ಏಕಕಾಲಕ್ಕೆ ಕೈಯಿಕಾಲುಗಳನ್ನು ಅಲ್ಲಾಡಿಸುವಂತೆ ವೀಣಾ ಸಿನ್ಹ ಮತ್ತು ಅವರ ತಂಗಿಯ ಜೊತೆ ಅರ್ಧಂಬರ್ಧ ಮಾತನಾಡುತ್ತಾ ಕಲಿತುಕೊಳ್ಳುತ್ತಿದ್ದಳು.

ಬಿಸಿಲು ಕಾಲ ಮುಗಿಯುತ್ತಾ ಬರುತ್ತಿದ್ದಂತೆ ಮಳೆಗಾಲ ಶುರುವಾಗಿ ಹವಾಗುಣ ತಂಪೇರುತ್ತಿತ್ತು. ಉಣ್ಣೆ ಬಟ್ಟೆಗಳು ಮತ್ತು ರಜಾಯಿಗಳು ಮನೆಗಳಿಂದ ಹೊರಕ್ಕೆ ಬಂದು ಲಖನೌ ಬೀದಿಗಳಲ್ಲಿ ಕಾಣಿಸಿ ಕೊಳ್ಳ ತೊಡಗಿದವು.

1985ರ ಸೆಪ್ಟೆಂಬರ್ ತಿಂಗಳು 12ನೇ ತಾರೀಖು ಬೆಳಿಗ್ಗೆ ಜಿನುಗಲು ಶುರುವಾದ ಮಳೆ ಒಂದೇ ಸಮನೆ ಬೀಳುತ್ತಾ ಮೋಡಗಳು ಆಕಾಶದಲ್ಲಿ ಗುಂಪು ಗುಂಪಾಗಿ, ಕಪ್ಪು ಕಪ್ಪಾಗಿ ಘರ್ಜಿಸತೊಡಗಿದವು. ಒಂದು, ಎರಡು, ಮೂರು ದಿನಗಳಾದರೂ ಮಳೆ ನಿಲ್ಲಲಿಲ್ಲ. ರಸ್ತೆಗಳಲ್ಲೆಲ್ಲಾ ತುಂಬಿ ನಿಂತ ಮಳೆ ನೀರು ಮನೆ ಬಾಗಿಲುಗಳವರೆಗೂ ಬರತೊಡಗಿತು. ದಿನ ನಿತ್ಯದ ಚಟುವಟಿಕೆಗಳು ಅಸ್ತವ್ಯಸ್ತವಾಗಿದ್ದರ ಜೊತೆಗೆ ವೀಣಾ ಸಿನ್ಹ ಆಗಾಗ ನಮ್ಮ ಮನೆಗೆ ಬಂದು,

"ನಾನು ಚಿಕ್ಕವಳಾಗಿದ್ದಾಗ ಇದೇ ರೀತಿ ಒಮ್ಮೆ ಮಳೆ ಬಂದು ನಮ್ಮ ನೆಲಮನೆ

ಪೂರ್ತಿ ನೀರಿನಲ್ಲಿ ಮುಳುಗಿ ಹೋಗಿತ್ತು. ಆಗ ನಾವೆಲ್ಲ ಮೇಲಿನ ಮಹಡಿಯಲ್ಲಿ ಕಾಲ ಕಳೆದೆವು. ಮೂರುದಿನಗಳು ನೀರು, ಊಟ, ಏನೂ ಇರಲಿಲ್ಲ" ಹೀಗೆ ಏನೇನೋ ಹೇಳುತ್ತಾ ಬಂದು ಹೋಗುತ್ತಿದ್ದಳು.

ಈಗ ನಾವಿರುವುದು ನೆಲ ಮನೆಯೇ. ರಾತ್ರಿ ಎಲ್ಲರೂ ಮಲಗಿ ನಿದ್ದೆ ಮಾಡುತ್ತಿರುವಾಗ ನೀರು ಮನೆಗೆ ನುಗ್ಗಿ ಬಿಟ್ಟರೆ ಏನು ಮಾಡುವುದು ..? ಮಹಡಿಗೆ ಹೋಗಿ ಬಿಡಬೇಕು. ರಾತ್ರಿಯೆಲ್ಲಾ ನಿದ್ದೆ ಮಾಡಬಾರದು ಲಖನೌ ನಗರವನ್ನು ಇಭ್ಭಾಗ ಮಾಡಿ ಹರಿಯುತ್ತಿದ್ದ ಗೋಮತಿ ನದಿ ಉಕ್ಕಿ ಹರಿದುಬಿಟ್ಟರೆ .. ? ಇಷ್ಟು ದೂರದ ಊರಿನಲ್ಲಿ ಯಾರು ಸಂಬಂಧಿಕರಿಲ್ಲದ ಸ್ಥಳದಲ್ಲಿ ಸಾಯುವುದಾದರೂ ಹೇಗೆ ? ಛೇ.. ಛೇ.. ಹಾಗಾಗ ಬಾರದು. ಹಾಗೆ ಆಗುವುದಿಲ್ಲ ಏನೇನೋ ಯೋಚನೆಗಳು.

ಸುಶೀಲ ಮತ್ತು ಕ್ರಾಂತಿ ನಿದ್ದೆ ಮಾಡುತ್ತಿದ್ದರೆ, ನಾನು ಮಾತ್ರ ನಿದ್ದೆ ಬರದೆ ಹೊರಳಾಡುತ್ತಿದ್ದೇನೆ. ಆಗಾಗ ಮಳೆಯ ಜೊತೆಗೆ ಗುಡುಗು, ಸಿಡಿಲು ಆರ್ಭಟಿಸುತ್ತಿದೆ. ಮೂರು ದಿನಗಳೂ ಒಂದೇ ಸಮನೆ ಧಾರಾಕಾರವಾಗಿ ಸುರಿದ ಜಡಿ ಮಳೆ ಕೊನೆಗೂ ನಿಂತು ಹೋಯಿತು. ಗೋಮತಿ ನದಿಯು ಅಪಾಯ ಮಟ್ಟಕ್ಕಿಂತ ಒಂದೂವರೆ ಅಡಿ, ಎರಡು ಅಡಿ, ಮೂರು ಅಡಿ ಮೇಲೆ ಹರಿಯುತ್ತಿದೆ ಎಂದು ರೇಡಿಯೋದಲ್ಲಿ ಆಗಾಗ ಹೇಳುತ್ತಲೆ ಇದ್ದಾರೆ. ಬರುಬರುತ್ತಾ ನೀರು ಜಾಸ್ತಿಯಾಗುತ್ತಾ ಹೋಗುತ್ತದೆ ಎಂದು ಜನರು ಮಾತನಾಡಿಕೊಳ್ಳುತ್ತಿದ್ದಾರೆ.

ಗೋಮತಿ ನದಿಯ ಕ್ಯಾಚ್‌ಮೆಂಟ್ ಪ್ರದೇಶದಲ್ಲಿ ಎದ್ವಾತದ್ವ ಮಳೆ ಸುರಿದಿದ್ದು, ಕೆಳಕ್ಕೆ ಹರಿದು ಬರುವ ನೀರು ಗೋಮತಿಯ ದಡಗಳನ್ನು ಕಿತ್ತೊಗೆದು ಲಖನೌ ನಗರದೊಳಕ್ಕೆ ನುಗ್ಗಲು ಸನ್ನಾಹ ನಡೆಸುತ್ತಿದೆಯಂತೆ, ಇದನ್ನು ತಿಳಿದ ಜನರು ಭೀತಿಯಿಂದ ಕಂಗಾಲಾಗಿದ್ದಾರೆ. ಮಧ್ಯ ಮಧ್ಯ ರೇಡಿಯೋ ಕೇಳುತ್ತಾ, ಆಗಾಗ, ಮನೆಯ ಹೊರಕ್ಕೆ ಹೋಗಿ ನಗರದಲ್ಲಿ ಏನೇನು ನಡೆಯುತ್ತಿದೆ ಎಂದು ನೋಡಿ ಬರುತ್ತಿದ್ದೆ ಸಾಯಂಕಾಲ ಏಳು ಗಂಟೆ ಇರಬಹುದು. ಮನೆಯಿಂದ ಗೋಲ್ ಮಾರ್ಕೆಟ್ ರಸ್ತೆಯಲ್ಲಿ ಸ್ವಲ್ಪ ದೂರು ನಡೆದು ಹೋದೆ. ಪೋಲೀಸರು ಒಂದೇ ಸಮನೆ ಓಡಾಡುತ್ತ ಪ್ಲಾಸ್ಟಿಕ್ ನಾವೆಗಳನ್ನು ಹೊತ್ತು ಸಾಗುತ್ತಿದ್ದಾರೆ. ವಿಷಯ ಏನೆಂದರೆ ಉತ್ತರದಿಂದ ನಗರವನ್ನು ಸೀಳಿಕೊಂಡು ಗೋಮತಿ ನದಿಯನ್ನು ಸೇರುವ "ಕುಕ್ರೇಲ್" ಉಪನದಿ ತನ್ನ ದಡಗಳನ್ನು ಮುರಿದು ನಗರದೊಳಕ್ಕೆ ನುಗ್ಗಿ ಬಿಟ್ಟಿದ್ದರಿಂದ ದಡಗಳಲ್ಲಿದ್ದ ಮನೆಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಹೋಗಿದ್ದವು. ಪೋಲೀಸರು ಜನರನ್ನು ರಕ್ಷಿಸಲು ಪರದಾಡುತ್ತಿದ್ದಾರೆ. ಆಗಲೆ ಸುಮಾರು ಜನ, ಹಸು, ಕುರಿ, ಮೇಕೆ, ಎಮ್ಮೆ, ಮನೆ, ಮಠಗಳು ನೆರೆಯ ಪಾಲಾಗಿರುವುದಾಗಿ ತಿಳಿದು ಬಂದಿತು.

ಆ ಕುಕ್ರೇಲ್ ನದಿ ನಾವಿರುವ ಸ್ಥಳಕ್ಕಿಂತ ಕೇವಲ ಎರಡು ಕಿ.ಮೀ. ಪೂರ್ವಕ್ಕಿದೆ. ಹಾಗೆ ಹರಿದು ಹರಿದು ನಮ್ಮ ಮನೆಯ ವರೆಗೂ ನೆರೆ ಬರಬಹುದೆ..? ಕೆಲವರನ್ನು ಕೇಳಿದೆ. ಇಲ್ಲ. ಇಷ್ಟು ದೂರ ಬರಲಾರದು ಎಂದರು ಕೆಲವರು. ರಾತ್ರಿಯೆಲ್ಲಾ ರೇಡಿಯೋವಲ್ಲಿ ಮುನ್ನೆಚ್ಚರಿಕೆಗಳನ್ನು ಕೇಳುತ್ತಲೇ ನಿದ್ದೆ ಮಾಡಿದೆ. ಬೆಳಿಗ್ಗೆ ಎದ್ದಿದ್ದೇ ಬಾಗಿಲು ತೆಗೆದು ಹೊರಗಡೆ ನೋಡಿದೆ. ಬಾಗಿಲಲ್ಲಿ ನೆರೆ ಇರಲಿಲ್ಲ ಸಮಾಧಾನವಾಯಿತು. ಗೋಮತಿಯಲ್ಲಿ ನೀರಿನ ಮಟ್ಟ ಇಳಿಮುಖವಾಗುತ್ತಿದೆ ಎಂದು ತಿಳಿದು ಬಹಳ ಸಂತೋಷವಾಯಿತು.

ಆ ದಿನ ರಾಜೀವ್‌ಗಾಂಧಿ ಮತ್ತು ಮುಖ್ಯಮಂತ್ರಿ ನಾರಾಯಣ ದತ್ ತಿವಾರಿಯವರು ಲಖನೌ ಸುತ್ತಮುತ್ತಲೂ ನೆರೆಗೆ ತುತ್ತಾದ ಪ್ರದೇಶಗಳನ್ನು ಹೆಲಿಕಾಪ್ಟರ್‌ನಲ್ಲಿ ವೀಕ್ಷಿಸುತ್ತಿದ್ದಾರೆ ಎಂದು ತಿಳಿಯಿತು. ಮಾರನೆಯ ದಿನ ಬೆಳಿಗ್ಗೆ ಎದ್ದಾಗ ಮುಖ್ಯಮಂತ್ರಿ ರಾಜೀನಾಮೆ ನೀಡಿದ್ದರು. ಕಾರಣ ರಾಜೀವ್‌ಗಾಂಧಿ ನೆರೆ ಪ್ರದೇಶಗಳನ್ನು ವೀಕ್ಷಿಸುತ್ತಿದ್ದಾಗ ಮುಖ್ಯಮಂತ್ರಿ ಹೆಲಿಕ್ಯಾಪ್ಟರಿನ ಹಿಂದೆ ಸೀಟ್‌ನಲ್ಲಿ ಕುಳಿತು ಗೊರಕೆ ಹೊಡೆಯುತ್ತಿದ್ದರಂತೆ.

* * *

## 4 ನಾ ಕಂಡ ಕಲ್ಲಿದ್ದಲ ಬಯಲುಗಳು

ಜಿ.ಎಸ್.ಐ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಹೈದರಾಬಾದ್‌ನಿಂದ ಒಂದು ಪತ್ರ ಬಂದಿದ್ದು ಹತ್ತು ತಿಂಗಳು ಕಾಲ ತರಬೇತಿ ಇರುವುದಾಗಿಯೂ ಮತ್ತು 19-11-85ರಂದು ಖಿಜು (ಬಿಹಾರ್) ನಲ್ಲಿರುವ ತರಬೇತಿ ಕೇಂದ್ರಕ್ಕೆ ತಲುಪುವಂತೆ ತಿಳಿಸಲಾಗಿತ್ತು.

ಹತ್ತು ತಿಂಗಳುಗಳ ಕಾಲದಲ್ಲಿ ಒಂದೂವರೆ ತಿಂಗಳಂತೆ ಆರು ತರಬೇತಿ ಕೇಂದ್ರಗಳಲ್ಲಿ ಭೂವಿಜ್ಞಾನದ ಬಗ್ಗೆ ವಿವಿಧ ವಿಷಯಗಳಲ್ಲಿ ತರಬೇತಿ ಇರುವುದಾಗಿ ತಿಳಿಸಲಾಗಿತ್ತು.

1. ಖಿಜು (ಬಿಹಾರ್) ಜಲಜ ಶಿಲೆ ಮತ್ತು ಕಲ್ಲಿದ್ದಲು ಗಣಿಗಳಲ್ಲಿ ಅಭ್ಯಾಸ.
2. ಜಾವರ್ (ರಾಜಾಸ್ತಾನ) ತಾಮ್ರ, ಸೀಸ ಮತ್ತು ಸತುವು ಗಣಿಗಳಲ್ಲಿ ಅಭ್ಯಾಸ.
3. ರಾಯ್ ಪುರ್ (ಮಧ್ಯಪ್ರದೇಶ) ಅಂತರಿಕ್ಷದಿಂದ ತೆಗೆದ ಚಿತ್ರಗಳ ಮೂಲಕ ಭೂಗರ್ಭ ಶಾಸ್ತ್ರದ ಅಭ್ಯಾಸ ಮತ್ತು ಡಕ್ಕನ್ ಶಿಲಾ ಪದರಿನ ಅಭ್ಯಾಸ.
4. ಚಿತ್ರದುರ್ಗದ ಸುತ್ತಮುತ್ತಲಿರುವ ಸಿಸ್ಟ್‌ಬೆಲ್ಟ್ ಮತ್ತು ಗ್ರಾನೈಟ್ ಶಿಲೆಗಳ ಅಭ್ಯಾಸ.
5. ಆಹೀಶ್ ಮುಖಿಮ್ (ಕಾಶ್ಮೀರ) ಹಿಮಾಲಯ ಭೂವಿಜ್ಞಾನದ ಅಭ್ಯಾಸ
6. ಹೈದರಾಬಾದ್ ವಿವಿಧ ರೀತಿಯ ಭೂವಿಜ್ಞಾನದ ಅಭ್ಯಾಸ.

ಸುಶೀಲ ಮತ್ತು ಕ್ರಾಂತಿಯನ್ನು ಕೆಜಿಎಫ್ ನಲ್ಲಿ ಬಿಟ್ಟು ಬಂದು ಲಖನೌನಿಂದ ಖಿಜು ಕಡೆಗೆ 17-11-85 ಸಾಯಂಕಾಲ ಪ್ರಯಾಣ ಪ್ರಾರಂಭಿಸಿದೆ. ಜೊತೆಯಲ್ಲಿ ಸಹೋದ್ಯೋಗಿಗಳಾದ ಎಂ. ಹಾಸನ್ ಮತ್ತು ಪ್ರೇಂ ಪ್ರಕಾಶ್ ಕೂಡ ಇದ್ದರು.

ಲಖನೌದಿಂದ ಹೊರಟ ರೈಲು "ಬಾರಾಬಂಕಿ" ಹತ್ತಿರ ಬಂದಾಗ ಮುಂದಿನ ಆಸನದಲ್ಲಿದ್ದ ಹಾಸನ್ ಮುಖ ಗಂಟಿಕ್ಕಿಕೊಂಡು ತನ್ನ ಸುಂದರವಾದ ಪತ್ನಿಯನ್ನು ಪರಿಚಯ ಮಾಡಿಸಿದ. ಮುಗುಳು ನಕ್ಕ ಹಾಸನ್ ಪತ್ನಿ ಒಂದೆರಡು ಮಾತುಗಳನ್ನು ಆಡುವಷ್ಟರಲ್ಲಿ ರೈಲುನಿಂತಿತು. ಸರಸರನೆ ಇಳಿಯಲು ಅಣಿಯಾದ ಮಿಸೆಸ್ ಹಾಸನ್, ಹಾಸನ್‌ನನ್ನು ತಬ್ಬಿಕೊಂಡು ಕೆನ್ನೆಗೊಂದು ಚುಂಬನ ನೀಡಿ ವಿದಾಯ ಹೇಳಿ ಕೆಳಕ್ಕೆ ಇಳಿದಳು.

ಸ್ವಲ್ಪ ದಂಗಾದ ನಾನು ಎಲ್ಲೋ ಬಹಳ ಉಚ್ಚ ಶ್ರೇಣಿಯ ಸಮಾಜದ ಮಧ್ಯೆ

ಇರುವಂತೆ ಫೀಲ್ ಆದೆ. ತನ್ನ ಪತ್ನಿಯ ಅಗಲುವಿಕೆಯನ್ನು ಸ್ವಲ್ಪ ತಲೆಗೆ ಹಚ್ಚಿಕೊಂಡಂತೆ ಕಂಡ ಹಾಸನ್ ಸ್ವಲ್ಪ ಹೊತ್ತು ಏನೇನೋ ಮಾತನಾಡುತ್ತ ಸಾಮಾನ್ಯ ಸ್ಥಿತಿಗೆ ಹಿಂದಿರುಗಲು ಹೆಣಗಾಡುತ್ತಿದ್ದ. ಅಷ್ಟರ ತನಕ ದೂರದಲ್ಲಿ ಕುಳಿತಿದ್ದ ಬ್ಯಾಚುಲರ್ ಪ್ರೇಮ್‌ಪ್ರಕಾಶ್ ನಗುತ್ತಾ ಹತ್ತಿರ ಬಂದು ಕುಳಿತುಕೊಂಡ. ರೈಲು ವೇಗವನ್ನು ಹೆಚ್ಚಿಸಿಕೊಳ್ಳುತ್ತಿತ್ತು.

ಮರುದಿನ ಬೆಳಿಗ್ಗೆ ಹಜಾರಿಬಾಗ್ ಜಿಲ್ಲೆಯ ಕಾಡುಮೇಡುಗಳ ಮಧ್ಯೆ ರೈಲು ಹಾವಿನಂತೆ ಬುಸುಗುಡುತ್ತಾ ಸಾಗುತ್ತಿದೆ. ಸುಂದರವಾದ ಹಸಿರು ಕಾಡಿನ ಮಧ್ಯೆ ಅಲ್ಲಲ್ಲಿ ಭತ್ತದ ಬಯಲುಗಳು, ಹರಿಯುವ ನೀರಿನ ಝರಿಗಳು, ಚಿಲಿಪಿಲಿಗುಟ್ಟುವ ಹಕ್ಕಿಗಳು, ಸಣ್ಣ ಸಣ್ಣ ಮನೆಗಳು ನೋಡಲು ಸುಂದರವಾಗಿ ಕಾಣುತ್ತಿವೆ. ಜೊತೆಗೆ ನವಿರಾಗಿ ಬೀಸುತ್ತಿರುವ ತಣ್ಣನೆ ಗಾಳಿ, ಒಟ್ಟಿನಲ್ಲಿ ವರ್ಣಿಸಲಾರದಂತಹ ಬೆಳಗು.

ರೈಲು ಒಂದೆರಡು ನಿಲ್ದಾಣಗಳನ್ನು ದಾಟಿ ಕೊನೆಗೆ ನಾವು ತಲುಪಬೇಕಾದ "ಗೋಮ್" ನಿಲ್ದಾಣದಲ್ಲಿ ನಿಂತುಕೊಂಡಿತು. ಮೂವರೂ ಇಳಿದು ನಿಲ್ದಾಣದಿಂದ ಹೊರಕ್ಕೆ ಬಂದೆವು. ಆಗಲೇ ನಮಗಾಗಿ ಜೀಪ್ ಬಂದು ಕಾಯುತ್ತಿತ್ತು. ನಾವು ಚಹ ಕುಡಿಯುತ್ತಿದ್ದಂತೆ ಜೀಪಿನ ಜೊತೆಯಲ್ಲಿ ಬಂದಿದ್ದ ಸೇವಕ ನಮ್ಮ ಸಾಮಾನುಗಳನ್ನು ಜೀಪಿಗೆ ತುಂಬಿದ್ದ. ಮೂವರು ಮುಂದುಗಡೆಯೇ ಕುಳಿತುಕೊಂಡೆವು. ಜೀಪು ನಿಧಾನವಾಗಿ ರಮಣೀಯ ದೃಶ್ಯಗಳ ನಡುವೆ ಸಾಗಿ "ಬಿಜು" ಸೇರಿತು.

ಪೂರ್ತಿ ಕಾಡಲ್ಲದಿದ್ದರೂ ಅರೆ ಕಾಡಿನ ಮಧ್ಯದಲ್ಲಿ ಮಿಲಿಟರಿ ಶಿಬಿರದಂತೆ ಮೂರು ಕಡೆ ಸಾಲು ಸಾಲು 'ಎಲ್' ಡೇರೆಗಳು. ಇನ್ನೊಂದು ಕಡೆ ಉಪನ್ಯಾಸ ನೀಡುವ ಕೋಣೆ ಮತ್ತು ಭೋಜನ ಶಾಲೆ. ಡೇರೆಗಳ ಹಿಂದೆ ತಾತ್ಕಾಲಿಕವಾಗಿ ನಿರ್ಮಿಸಿರುವ ಸ್ನಾನ ಮತ್ತು ಪಾಯಖಾನೆ ಕೊಠಡಿಗಳು, ಮಧ್ಯೆ ವಿಶಾಲವಾದ ಆಟದ ಮೈದಾನ.

ಹಲವು ಸಹೋದ್ಯೋಗಿಗಳು ಆಗಲೇ ಬಂದಿದ್ದು ಒಂದೆರಡು ದಿನಗಳಲ್ಲಿ ಮಿಕ್ಕವರು ಬರಲಿದ್ದು 20-11-85ರಿಂದ ತರಬೇತಿ ಶುರುವಾಗಲಿತ್ತು. ಸಾಯಂಕಾಲವಾದಂತೆ ಇನ್ನಷ್ಟು ಸಹೋದ್ಯೋಗಿಗಳು ಬಂದರು. ಅವರೆಲ್ಲ ಇಡೀ ದೇಶವನ್ನು ಪ್ರತಿನಿಧಿಸುವಂತೆ ಒಬ್ಬೊಬ್ಬರು ಒಂದೊಂದು ಮೂಲೆಯಿಂದ ಬಂದಿದ್ದರು. ಲಖನೌ, ಜೈಪುರ್, ಕಲ್ಕತ್ತಾ, ಹೈದರಾಬಾದ್, ಬೆಂಗಳೂರು, ನಾಗಪೂರ್, ಭುವನೇಶ್ವರ್, ಮದ್ರಾಸ್, ಉತ್ತರ ಈಶಾನ್ಯ ಹೀಗೆ. ಹೊರ ದೇಶಗಳಾದ ಚೀನಾ, ಫಿಲಿಫೈನ್ಸ್ ಮತ್ತು ಭೂತಾನ್ ನಿಂದಲೂ ಒಬ್ಬೊಬ್ಬರು ಬಂದಿದ್ದರು. ಭುವನೇಶ್ವರದ ಉಮ್ಮರ್ ನನ್ನ ಡೇರೆಯ ಸಹಪಾಟಿಯಾದ.

ಮೊಟ್ಟ ಮೊದಲ ಬಾರಿಗೆ ನನ್ನ ಡೇರೆ ಜೀವನ ಶುರುವಾಗಿತ್ತು. ಸಾಯಂಕಾಲ

ಆಗುತ್ತಿದ್ದಂತೆ ಚಳಿ ಹೆಚ್ಚಾಗುತ್ತಾ ಹೋಗಿ ಎಂಟು ಗಂಟೆಗೆಲ್ಲಾ ಮೈ ನಡುಕ ಶುರುವಾಗಿತ್ತು. ಎಲ್ಲರೂ ಉಣ್ಣೆ ಬಟ್ಟೆಗಳನ್ನು ಧರಿಸಿ ಚಳಿಯನ್ನು ಪ್ರತಿಭಟಿಸುತ್ತಿದ್ದರು. ನಾನು ಒಂದು ಸ್ವೆಟರನ್ನು ಧರಿಸಿದ್ದರೂ ಚಳಿಯನ್ನು ತಡೆದುಕೊಳ್ಳಲಾಗದೆ ಕೋಲಾರ ಜಿಲ್ಲೆಯಲ್ಲಿ ನೇಯ್ದಿದ್ದ ಹಳೆಯ ದೇಶೀ ಕಂಬಳಿಯನ್ನು ಹೊದ್ದುಕೊಂಡು ರಿಕ್ರಿಯೇಶನ್ ಕೊಠಡಿಯ ಕಡೆಗೆ ನಡೆದೆ.

ಕೆಲವರು ಚೆಸ್ ಆಡುತ್ತಿದ್ದರೆ, ಕೆಲವರು ಕೇರಂ ಆಡುತ್ತಿದ್ದರು. ಇನ್ನೂ ಕೆಲವರು ಹರಟೆ ಹೊಡೆಯುತ್ತಾ ಸಿಗರೇಟ್ ಸೇದುತ್ತಿದ್ದರು. ಹೊಸದಾಗಿ ಕಂಡವರನ್ನೆಲ್ಲ ನೋಡಿ ಪರಿಚಯ ಮಾಡಿಕೊಂಡೆ. ಎಲ್ಲರೂ ಒಂದಲ್ಲಾ ಒಂದು ರೀತಿಯಲ್ಲಿ ಬುದ್ಧಿವಂತರಾಗಿ ನಡೆದುಕೊಳ್ಳುತ್ತಿದ್ದರು. ಅಡಿಗೆ ಮನೆಯಲ್ಲಿ ಇನ್ನೂ ಅಡಿಗೆ ತಯಾರಾಗದ ಕಾರಣ ಚಳಿ ಮತ್ತು ಅಡಿಗೆಯವರಿಗೆ ಓಡಿ ಶಾಪ ಹಾಕುತ್ತಿದ್ದರು.

ಭೋಜನ ಶಾಲೆಯ ಹುಡುಗ ಅಡಿಗೆ ತಯಾರಾಗಿದೆ ಎಂದು ಹೇಳಿದ್ದೇ, ಎಲ್ಲರೂ ಒಬ್ಬೊಬ್ಬರಾಗಿ ಕೈ ತೊಳೆದುಕೊಂಡು ಒಳಕ್ಕೆ ಹೋಗಿ ಮೇಜುಗಳ ಮುಂದೆ ಕುಳಿತು ಕೊಂಡೆವು. ನೀಟಾಗಿ ಕಟೋರಿಗಳಲ್ಲಿ ಸಲಾಡ್, ಸುಕ್ಕಾ ರೋಟಿ, ದಾಲ್ ಮತ್ತು ಸಬ್‌ಜೀಗಳನ್ನು ಪೇರಿಸಿದೆ. ತಮ್ಮ ತಮ್ಮ ಮುಂದಿದ್ದ ಕಟೋರಿಗಳ ಮುಚ್ಚಳಗಳನ್ನು ತೆಗೆದು ಒಬ್ಬರಿಗೊಬ್ಬರು ಸಹಾಯ ಮಾಡಿಕೊಳ್ಳುತ್ತಾ ತಿನ್ನುತ್ತಿದ್ದಂತೆ ಅಡಿಗೆ ಬಡಿಸುವವರು ಒಂದೊಂದಾಗಿ ಖಾಲಿ ಇದ್ದ ಕಟೋರಿಗಳನ್ನು ತುಂಬಿಸಿ ತಂದಿಡುತ್ತಿದ್ದರು. ಜೊತೆಗೆ ಅನ್ನ, ಹಪ್ಪಳ, ಉಪ್ಪಿನಕಾಯಿ ಎಲ್ಲವನ್ನು ತಿಂದು ಊಟ ಮುಗಿಸಿದೆವು. ಹೊರಗಡೆ ಚಳಿ ಇನ್ನಷ್ಟು ತೀವ್ರವಾಗಿತ್ತು.

ಕ್ಷೇತ್ರ ಭೂಶಾಸ್ತ್ರಜ್ಞರೆಂದರೆ ..... ?" work like a donkey, climb like a goat and eat like a Baffaloe" ಎನ್ನುವ ಗಾದೆ ಇದೆ. ಬೆಳಿಗ್ಗೆಯೇ ಊಟದಂತೆ ತಿಂಡಿ ತಿಂದು, ಬಟ್ಟೆಗಳ ಜೊತೆಗೆ ಹಂಟರ್ ಶೂ, ಫೀಲ್ಡ್ ಕ್ಯಾಪ್ ಧರಿಸಿ, ಕಾಂಪಾಸ್ (ಉತ್ತರಮುಖಿ), ಫೀಲ್ಡ್ ಸುತ್ತಿಗೆ, ಪಾಕೆಟ್ ಲೆನ್ಸ್, ಸ್ಟೀಲ್ ಟೇಪು, ಒಂದು ಸಣ್ಣ ಚಾಕು, ಕಲ್ಲುಗಳನ್ನು ಒರೆಗಚ್ಚುವ ಸ್ಟ್ರೀಕ್‌ಬಿಲ್ಲೆ, ಫೀಲ್ಡ್ ನೋಟ್ ಪುಸ್ತಕ, ಪೆನ್ಸಿಲ್, ರಬ್ಬರ್ ಮತ್ತು ವಾಟರ್ ಬಾಟಲ್ ಎಲ್ಲವನ್ನೂ ಹ್ಯಾವರ್‌ಸ್ಯಾಕ್‌ನಲ್ಲಿ ತುಂಬಿಕೊಂಡು ತಯಾರಾದೆವು.

ನಾವಿದ್ದ ಜೀಪುಗಳು ಹಳ್ಳಕೊಳ್ಳಗಳನ್ನು ದಾಟಿ ನೇರವಾಗಿ "ಝುರಿಯಾ" ಕಲ್ಲಿದ್ದಲು ಬಯಲುಗಳನ್ನು ಸೇರಿದ್ದವು. ನಮ್ಮ ಶಿಕ್ಷಕರು ಕಲ್ಲಿದ್ದಲು ಬಯಲುಗಳು, ಅವುಗಳ ಮೂಲ ಉತ್ಪತ್ತಿ, ಗಣಿ ಪ್ರಯೋಜನೆ, ಹೀಗೆ ಏನೇನೋ ಹೇಳುತ್ತಾ ಹೋಗುತ್ತಿದ್ದರು. ಆದರೆ ನನಗೆ ಮಾತ್ರ, ಅವುಗಳ ಬಗ್ಗೆ ಏನೂ ಅನಿಸಲಿಲ್ಲ. ಎಲ್ಲವೂ ಸುಮಾರು ಸಲ ತರಗತಿಗಳಲ್ಲಿ ಕೇಳಿದ್ದೆ ಅಲ್ಲದೆ, ಅದರಲ್ಲಿ ಹೊಸದೇನೂ ತೋರಲಿಲ್ಲ.

ಕಣ್ಣಿಗೆ ಕಾಣುವಷ್ಟು ದೂರ ಕಪ್ಪು ಮೋಡಗಳಂತಹ ವಿಶಾಲವಾದ ವಿಷದ ಕಲ್ಲಿದ್ದಲು ಬಯಲುಗಳು. ನಡುವೆ ನೂರಾರು, ಸಾವಿರಾರು ಕಾರ್ಮಿಕರು ಮಾಡದ ಕೆಲಸಗಳನ್ನು ಚಿಟಿಕೆ ಹೊಡೆಯುವಷ್ಟರಲ್ಲಿ ಮಾಡುತ್ತಿರುವ ನವೀನ ಯಂತ್ರೋಪಕರಣಗಳು, ಒಂದೇ ಸಮನೆ ಭೂಗರ್ಭದ ಶಕ್ತಿಯನ್ನೆಲ್ಲಾ ಖಾಲಿ ಮಾಡಿ ಎತ್ತಲೋ ಸಾಗಿಸುತ್ತಿರುವ ಸಾವಿರಾರು ಲಾರಿ ಟ್ರಕ್ಕುಗಳು, ಗರ್ಭಿಣಿ ಹೆಂಗಸರು, ಮಕ್ಕಳು, ಮುದುಕರೆನ್ನದೆ ಎಲ್ಲರೂ ಇರುವೆಗಳಂತೆ ವಿಷದ ಅನಿಲಗಳನ್ನು ಕುಡಿಯುತ್ತಾ ದುಡಿಯುತ್ತಿದ್ದಾರೆ.

ಕುತೂಹಲದಿಂದ ಹತ್ತಿರಕ್ಕೆ ಹೋಗಿ ನೋಡಿದರೂ, ಅವರ ನಿಜ ಸ್ವರೂಪಗಳು ಯಾರಿಗೂ ಕಾಣುತ್ತಿರಲಿಲ್ಲ. ಅವರೂ ಅಷ್ಟೇ ನಮ್ಮ ಕಡೆಗೆ ಯಾವ ರೀತಿಯ ಗಮನವು ನೀಡದೆ ತಮ್ಮ ಪಾಡಿಗೆ ತಾವು ಕೆಲಸಗಳಲ್ಲಿ ತೊಡಗಿದ್ದಾರೆ.

ಚಳಿ, ಬಿಸಿಲು, ಮಳೆ, ಗಾಳಿಯಷ್ಟೇ ಶಾಶ್ವತವಾಗಿ ಅವರು ದುಡಿಯುತ್ತಿರುವಂತೆ ಕಾಣುತ್ತಿದೆ. ಕುತೂಹಲ ತಾಳಲಾರದೆ ಹರಕು ಮುರುಕು ಹಿಂದಿಯಲ್ಲಿ ಕೆಲವು ಕಾರ್ಮಿಕರನ್ನು ಸಹೋದ್ಯೋಗಿಗಳ ಸಹಾಯದಿಂದ ಪ್ರಶ್ನಿಸಿದೆ. ನನ್ನ ಪ್ರಶ್ನೆಗಳಿಗೆ ಅವರ್‍ಯಾರೂ ನೋವು ತುಂಬಿದ ಉತ್ತರಗಳನ್ನು ನೀಡಲಿಲ್ಲ. ಪ್ರಶ್ನೆಗಳ ಮಧ್ಯೆ ಹೊರಬಿದ್ದ ಒಂದು ವಿಷಯವೆಂದರೆ ....? ಕಾರ್ಮಿಕರು ತಮ್ಮ ಪುಟ್ಟ ಮಕ್ಕಳಿಗೆ ಕೆಲಸಕ್ಕೆ ಬರುವುದಕ್ಕಿಂತ ಮುಂಚೆ ಸಾರಾಯಿ ಅಥವಾ ಹೆಂಡವನ್ನು ಕುಡಿಸಿ ಮಲಗಿಸಿ ಬರುತ್ತಾರಂತೆ ....? ಏಕೆಂದರೆ ಕೆಲಸದಿಂದ ಹಿಂತಿರಿಗಿ ಬರುವವರೆಗೆ ಆ ಮಕ್ಕಳು ಏಳಬಾರದೆಂದು.

ಕೆಲಸಗಾರರಿಗೆ ಸಿಗುವ ಸಂಬಳದಲ್ಲಿ ಒಂದು ಭಾಗ ಕಾರ್ಮಿಕ ಸಂಘಟನೆಗಳಿಗೆ ಹೋದರೆ ಇನ್ನೊಂದು ಭಾಗ ಮಫಿಯಾ ನಾಯಕರಿಗೆ, ಮತ್ತೊಂದು ಭಾಗ ಇನ್ಯಾರಿಗೋ...? ಇನ್ನು ಇವರ ಪಾಲಿಗೆ ಬರುವ ಬಳುವಳಿಗಳೆಂದರೆ ಅಸ್ತಮಾ, ನಿಮ್ಯಾಟೋಕೋಸಿಸ್, ಸಿಲಿಕೋಸಿಸ್, ಕ್ಯಾನ್ಸರ್ ಮುಂತಾದ ರೋಗಗಳು.

ವಿಜ್ಞಾನದ ಹೆಸರಿನಲ್ಲಿ, ಹೊಟ್ಟೆ ಪಾಡಿಗಾಗಿ ಮನುಷ್ಯರು ಮಾಡುವ ಈ ಭೂ ಭ್ರಷ್ಟತೆಗೆ ತಡೆಯಾದರೂ ಯಾವಾಗ ... ? ಹೇಗೆ ? ಒಂದೇ ಯೋಚನೆ ....?

ಬೇರೆ ದಾರಿಯಲ್ಲಿ ಹಿಂದಿರುಗಿ ಬರುವಾಗ ಕಲ್ಲಿದ್ದಲು ಬಯಲುಗಳಲ್ಲಿ ಉರಿಯುತ್ತಿರುವ ಬೆಂಕಿ ವಲಯ (Firezone) ಗಳನ್ನು ತೋರಿಸುವುದಾಗಿ ಶಿಕ್ಷಕರು ಕರೆದುಕೊಂಡು ಹೋದರು. ಒಡಲ ತುಂಬ ಕಲ್ಲಿದ್ದಲನ್ನು ತುಂಬಿಟ್ಟುಕೊಂಡಿರುವ ಈ ಬಯಲುಗಳ ಮೇಲಿನ ನೋಟಕ್ಕೆ ಮಾಮೂಲಿ ನೆಲದಂತೆ ಕಾಣಿಸುತ್ತಿದ್ದರೂ ನೆಲದ ಆಳದಲ್ಲೆಲ್ಲಾ ಉರಿಯುತ್ತಾ ಬಿರುಕುಗಳ ಮುಖಾಂತರ ಒಂದೇ ಸಮನೆ ಹೊಗೆಯನ್ನು ಉಗುಳುತ್ತಿದ್ದವು. ಎಷ್ಟು ದಿನಗಳಿಂದ ಉರಿಯುತ್ತಿವೆ... ? ಎಂಬ ಪ್ರಶ್ನೆಗೆ ಯಾರ ಹತ್ತಿರವೂ ನಿಖರವಾದ

ಉತ್ತರವಿರಲಿಲ್ಲ. ಸ್ಥಳೀಯ ಜನರು ನಾವು ಚಿಕ್ಕವರಿದ್ದಾಗಿನಿಂದಲೂ ನೋಡುತ್ತಿದ್ದೇವೆ. ಒಮ್ಮೆ ಇಲ್ಲಿ ಉರಿಯುತ್ತಿದ್ದರೆ, ಇನ್ನೊಮ್ಮೆ ಅಲ್ಲಿ, ಮತ್ತೊಮ್ಮೆ ಇನ್ನೆಲ್ಲೋ ಉರಿಯುತ್ತದೆ ಎಂದು ಹೇಳಿದರು.

ಮಳೆಗಾಲ ಬಂದಾಗ ಮಾತ್ರ ಸ್ವಲ್ಪ ಕಮ್ಮಿ ಆಗುವುದುಂಟು ಅದನ್ನು ನಂದಿಸಲು ಪ್ರಯತ್ನ ಮಾಡಲಿಲ್ಲವೇ ಎಂಬ ಪ್ರಶ್ನೆಗೆ "ಅದೇಗೆ ಸಾಧ್ಯ ?" "ಮಳೆಯಿಂದಲೇ ಸಾಧ್ಯವಾಗದ್ದು ಮನುಷ್ಯನಿಂದ ಸಾಧ್ಯವೇ" ಎಂಬ ಉತ್ತರ ಬಂದಿತ್ತು. ಎಷ್ಟು ಆಳದವರೆಗೂ ಉರಿಯುತ್ತಿರಬಹುದು ...? ಎಷ್ಟು ವರ್ಷಗಳಿಂದ ಉರಿಯುತ್ತಿರಬಹುದು .. ? ಎಷ್ಟು ಕಲ್ಲಿದ್ದಲು ಉರಿದು ಹಾಳಾಗಿರಬಹುದು. ? ಒಂದೂ ಅರ್ಥವಾಗಲಿಲ್ಲ. ಎಷ್ಟೋ ಹಳ್ಳಿಗಳು ಉರಿಯುವ ಬೆಂಕಿವಲಯಗಳಿಂದ ದೂರ ಸರಿಯುತ್ತಲೆ ಹೋಗುತ್ತಿವೆಯಂತೆ. ಅಲ್ಲಿಂದ ಕ್ಯಾಂಪ್ ಸೇರಿಕೊಂಡೆವು.

ದಿನಾಗಲೂ ಒಂದಲ್ಲ ಒಂದು ಹೊಸ ಅನುಭವದ ಜೊತೆಗೆ ಒಂದೂವರೆ ತಿಂಗಳು ತರಬೇತಿ ಮುಗಿದೇ ಹೋಗಿತ್ತು. ಇದರ ಮಧ್ಯದಲ್ಲಿ ಒರಿಸ್ಸಾ ಕಡೆಗೆ ಹರಿದು ಹೋಗುವ ಸೊಗಸಾದ ಸುವರ್ಣ ರೇಖೆಯ ನದಿಯಲ್ಲಿ ಈಜಿ, ರಾಂಚಿಯಲ್ಲಿ ಬ್ಲೂ ಫಿಲಂ ನೋಡಿ, ಹಗುರವಾಗಿ ಕುಡಿದು, ಆಗಾಗ ಕಾರ್ಡ್ಸ್ ಆಡಿ, ಸಣ್ಣ ಪುಟ್ಟ ಮುಖಾಮುಖಿ ಜಗಳಗಳನ್ನಾಡಿ, ಭೂವಿಜ್ಞಾನದ ಬಗ್ಗೆ ದೊಡ್ಡ ದೊಡ್ಡ ಭಾಷಣಗಳನ್ನು ಹರಿಸಿದ್ದೆವು.

ಮಿಜುವಿನಲ್ಲಿ ತರಬೇತಿ ಮುಗಿದು ರಾಜಸ್ಥಾನದ ಕಡೆಗೆ ಹೊರಡುವ ಮುನ್ನ ಒಂದು ಸಣ್ಣ ಔತಣ ಕೂಟವನ್ನು ಏರ್ಪಡಿಸಿಕೊಂಡಿದ್ದೆವು. ಅದರಲ್ಲಿ ಎಲ್ಲರೂ ತಮ್ಮ ತಮ್ಮ ಪ್ರತಿಭಾ ಶಕ್ತಿಯನ್ನು ಪ್ರದರ್ಶಿಸಿದ್ದರು. ನಾನು ಎದ್ದು ಹೋಗಿ ಮೂರು ನಗೆ ಹನಿಗಳನ್ನು ಹೇಳಿದ್ದೆ.

ಒಂದು : ಬೆಂಗಳೂರಿಗೆ ಬಂದ ವಯೋವೃದ್ಧ ದಂಪತಿಗಳು 24 ಅಂತಸ್ತುಗಳ ಯೂನಿಟಿ ಕಟ್ಟಡವನ್ನು ಬೆರಗಾಗಿ ನಿಂತು ನೋಡುತ್ತಿದ್ದರು. ವೃದ್ಧ ಇನ್ನಷ್ಟು ಹತ್ತಿರಕ್ಕೆ ಹೋಗಿ 1,2,3,4 ... ಒಂದೊಂದೇ ಅಂತಸ್ತನ್ನು ಎಣಿಸುತ್ತಾ ಇದ್ದ. ಅಷ್ಟರಲ್ಲಿ ಅಲ್ಲಿಗೆ ಬಂದ ಪಟ್ಟಣದವ

"ಏಯ್ ಮುದುಕ ಏನು ಮಾಡುತ್ತಿದ್ದೀಯಾ ?" ಕೇಳಿದ.

"ಅಂತಸ್ತುಗಳನ್ನು ಎಣಿಸುತ್ತಿದ್ದೇನೆ" ಮುದುಕ ವಿನಮ್ರವಾಗಿ ಹೇಳಿದ.

"ಎಲಾ ಇವನಾ ನೀನು ಎಣಿಸುವುದಕ್ಕೇನು ಈ ಕಟ್ಟಡ ನಿಲ್ಲಿಸಿರುವುದು ...?"

ಎಂದಿದ್ದೆ. ಮುದುಕ ತಬ್ಬಿಬ್ಬಾದ. "ಇದುವರೆಗೆ ಎಷ್ಟು ಅಂತಸ್ತುಗಳನ್ನು ಎಣಿಸಿದ್ದೀಯಾ ?" ಪಟ್ಟಣದವನು ಕೇಳಿದ. ಮುದುಕ ಉತ್ತರಿಸಿದ. ಸುಮಾರು ಹೊತ್ತು ಮಾತುಕತೆ ನಡೆದ ಮೇಲೆ ಮುದುಕ ಪಟ್ಟಣದವನಿಗೆ ಐದು ರೂಪಾಯಿಗಳನ್ನು ಕೊಟ್ಟು ಕಳುಹಿಸಿದ. ಇದನ್ನೆಲ್ಲಾ ದೂರದಿಂದ ನೋಡುತ್ತಿದ್ದ ಮುದುಕನ ಹೆಂಡತಿ ಐದು ರೂಪಾಯಿಗಳನ್ನು ಆ ಧಾಂಡಿಗನಿಗೆ ಏಕೆ ಕೊಟ್ಟೆ ಎಂದು ಕೇಳಿದಾಗ ಮುದುಕ ಹೀಗೆ ಹೇಳಿದ.

"ನಾನೇನು ಹಳ್ಳಿ ಗುಗ್ಗೂನೇ.. ಒಂದೊಂದು ಅಂತಸ್ತನ್ನು ಎಣಿಸಿದರೆ ಒಂದೊಂದು ರೂಪಾಯಿ ಕೊಡಬೇಕಂತೆ ನಾನು ಹನ್ನೊಂದು ಅಂತಸ್ತುಗಳನ್ನು ಎಣಿಸಿ ಕೇವಲ ಐದು ರೂಪಾಯಿಗಳನ್ನ ಮಾತ್ರ ಕೊಟ್ಟೆ " ಎಂದ.

ಎರಡು : ಒಂದು ಊರಿನಲ್ಲಿ ಒಬ್ಬ ಮೂರ್ಖ (ಬುದ್ದು) ಇದ್ದನಂತೆ. ಒಂದು ದಿನ ಬೆಳಿಗ್ಗೆ ತನ್ನ ಮನೆಯ ಮುಂದೆ ನಿಂತಿದ್ದಾಗ ಗಾಳಿಯಲ್ಲಿ ಹಾರಿ ಬಂದ ಪಾರಿವಾಳ ಒಂದು ಅವನ ಮುಂದೆ ನೆಲದ ಮೇಲೆ ಕುಳಿತು, ಅನಂತರ ಮನೆಯ ಗೋಡೆಗೆ ಅಡ್ಡವಾಗಿ ನಿಲ್ಲಿಸಿದ್ದ ಏಣಿಯ ಒಂದೊಂದೇ ಮೆಟ್ಟಿಲನ್ನು ಜಿಗಿಯುತ್ತ ಮನೆ ಮೇಲೆ ಏರಿ ಕುಳಿತುಕೊಂಡಿತು. ಅದರ ಹಿಂದೆಯೇ ಅದನ್ನು ಹಿಡಿಯಲು ಹೋದ ಬುದ್ದು ಕೊನೆಗೂ ಸಿಗದೆ ನಿರಾಶನಾಗಿ, ಸ್ವಲ್ಪ ಹೊತ್ತು ಗಲ್ಲದ ಮೇಲೆ ಬೆರಳನ್ನು ಇಟ್ಟುಕೊಂಡು ಯೋಚಿಸಿದ. ಅವನಿಗೊಂದು ಒಳ್ಳೆ ಉಪಾಯ ಹೊಳೆಯಿತು. ಧಿಡೀರನೆ ಏಣಿಯನ್ನು ತೆಗೆದು ನೆಲದಲ್ಲಿ ಮಲಗಿಸಿ ಪಾರಿವಾಳದ ಕಡೆ ನೋಡಿ ಹೀಗೆ ಹೇಳಿದ..."ಹ್ಹಹ್ಹ ಈಗ ಹೇಗೆ ಇಳಿಯುತ್ತೀಯಾ?"

ಮೂರು : ಒಂದು ಕಾಲೇಜಿನಲ್ಲಿ ಒಬ್ಬ ಪ್ರಖ್ಯಾತ ಆಬ್ಸೆಂಟ್ ಮೈಂಡೆಡ್ ಪ್ರೊಫೆಸರ್ ಇದ್ದರು. ಅವರು ಎಷ್ಟು ಪ್ರಖ್ಯಾತ ಆಬ್ಸೆಂಟ್ ಮೈಂಡೆಡ್ ಪ್ರೊಫೆಸರ್ ಎಂದರೆ ಒಂದು ದಿನ ತನ್ನ ವಿದ್ಯಾರ್ಥಿಗಳಿಗೆ ಪಾಠ ಮಾಡುತ್ತಿದ್ದಾಗ, ತನ್ನ ಹಳೆ ವಿದ್ಯಾರ್ಥಿಯೊಬ್ಬ ಬಂದು

"ಸಾರ್ ನಾನು ಬೆಳಿಗ್ಗೆ ಮೈಸೂರಿನಿಂದ ಬಂದೆ, ನಿಮ್ಮ ಪತ್ನಿ ಮತ್ತು ಮಕ್ಕಳು ಈ ದಿನ ಸಾಯಂಕಾಲ ಮೈಸೂರಿನಿಂದ ಬೆಂಗಳೂರಿಗೆ ಬರುತ್ತಾರಂತೆ, ನೀವು ಅವರನ್ನು ರೈಲು ನಿಲ್ದಾಣದಲ್ಲಿ ಬರಮಾಡಿಕೊಳ್ಳಬೇಕಂತೆ" ಎಂದು ಹೇಳಿ ಹೊರಟು ಹೋದ.

ಪ್ರೊಫೆಸರ್‌ಗೆ ಬಹಳ ಖುಷಿಯಾಗಿ,

"ನನ್ನ ಪ್ರಿಯ ವಿದ್ಯಾರ್ಥಿಗಳೇ, ಈ ದಿನ ಖಂಡಿತವಾಗಿ ನಾನು ಆಬ್ಸೆಂಟ್ ಮೈಂಡೆಡ್ ಪ್ರೊಫೆಸರ್ ಅಲ್ಲ ಎಂಬುದನ್ನು ನಿರೂಪಿಸುತ್ತೇನೆ," ಎಂದು ಹೇಳಿ ತರಗತಿಗೆ ಆಗಲೇ ಮಂಗಳ ಹಾಡಿ ನೇರವಾಗಿ ರೈಲು ನಿಲ್ದಾಣ ಸೇರಿಕೊಂಡರು.

ಗಡಿಯಾರ ನೋಡುತ್ತಾ ನೋಡುತ್ತಾ ಸುತ್ತಲೂ ಹೆಜ್ಜೆ ಹಾಕುತ್ತಾ, ಚಡಪಡಿಸುತ್ತಾ ರೈಲು ಬರುವುದನ್ನೇ ಕಾಯತೊಡಗಿದರು. ಕೊನೆಗೂ ರೈಲು ಬಂದೇ ಬಿಟ್ಟಿತು. ಎಲ್ಲಾ ಭೋಗಿಗಳಲ್ಲೂ ಹುಡುಕಿ ನೋಡಿದರು. ಯಾವ ಬೋಗಿಯಲ್ಲೂ ತನ್ನ ಪತ್ನಿ, ಮಕ್ಕಳು ಇರಲಿಲ್ಲ. ಬಹಳ ನಿರಾಶೆಗೊಂಡ ಪ್ರೊಫೆಸರ್ ಅಲ್ಲೇ ಇದ್ದ ಒಂದು ಕಲ್ಲು ಬೆಂಚಿನ ಮೇಲೆ ಕುಳಿತುಕೊಂಡು ದೀರ್ಘವಾಗಿ ಯೋಚಿಸಿದರು. ಬಹಳ ಹೊತ್ತಾದ ಮೇಲೆ ನಿಜ ಸ್ಥಿತಿ ಅರಿವಾಯಿತು. ತನಗೆ ಇನ್ನೂ ಮದುವೆಯೇ ಆಗಿಲ್ಲವೆಂದು .. ಮೇಲಿನ ನಗೆ ಹನಿಗಳಿಂದ ಸಹದ್ಯೋಗಿಗಳು ಬಹಳ ನಗಾಡಿದರು.

* * *

## 5. ಒಂಟೆ, ನವಿಲುಗಳ ನಾಡು ಅರಾವಳಿಯಲ್ಲಿ

1986ರ ಜನವರಿ ಒಂದರಂದು ಬೆಳಿಗ್ಗೆ ಎಂಟು ಗಂಟೆಗೆ ಖಿಜುವಿಂದ ಜೀಪಿನಲ್ಲಿ ರಾಂಚಿಗೆ ತೆರಳಿ ಅಲ್ಲಿಂದ 183 ಅಪ್ ರೈಲಿನಲ್ಲಿ ಮಾರನೆ ದಿನ ಬೆಳಿಗ್ಗೆ ನವದೆಹಲಿ ಸೇರಿಕೊಂಡೆವು. ಎರಡು ದಿನ ದೆಹಲಿಯಲ್ಲಿದ್ದು ಇಂಡಿಯನ್ ಗೇಟ್, ಪಾಲಿಕಾ ಬಜಾರ್ ಕುತುಬ್ ಮೀನಾರ್, ಜೂ, ರಾಷ್ಟ್ರಪತಿ ಭವನ, ಸುಪ್ರೀಂ ಕೋರ್ಟು, ಜಂತರ್ ಮಂತರ್ ನೋಡಿ, ನಾಲ್ಕನೆ ತಾರೀಖು ರಾತ್ರಿ ಹಳೆ ದೆಹಲಿಯ ರೈಲು ನಿಲ್ದಾಣದಲ್ಲಿ ಉಳಿದುಕೊಂಡು, ಬೆಳಿಗ್ಗೆಯೆ ಅಲ್ಲಿಂದ ಪಿಂಕ್ ಸಿಟಿ ರೈಲಿನಲ್ಲಿ ಉದಯಪುರದ ಕಡೆಗೆ ಪ್ರಯಾಣ ಮಾಡಿದೆವು. ಅದೇ ದಿನ ರಾತ್ರಿ ಉದಯಪುರ ತಲುಪಿ ರಾತ್ರಿ ಅಲ್ಲಿ ತಂಗಿದ್ದು, ಮಾರನೆ ದಿನ ಅಲ್ಲಿಂದ ಜಾವರ್ ಕಡೆಗೆ ಬಸ್ಸಿನಲ್ಲಿ ಪ್ರಯಾಣ ಬೆಳೆಸಿದೆವು. ಸಾಯಂಕಾಲವಾಗುತ್ತಿದ್ದಂತೆ ಬೋಳು ಬೋಳು ಅರಾವಳಿ ಬೆಟ್ಟಗಳ ಕೆಳಗೆ ಅಲ್ಲಲ್ಲಿ ಹಸಿರು ತೇಪೆಗಳ ನಡುವೆ ಸುತ್ತಿ ಬಳಸಿ ಸಾಗುತ್ತಿದ್ದ ಬಸ್ಸು ಗುಡ್ಡಗಳ ನಡುವಿನ ಹಸಿರು ಛೋಗುಣಿಯಂತಹ ಒಂದು ಸ್ಥಳದಲ್ಲಿ ನಿಂತು ಕೊಂಡಿತು.

ಹತ್ತಿರದಲ್ಲಿ "ಟಿಡಿ" ನದಿ ಝುಳ ಝುಳನೆ ಹರಿಯುತ್ತಿದ್ದು, ನದಿಯ ಇಕ್ಕೆಲಬುಗಳಲ್ಲಿ ಹಚ್ಚನೆ ಹಸಿರು ಪೈರು ಗಾಳಿಯ ಜೊತೆಗೆ ಆಟವಾಡುತ್ತಿತ್ತು. ಸ್ವಲ್ಪ ಎತ್ತರದ ಒಂದು ಗುಡ್ಡದ ಇಳಿಜಾರಿನಲ್ಲಿ ಕೆಳಗೆ ನಮ್ಮ ತರಬೇತಿ ಕೇಂದ್ರದ ಸಾಲು ಸಾಲು ಮನೆಗಳು. ಮೂರು ಕಡೆಯೂ ಗುಡ್ಡಗಳ ಮೇಲೆ ದಟ್ಟವಾದ ಕಾಡಿಲ್ಲದಿದ್ದರೂ ಗಿಡ ಮರಗಳಿವೆ. ನಡುನಡುವೆ ತಪ್ಪಲುಗಳ ಇಳಿಜಾರುಗಳಲ್ಲಿ ಗುಂಪು ಗುಂಪಾಗಿ ಕುರಿ, ಮೇಕೆ, ಹಸುಗಳು ಹುಲ್ಲು ಮೇಯುತ್ತಿವೆ. ಅವುಗಳನ್ನು ಮೇಯಿಸುತ್ತಿರುವ ಹುಡುಗರು, ಹುಡುಗಿಯರು ಇಂಪಾದ ಧ್ವನಿಯಲ್ಲಿ ಒಂದೇ ರಾಗದಲ್ಲಿ ಹಾಡಿಕೊಳ್ಳುತ್ತಿದ್ದಾರೆ. ಆ ರಾಗವನ್ನು ಎಷ್ಟೊತ್ತು ಕೇಳಿದರೂ ಮತ್ತೆ ಮತ್ತೆ ಕೇಳಬೇಕೆನಿಸುತ್ತಿದೆ. ಅವರ ಜೊತೆಗೆ ಅನೇಕ ಪಕ್ಷಿಗಳು ಕೂಡ ತಮ್ಮ ಚಿಲಿ ಪಿಲಿ ಕಲರವ ಸೇರಿಸಿವೆ.

ಸಾಯಂಕಾಲದ ಸೂರ್ಯ ಪಶ್ಚಿಮದ ಗುಡ್ಡಗಳ ಮೇಲೆ ತನ್ನ ಅಂತಿಮ ಛಾಯೆಯನ್ನು ಉದ್ದವಾಗಿ ಪಸರಿಸಿದ್ದು ನಾವು ಕೊಠಡಿಗಳನ್ನು ಸೇರಿಕೊಂಡೆವು. ಅದೇ ಚಳಿ ಅದೇ ನಡುಕ ರಾಜಸ್ಥಾನವಾಗಲಿ, ಬಿಹಾರಾಗಲಿ, ಭೇದವಿಲ್ಲದ್ದು ಈ ಚಳಿಗಾಲ.

ಮರುದಿನ ಬೆಳಕಿನ ಕಿರಣಗಳು ಪೂರ್ವದಿಂದ ಗುಡ್ಡಗಳನ್ನು ಹತ್ತಿ ನಮ್ಮ ಕ್ಯಾಂಪಸ್

ಒಳಕ್ಕೆ ಇಣುಕಿ ನೋಡುತ್ತಿದ್ದವು. ಆಗಲೆ ಹೊರಕ್ಕೆ ಬಂದಿದ್ದ ಕೆಲವರು ಕೊಠಡಿಗಳ ಹತ್ತಿರದಲ್ಲೇ ಬಿಸಿಲು ಕಾಯುತ್ತಿರುವ ನವಿಲುಗಳನ್ನು ತೋರಿಸಿದರು. ಗುಂಪು ಗುಂಪಾಗಿ ಸೊಗಸಾಗಿ ಯಾವ ರೀತಿಯ ಭಯವು ಇಲ್ಲದೆ ಆಟವಾಡಿಕೊಳ್ಳುತ್ತಿದ್ದವು. ಮೊದಲು ಬಾರಿಗೆ ಕಾಡು ನವಿಲುಗಳನ್ನು ಹತ್ತಿರದಿಂದ ನೋಡತೊಡಗಿದೆ. ಹಕ್ಕಿಗಳ ಚಿಲಿಪಿಲಿಯ ಮಧ್ಯೆ ನವಿಲುಗಳು ಆಗಾಗ ತಮ್ಮ ಕರ್ಕಶ ಧ್ವನಿಯಲ್ಲಿ ಜಗಳವಾಡುತ್ತಿದ್ದವು.

ಫೀಲ್ಡ್ ಕೆಲಸ ಮತ್ತೆ ಶುರುವಾಯಿತು. ರಾಜರ ಸ್ಥಾನವಾಗಿದ್ದ ರಾಜಸ್ಥಾನದಲ್ಲಿ ಬರೀ ಕೋಟೆ ಕೊತ್ತಲೆಗಳೇ ಅಲ್ಲ. ಗತಕಾಲದಲ್ಲಿ ಅದಕ್ಕಿಂತ ಹೆಚ್ಚಾದ ನಾಗರೀಕತೆಯ ಕೆಲಸಗಳು ನಡೆದಿವೆ. ಬಿಹಾರ ಮತ್ತು ಕರ್ನಾಟಕವನ್ನು ಬಿಟ್ಟರೆ ಖನಿಜಗಳ ಉತ್ಪತ್ತಿಯಲ್ಲಿ ರಾಜಸ್ಥಾನ ಮೂರನೆಯ ಸ್ಥಾನದಲ್ಲಿ ನಿಲ್ಲುತ್ತದೆ.

ರಾಮ್‌ಜೀ ಎಂಬ ಶಿಕ್ಷಕರು ನಾನಿದ್ದ ಹತ್ತು ಅಧಿಕಾರಿಗಳ ತಂಡವನ್ನು ಜಾವರ್ ಮಲಾ ಎಂಬ ಸೀಸ ಮತ್ತು ಸತುವು ದೊರೆಯುವ ಗಣಿಗೆ ಕರೆದೊಯ್ದರು. ಜಾವರ್‌ಮಲಾ ಎನ್ನುವುದು ಒಂದು ಬೆಟ್ಟ. ಬೆಟ್ಟದ ಒಳಕ್ಕೆ ಪೂರ್ವದಿಂದ ನೇರವಾಗಿ ಸುರಂಗದ ಒಳಕ್ಕೆ ನಡೆದು ಹೋಗುತ್ತಿದ್ದೆವು.

ಗಣಿಯ ವಿಜ್ಞಾನಕ್ಕಿಂತ ಅನ್ಯ ವಿಷಯಗಳನ್ನು ಬಹಳ ಕಾಳಜಿಯಿಂದ ಹೇಳುತ್ತಿದ್ದ ರಾಮ್‌ಜೀಯವರು ಭಾರತದ ಪುರಾತನ ನಾಗರಿಕ ತೊಟ್ಟಿಲುಗಳಾದ ಹರಪ್ಪಾ, ಮಹಂಜೋದಾರೋಗಳ ಬಗ್ಗೆ ಹೇಳುತ್ತಾ ಆಗಿನವರ ಲೈಂಗಿಕ ವಿಷಯಗಳ ಬಗ್ಗೆ ಹೇಳ ತೊಡಗಿದರು. ಎಲ್ಲರೂ ಗಣಿ ವಿಷಯಗಳ ಬಗ್ಗೆ ಮರೆತು ಲೈಂಗಿಕ ವಿಷಯಗಳ ಬಗ್ಗೆ ಬಹಳ ಆಸಕ್ತಿಯಿಂದ ತಮ್ಮ ತಮ್ಮ ಸಂದೇಹಗಳನ್ನು ಲೈಂಗಿಕ ಶಾಸ್ತ್ರಜ್ಞರಿಗೆ ಹೇಳಿ ಪರಿಹಾರ ಪಡೆಯುತ್ತಿರುವವರಂತೆ ಕೇಳುತ್ತಿದ್ದರು.

"ಎಲ್ಲರೂ ಆದಷ್ಟು ಬೇಗನೆ ಮದುವೆ ಮಾಡಿಕೊಳ್ಳಬೇಕು. ಜೊತೆಗೆ ಹೆಂಡತಿಯ ಜೊತೆಯಲ್ಲಿ ಪರಿಪೂರ್ಣ ಲೈಂಗಿಕ ಜೀವನ ನಡೆಸಬೇಕು. ವಯಸ್ಸು ಮೀರಿ ಮದುವೆಯಾದರೆ ಇಬ್ಬರಿಗೂ ನಷ್ಟವೇ.." ಹೀಗೆ ಹೇಳುತ್ತಾ ಒಬ್ಬೊಬ್ಬರನ್ನೇ ಪ್ರಶ್ನಿಸುತ್ತಿದ್ದರು. ಪ್ರೇಮ್ ಪ್ರಕಾಶ್‌ನನ್ನು ನಾವೆಲ್ಲರೂ ಲವ್ ಲೈಟ್ (love light) ಎಂದೇ ಕರೆಯುತ್ತಿದ್ದೆವು. ರಾಮ್‌ಜಿ ಪ್ರೇಮ್ ಪ್ರಕಾಶ್‌ನನ್ನು ನಿಮಗೆಷ್ಟು ಮಕ್ಕಳು ಎಂದು ಕೇಳಿದರು ಸುತ್ತಲಿದ್ದವರೆಲ್ಲಾ ನಗುತ್ತಾ ಸರ್ "ಲವ್ ಲೈಟ್‌ಗೆ ಇನ್ನೂ ಮದುವೇನೆ ಆಗಿಲ್ಲ" ಎಂದರು.

ಪ್ರೇಮ್ ಪ್ರಕಾಶ್ ನೋಡಲು ಸ್ವಲ್ಪ ವಯಸ್ಸಾದಂತೆ ಕಾಣುತ್ತಿದ್ದು ಕೂದಲೆಲ್ಲ ನೆರೆತಿದ್ದು ಕನ್ನಡಕ ಧಾರಿ ಬೇರೆ. ನಾಚಿ ನೀರಾದ ಪ್ರೇಮ್ ಪ್ರಕಾಶ್ "ಹಮೇಯಾರ್" ಎಂದಿದ್ದೆ ಹಿಂದಕ್ಕೆ ಸರಿದು ನಮ್ಮ ಬೆನ್ನುಗಳ ಹಿಂದೆ ಅವಿತುಕೊಂಡ.

"ನಿಮಗಾಗಿದೆಯೇ ಮದುವೆ ?" ನನ್ನನ್ನು ಕೇಳಿದರು.

"ಓ ಆಗಿದೆ ಸಾರ್" ಎಂದೆ.

"ಆರ್ ಯು ಹ್ಯಾಪಿ ?" ಮತ್ತೆ ಕೇಳಿದರು.

"ಫುಲ್ಲೀ ಹ್ಯಾಪಿ ಸಾರ್.. ಒಂದು ಮಗೂ ಕೂಡ ಇದೆ" ಎಂದೆ.

"ದೇಖಾ.." ಎನ್ನುತ್ತಾ ನನ್ನ ಭುಜ ತಟ್ಟಿ ಖುಷಿಯನ್ನು ವ್ಯಕ್ತ ಪಡಿಸಿದರು.

"ಮೊದಲು ಕಾಲದ ನಮ್ಮ ಪೂರ್ವಜರು ಲೈಂಗಿಕತೆಗೆ ಬಹಳ ಮಹತ್ವ ನೀಡುತ್ತಿದ್ದರು. ದೇಶದ ಯಾವುದೇ ಗುಡಿ ಗೋಪುರಗಳನ್ನು ನೋಡಿ, ಗೋಪುರದ ಶಿಲೆಗಳಲ್ಲಿ ಎಲ್ಲಾ ರೀತಿಯ ಲೈಂಗಿಕ ಆಸನಗಳನ್ನು ನೋಡಬಹುದು. ಲೈಂಗಿಕ ಶಾಸ್ತ್ರಜ್ಞರ ಗುಂಪುಗಳೇ ಇರುತ್ತಿದ್ದವಂತೆ ಬೋಧಿಸಲು. ತಾಂತ್ರಿಕರು ಏನು ಮಾಡುತ್ತಿದ್ದರು ಗೊತ್ತೇ..? ರಾಮ್‌ಜೀ ಕೇಳಿದರು.

"ಗೊತ್ತಿಲ್ಲ ಸಾರ್" ಹೇಳಿದೆವು. ಅವರು ಹೇಳುತ್ತಿರುವ ಶೈಲಿ ಮತ್ತು ಅವರ ವಯಸ್ಸಿನ ದುರ್ಬಲತೆಯ ಲಾಭ ಪಡೆದುಕೊಂಡಿದ್ದ ಕೆಲವರು ಅವರನ್ನು ಒಂದು ರೀತಿಯಲ್ಲಿ ಹೀಯಾಳಿಸಲು ಶುರುಮಾಡಿದ್ದರು.

"ತಾಂತ್ರಿಕರು ಏನು ಮಾಡುತ್ತಿದ್ದರು ಗೊತ್ತೆ?" ಮತ್ತೆ ಕೇಳಿದರು.

"ಗೊತ್ತಿಲ್ಲ ಸಾರ್" ಎಂದೆವು.

"ಹೆಂಗಸರ ಮರ್ಮಾಂಗಗಳಲ್ಲಿ ಮದ್ಯವನ್ನು ಸುರಿದು ಚೀಪುತ್ತಿದ್ದರಂತೆ" ಎಲ್ಲರೂ ಒಮ್ಮೆಲೆ "ಓ.." ಎಂದು ಕೂಗುತ್ತಾ

"ಕ್ಯಾ ವಂಡರ್‌ಫುಲ್ ಸಾರ್ ?" ಎಂದು ಉದ್ಗರಿಸಿದರು.

ರಾಮ್‌ಜೀ ಈಗ ಮತ್ತೊಮ್ಮೆ ಸುರಂಗದ ಒಳಕ್ಕೆ ನಡೆಯ ತೊಡಗಿದರು. ಹೋಗುತ್ತಾ ಹೋಗುತ್ತಾ ಸುರಂಗ ಒಂದು ಕಡೆ ಒಮ್ಮೊಂದೊಮ್ಮೆಲೆ ಮುರಿದು (Abrupt) ನಿಂತಿದೆ. ಎದುರಿಗೆ ಗವಿಗತ್ತಲು, ಗುಡಾಣದಂತಹ ವಿಶಾಲವಾದ ಖಾಲಿ ಸ್ಥಳ. ಮೇಲೆ ನೋಡಿದ ಎತ್ತರದ ಜವರ್‌ಮಾಲಾ ಬೆಟ್ಟ ಒಳಗೆ ಪೂರ್ತಿ ಖಾಲಿ. ಸುಮಾರು 2500 ± 500 ವರ್ಷಗಳ

ಹಿಂದೆಯೇ ಈ ಬೆಟ್ಟದ ಗರ್ಭದಲ್ಲಿ ಅಡಗಿದ್ದ ಸತು ಮತ್ತು ಸೀಸವನ್ನು ನಮ್ಮ ಪೂರ್ವಜರು ಪೂರ್ತಿಯಾಗಿ ಖಾಲಿ ಮಾಡಿ ಕುಳಿತಿದ್ದರು.



ಸುಮಾರು ೨೫೦೦ ವರ್ಷಗಳ ಹಿಂದೆ ಸತು ಮತ್ತು ಸೀಸವನ್ನು
ಕಾಯಿಸಿಕೊಂಡು ಬಿಸಾಕಿರುವ ರೆಟಾರ್ಟ್‌ಗಳ ಗುಡ್ಡೆಗಳು

ಸ್ವಾತಂತ್ರ್ಯ ಪೂರ್ವದ ಬ್ರಿಟಿಷ್ ಭೂವಿಜ್ಞಾನಿಗಳು ಬೆಟ್ಟದ ಮೇಲಿಂದ ಸತು ಮತ್ತು ಸೀಸವನ್ನು ಕಂಡು ಹಿಡಿದೆವೆಂದು ಬಹಳ ಖುಷಿಯಿಂದ ಸುರಂಗಗಳನ್ನು ಮಾಡಿ ಒಳಗೋಗಿ ನೋಡಿದಾಗ ಎಲ್ಲಾ ಖಾಲಿಯಾಗಿದ್ದು, ಬಹಳ ನಿರಾಶೆ ಪಟ್ಟರಂತೆ. ನಮ್ಮ ಪೂರ್ವಜರು ನೂರಾರು ವರ್ಷಗಳು ಮಾಡಿಬಿಟ್ಟ, ಅಳಿದುಳಿದ ಸತು ಮತ್ತು ಸೀಸದ ಗಣಿಗಳೇ ಈಗಿನ ಜಾವರ್ ಗಣಿಗಳು. 2500 ವರ್ಷಗಳ ಹಿಂದೆಯೇ ಅಷ್ಟೊಂದು ಆಶ್ಚರ್ಯದ ಕೆಲಸ ಮಾಡಿರುವ ಅವರು ನಿಜವಾಗಿಯೂ ದೊಡ್ಡ ವಿಜ್ಞಾನಿಗಳೇ ಸರಿ. ಇಷ್ಟಕ್ಕೂ ಆಕಾಲದಲ್ಲಿ ವಿದ್ಯುತ್ ಆಗಲೀ ಈಗಿನ ನವೀನ ಯಂತ್ರೋಪಕರಣಗಳಾಗಲಿ ಇರಲಿಲ್ಲ. ಅದಕ್ಕಿಂತ ಮಿಗಿಲಾಗಿ ಅಷ್ಟೊಂದು ಸೀಸ ಮತ್ತು ಸತುವನ್ನು ಯಾರಿಗೆ ಮಾರುತ್ತಿದ್ದರು. ಯಾತಕ್ಕಾಗಿ ಉಪಯೋಗಿಸುತ್ತಿದ್ದರು. ಎನ್ನುವ ನಿಗೂಢತೆಯನ್ನು ಇನ್ನೂ ಸರಿಯಾಗಿ ಕಂಡುಕೊಂಡಿಲ್ಲ. ಅಲ್ಲಿಂದ ಅರಾವಳಿ ಗುಡ್ಡಗಳ ನಡುವಿನ

'ಟಿಡಿ' ನದಿಯ ದಡಗಳಿಗೆ ಕರೆದೊಯ್ದು ರಾಮ್‌ಜೀ ಅವರು ಇಲ್ಲಿ ಏನೇನು ಇದೆಯೋ ಸರಿಯಾಗಿ ನೋಡಿ ಹೇಳಿ ಎಂದು ಎಲ್ಲರಿಗೂ ಒಮ್ಮೆಲೆ ಸವಾಲು ಹಾಕಿದರು. ಜಾವರ್ ಮಾಲಾ ಬೆಟ್ಟದ ಒಳಗಿನ ದೃಶ್ಯಗಳನ್ನು ನೋಡಿ ತಲೆ ಕೆಡಿಸಿಕೊಂಡಿದ್ದ ನಾವು ನದಿಯ ದಡಗಳಲ್ಲಿ ಕಣ್ಣಲ್ಲಿ ಕಣ್ಣಿಟ್ಟು ಹುಡುಕುತ್ತ ಸಾಗಿದೆವು. ನಿಜವಾದ ಅರಾವಳಿ ಗುಡ್ಡಗಳಿಗಿಂತ ವಿಭಿನ್ನವಾಗಿದ್ದ ಈ ಗುಡ್ಡಗಳು ನಿಜವಾಗಿಯೂ ನಿಸರ್ಗಸೃಷ್ಟಿ ಅಲ್ಲದ ಕೃತಕ ಗುಡ್ಡಗಳಾಗಿದ್ದವು.

ಅವೆಲ್ಲಾ ಸೀಸ ಮತ್ತು ಸತುವನ್ನು ಬೇರ್ಪಡಿಸಿ ಎಸೆದಿದ್ದ ರಿಟಾರ್ಟ್ (Retort) ಗುಡ್ಡಗಳು. ಸುರಂಗಗಳಿಂದ ತಂದ ಸೀಸ ಮತ್ತು ಸತುವಿನ ಅದುರನ್ನು ಚೆನ್ನಾಗಿ ಕಲ್ಲು ಬಂಡೆಗಳ ಮೇಲೆ ಅರಿದು ಪುಡಿ ಮಾಡಿ ರಿಟಾರ್ಟ್‌ಗಳಲ್ಲಿ ತುಂಬಿ ಚಚ್ಚೌಕಾರದ ಕಲ್ಲುಬಂಡೆಗಳ ಮೇಲೆ ನಿಲ್ಲಿಸಿ ಕೆಳಗಿಂಡ ಬೆಂಕಿ ಉರಿಸಿ, ಸೀಸ ಮತ್ತು ಸತುವನ್ನು ಭಟ್ಟಿ ಇಳಿಸುತ್ತಿದ್ದರಂತೆ. ಒಮ್ಮೆ ಉಪಯೋಗಿಸಿದ ರಿಟಾರ್ಟ್‌ಗಳನ್ನು ಮತ್ತೊಮ್ಮೆ ಉಪಯೋಗಿಸಲು ಆಗದ ಕಾರಣ ಅವುಗಳನ್ನು ಎಸೆದು ಬಿಡುತ್ತಿದ್ದರು.. ಹಾಗೆ ಎಸೆದ ರಿಟಾರ್ಟ್‌ಗಳೇ ಈ ಕೃತಕ ಗುಡ್ಡಗಳು.

ಅವರು ಉಪಯೋಗಿಸುತ್ತಿದ್ದ ರಾಸಾಯನಿಕಗಳಾಗಲಿ, ಸೀಸ ಮತ್ತು ಸತುವು ಉಕ್ಕಿ ಬರಲು ಕಾಯಿಸುತ್ತಿದ್ದ ನಿಖರವಾದ ಉಷ್ಣಾಂಶವಾಗಲಿ, ಅಚ್ಚುಮಾಡುತ್ತಿದ್ದ ವಿಧಾನವಾಗಲಿ ಇಂದಿಗೂ ಯಾರಿಗೂ ಗೊತ್ತಿಲ್ಲ. ಇದಕ್ಕಿಂತ ಮಿಗಿಲಾಗಿ ಆ ನೂರಾರು, ಸಾವಿರಾರು ಟನ್ನುಗಳಷ್ಟು ಸೀಸ ಮತ್ತು ಸತುವು ಎಲ್ಲಿ ಹೋಯಿತು ಏತಕ್ಕೆ ಉಪಯೋಗವಾಯಿತು, ಅದೂ ಗೊತ್ತಿಲ್ಲ.

ಸಾಯಂಕಾಲ ಕ್ಯಾಂಪಿನಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದೆವು. ಬಸ್ಸು ಶಬ್ದ ಮಾಡುತ್ತಾ ಬಂದು ನಮ್ಮ ಕೊಠಡಿಗಳ ಮುಂದೆ ನಿಂತುಕೊಂಡಿತು. ಕೆಳಗಿಳಿದ ರಾಮ್‌ಜೀ

"ಹರೆ ಜೈ ಚಲೋ ಚಲೋ ... ಸಬ್ ಚಲೋ.... ಸಿನಿಮಾ ಆಯಾ ..... ಸೋನಿ, ಮಹಿವಾಲ್ ಅಂದರೆ ಅಮರ ಪ್ರೇಮಿಗಳ ಸಿನಿಮಾ, ಎಲ್ಲರೂ ನೋಡಲೇಬೇಕಾದ ಸಿನಿಮಾ" ಎಂದು ಎಲ್ಲರನ್ನೂ ಮನ ಒಲಿಸುತ್ತಿದ್ದರು. ಒಂದಷ್ಟು ಜನ ತಯಾರಾಗಿ ಬಸ್ಸು ಹತ್ತಿದರು. ಜೊತೆಗೆ ನಾನೂ ಲವ್‌ಲೈಟ್ ಕೂಡ ಕುಳಿತುಕೊಂಡೆವು. ಪೂನಮ್ ದಿಲ್ಲೋನ್ ಮತ್ತು ಸನ್ನಿ ಡಿಯೋಲ್ ನಟಿಸಿರುವ ಹಿಂದಿ ಸಿನಿಮಾ ಸಿನಿಮಾಸ್ಕೋಪ್‌ನಲ್ಲಿ ಚೆನ್ನಾಗಿಯೆ ಹೋಗುತ್ತಿತ್ತು. ಮಧ್ಯಂತರ ಆದ ಮೇಲೆ ಹೊರಕ್ಕೆ ಹೋಗಿ ಬಂದು ಮತ್ತೆ ಕುಳಿತುಕೊಂಡೆವು.

ಸಿನಿಮಾ ಮತ್ತೆ ಶುರುವಾಗಿ ಕೇವಲ ಐದಾರು ನಿಮಿಷಗಳಾಗಿರಬಹುದು ಮುಂದೆ ಕುಳಿತಿದ್ದ ಹೆಂಗಸು ಹಿಂದಕ್ಕೆ ತಿರುಗಿಕೊಂಡು ಹಿಂದಿಯಲ್ಲಿ ನನ್ನ ಕಡೆ ನೋಡುತ್ತಾ ಸಿಕ್ಕಾಪಟ್ಟೆ ಜೈಯ್ಯ ತೊಡಗಿದಳು. ಅರ್ಥವಾಗದ ನಾನು ಏನು ಎನ್ನುವಂತೆ ಹತ್ತಿರಕ್ಕೆ ಮುಖವಿಟ್ಟು ಕೇಳಿದೆ.

"ತುಃ ಎಂದು ಉಗಿದು, ಶರಂ ನೈ ಹೈ ಕ್ಯಾ, ಮಾ ಬೆಹನ್ ಕೋಯಿ ನೈ ಹೈ ಕ್ಯಾ ತುಮಾರಾ" ಎಂದು ಗಟ್ಟಿಯಾಗಿ ಬೊಬ್ಬೆ ಹಾಕತೊಡಗಿದಳು.

ಅಲ್ಪ ಸ್ವಲ್ಪ ಅರ್ಥ ಮಾಡಿಕೊಂಡ ನಂತರ ಲವ್‌ಲೈಟ್ ಕಡೆಗೆ ನೋಡಿ

"ಕ್ಯಾ ಹುವಾ" ಎಂದೆ. ಬಹಳ ಗಂಭೀರವಾಗಿ

"ಹರೆ ಹಮೆ ಕ್ಯಾ ಮಾಲೂಮ್ ಯಾರ್...?" ಎಂದು ಕೈತಿರುವಿಸಿದ. ಪರಿಸ್ಥಿತಿ ಕೈ ಮೀರಿದರೂ ಮೀರಬಹುದೆಂದು ಲವ್ ಲೈಟ್‌ನ್ನು ಕರೆದುಕೊಂಡು ಹೊರಕ್ಕೆ ಬಂದುಬಿಟ್ಟೆ.

ಮೈಯೆಲ್ಲಾ ನಡುಗುತ್ತಿದ್ದು ಬಹಳ ಅಪಮಾನವಾಗಿ ಏನು ಮಾಡಬೇಕೋ ತೋಚಲಿಲ್ಲ. ಸುಮಾರು ಹೊತ್ತು ಸುಧಾರಿಸಿಕೊಂಡ ಮೇಲೆ ಮತ್ತೆ ಕೇಳಿದೆ.

"ಹರೆ ಹಮೆ ಕ್ಯಾ ಮಾಲೂಮ್ ಹೈ ಸಾಲಾ, ಇಂಟರ್‌ವೆಲ್ ಹೋನೇಕಾ ಬಾದ್ ಲಡಕಿ ಕಾ ಜಾಗಾ ಮೇ ಹೋ ಬುಡ್ಡಿ ಹಾಕೆ ಬೈಟ್‌ಗಯಾ..." ಎಂದು ನಿಗೂಢವನ್ನು ಬಿಚ್ಚಿದ, ನಾನು ಮೂರ್ಛೆ ಹೋಗುವುದೊಂದೆ ಬಾಕಿ ಇತ್ತು.

ಉಗುರಗಳನ್ನು ಉದ್ದವಾಗಿ ಬೆಳೆಸಿದ್ದ ಲವ್‌ಲೈಟ್ ಮಧ್ಯಂತರದ ಮುಂಚೆ ಎದುರಿಗಿದ್ದ ಹುಡುಗಿಯನ್ನು ಚುಚ್ಚಿ ಚುಚ್ಚಿ ಮಜಾ ತೆಗೆದುಕೊಂಡಿದ್ದನಂತೆ. ಮಧ್ಯಂತರವಾದ ಮೇಲೆ ಹುಡುಗಿ ಸ್ಥಳ ಬದಲಾಯಿಸಿ ವಯಸ್ಸಾದ ಹೆಂಗಸು ಬಂದು ಕುಳಿತಿದ್ದನ್ನು ಗಮನಿಸದ ಲವ್‌ಲೈಟ್ ಅದೇ ರೀತಿ ಕೈಬಿಟ್ಟಾಗ ಹುಚ್ಚಾಪಟ್ಟೆ ಬೈಯಿಸಿ ಕೊಂಡಿದ್ದು ನಾನು. ಅಷ್ಟು ಅಪಮಾನವಾದ ಮೇಲೂ ನನ್ನಿಂದ ನಗುವನ್ನು ತಡೆದುಕೊಳ್ಳಲಾಗಲಿಲ್ಲ. ಈ ವಿಷಯ ಎಲ್ಲರಿಗೂ ತಿಳಿಯಿತು. ತರಬೇತಿ ಮುಗಿಯುವವರೆಗೂ ಯಾರೂ ಲವ್ ಲೈಟ್ ಪಕ್ಕದಲ್ಲಿ ಕುಳಿತು ಸಿನಿಮಾ ನೋಡುವ ಸಾಹಸಕ್ಕೆ ಇಳಿಯಲಿಲ್ಲ.

ತರಬೇತಿಯ ಮಧ್ಯೆ ಆಗಾಗ ಸುತ್ತಮುತ್ತಲಿದ್ದ ಮುಖ್ಯ ಸ್ಥಳಗಳಿಗೆ ವಿಹಾರ ಹೋಗುತ್ತಿದ್ದೆವು. ಒಂದು ದಿನ ದೇಶದ ಪ್ರಖ್ಯಾತ ಮತ್ತು ವಿಶಾಲವಾದ ಚಿತ್ತೋಡ್‌ಗಡ್ ಕೋಟೆಯನ್ನು ನೋಡಲು ಬಸ್ಸಿನಲ್ಲಿ ಹೊರಟೆವು. ಸುಮಾರು ಹತ್ತು ಕಿ.ಮೀಟರುಗಳ ದೂರದಿಂದಲೇ ಬೆಟ್ಟದ ಮೇಲಿನ ಕೋಟೆ ಚೈನಾ ಗೋಡೆಯಂತೆ ಕಾಣಿಸುತ್ತಿತ್ತು. ಹತ್ತಿರ ಹತ್ತಿರ ಹೋದಂತೆ ಬೆಟ್ಟವನ್ನು ಸುತ್ತುವರಿದಿದ್ದ ಗೋಡೆ ದೊಡ್ಡದಾಗುತ್ತಾ ಹೋಗುತ್ತಿತ್ತು.

ಬಸ್ಸನ್ನು ಕೋಟೆಯ ಮುಂಭಾಗದಲ್ಲಿಯೇ ನಿಲ್ಲಿಸಿ, ಕೋಟೆಯ ಕಡೆಗೆ ನಡೆಯತೊಡಗಿದೆವು. ಬೆಟ್ಟವನ್ನು ಸುತ್ತುವರಿದ ಆಳವಾದ ನದಿ, ನದಿಯ ಮೇಲೆ ಕಟ್ಟಿದ್ದ ಸೇತುವೆ ದಾಟಿ ಹೆಬ್ಬಾಗಿಲು ತಲುಪಿದೆವು. ದೊಡ್ಡದಾದ ಹೆಬ್ಬಾಗಿಲು ದಾಟಿ ಹಾವಿನಂತೆ

ಸುತ್ತುತ್ತಾ. ಮೇಲಕ್ಕೆ ಹೋದಂತೆ ಇನ್ನೊಂದು ಮತ್ತೊಂದು ಹೆಬ್ಬಾಗಿಲುಗಳನ್ನು ದಾಟಿ ವಿಶಾಲವಾದ ಯೋವುದೋ ಪುರಾತನವಾದ ಹಳ್ಳಿ ತಲುಪಿದೆವು. ಆ ಕೋಟೆಯ ಒಳಗೆ ಏಳು ಹಳ್ಳಿಗಳು ಇರುವುದಾಗಿ ತಿಳಿಯಿತು. ಆ ಹಳ್ಳಿಗಳನ್ನೆಲ್ಲಾ ಬಿಟ್ಟು ಒಂದು ಕಾಲದಲ್ಲಿ ರಾಜರಾಣಿಯರು ವಾಸಿಸುತ್ತಿದ್ದ ಶಿಥಿಲವಾದ ಮಹಲುಗಳು, ಹೂತೋಟಗಳು ಮತ್ತು ಅವರಿದ್ದ ಇನ್ನಿತರ ಗತ ವೈಭವದ ಅವಶೇಷಗಳನ್ನು ನೋಡಲು ಹೋದೆವು.

ಎಲ್ಲಿ ನೋಡಿದರು, ಪಾಳುಬಿದ್ದಿರುವ ದೊಡ್ಡ ದೊಡ್ಡ ಕಂಬಗಳು, ಗೋಡೆಗಳು, ಶಿಥಿಲಗೊಂಡಿರುವ ಭವನಗಳು. ಅರಮನೆಗಳು ಗತಕಾಲದ ವೈಭವವನ್ನು ಮೆಲುಕು ಹಾಕುತ್ತಿರುವ ವಯೋವೃದ್ಧರಂತೆ ಕಾಣಿಸುತ್ತಿವೆ. ಮಧ್ಯದಲ್ಲಿ ಎತ್ತರವಾದ ವಿಜಯಸ್ತಂಭ ತನ್ನ ಆತ್ಮೀಯರನ್ನೆಲ್ಲ ಕಳೆದುಕೊಂಡು ಬೋಳು ಮರದಂತೆ ಶೋಕದಲ್ಲಿ ಮುಳುಗಿ ಹೋಗಿದೆ. ದೆಹಲಿಯ ಕುತುಬ್ ಮಿನಾರ್‌ನಲ್ಲಿರುವ ಮೆಟ್ಟಿಲುಗಳನ್ನು ಸುತ್ತಿ ಬಳಸಿ ಮೇಲಕ್ಕೆ ಹತ್ತಿದಂತೆ ಕೊನೆಯ ಏಳನೇ ಅಂತಸ್ತಿಗೆ ಹತ್ತಿ ಅಲ್ಲಿಂದ ಸುತ್ತಲು ನೋಡಿದೆ, ಆದರೂ ಪೂರ್ತಿ ಕೋಟೆ ಕಾಣಿಸಲಿಲ್ಲ.

ಮಾರ್ಗದರ್ಶಕ ರಾಣಿ ಪದ್ಮಿನಿಯ ಅರಮನೆ ತೋರಿಸುವುದಾಗಿ ಕರದೊಯ್ದ. ಅದೊಂದು ವಿಶಾಲವಾದ ಸುಂದರವಾದ ಹೂದೋಟ. ತೋಟದ ಮಧ್ಯದಿಂದಲೇ ನಡೆದು ಹೋದರೆ ವಿಸ್ತಾರವಾದ ಅಂಗಳ, ಅಂಗಳದ ನಾಲ್ಕು ಕಡೆಯೂ ಸುಂದರವಾದ ಕೆತ್ತನೆಗಳಿರುವ ಕೊಠಡಿಗಳು. ಇನ್ನೂ ಸಾಕಷ್ಟು ಚೆನ್ನಾಗಿಯೇ ತನ್ನ ವೈಭವವನ್ನು ಉಳಿಸಿಕೊಂಡಿರುವ ಅರಮನೆ. ಅದರಲ್ಲೂ ರಾಣಿ ಪದ್ಮಿನಿ ಶೃಂಗರಿಸಿಕೊಳ್ಳುತ್ತಿದ್ದ ವಿಶೇಷ ಕೋಣೆ, ಈಗಲೂ ನೋಡಲು ಎಷ್ಟೋ ಸೊಗಸಾಗಿತ್ತು. ಈಗ ಮಾರ್ಗದರ್ಶಕ ತನ್ನ ಧ್ವನಿಯನ್ನು ಎತ್ತರಿಸಿ ಎಲ್ಲರ ಗಮನವನ್ನೂ ತನ್ನ ಕಡೆಗೆ ಸೆಳೆದುಕೊಳ್ಳುತ್ತ ಹೇಳಿದ.

"ನೋಡಿ ಸಾರ್ ! ಅಲ್ಲಿ ಮೇಲೆ ಕಾಣುತ್ತಿದೆಯಲ್ಲ ದರ್ಪಣ, ಚರಿತ್ರೆಯಲ್ಲಿ ಅದಕ್ಕೆ ಬಹಳ ಮಹತ್ವವಿದೆ. ಬಹುಶಃ ಆ ದರ್ಪಣ ಅಲ್ಲಿಲ್ಲದೆ ಇದ್ದಿದ್ದರೆ ರಾಜಪೂತರ ಚರಿತ್ರೆಯೆ ಬೇರೆ ಆಗುತ್ತಿತ್ತೋ ಏನೋ.... ಆದರೆ....?" ಎಂದು ನಿಲ್ಲಿಸಿದ.

ಎಲ್ಲರೂ ಆ ದೊಡ್ಡದಾದ ದರ್ಪಣದ ಕಡೆಗೆ ಕುತೂಹಲದಿಂದ ನೋಡಿದರು. ಗೋಡೆಯ ಮೇಲೆ ಸ್ವಲ್ಪ ಮುಂದಕ್ಕೆ ಬಗ್ಗಿಸಿ ಕಟ್ಟಿರುವ ದರ್ಪಣಕ್ಕೆ ಸೊಗಸಾದ ಚೌಕಟ್ಟಿದೆ.

"ಅಗೋ ಅಲ್ಲಿ ನೋಡಿ ! (ಆ ದರ್ಪಣದ ಎದುರಿಗೆ ಇರುವ ಕಿಟಕಿ ತೋರಿಸಿ, ಕಿಟಕಿ ಒಳಗಿಂದ ಗುಡ್ಡದ ಮೇಲೆ ದೂರದಲ್ಲಿ ಕಾಣಿಸುತ್ತಿರುವ ಇನ್ನೊಂದು ಅರಮನೆಯನ್ನು ತೋರಿಸಿ) ಅದು ರಾಜಾ ಉದಯಸಿಂಗ್ ತನ್ನ ಅತಿಥಿಗಳನ್ನು ಸತ್ಕರಿಸುತ್ತಿದ್ದ ಅರಮನೆ. ರಾಜಾ

ಉದಯಸಿಂಗನ ಪತ್ನಿ ರಾಣಿ ಪದ್ಮಿನಿ ಎಷ್ಟೊಂದು ಸೌಂದರ್ಯವತಿ ಆಗಿದ್ದಳೆಂದರೆ ಅಕ್ಕಪಕ್ಕದ ರಾಜ್ಯಗಳ ರಾಜರೆಲ್ಲಾ ಅವಳ ಸೌಂದರ್ಯದ ಬಗ್ಗೆಯೇ ಮಾತನಾಡಿ ಕೊಳ್ಳುತ್ತಿದ್ದರಂತೆ. ಈ ವಿಷಯ ದಿಲ್ಲಿಯಲ್ಲಿರುವ ಅಲ್ಲಾ ಉದ್ದೀನ್ ಖಿಲ್ಜಿಯ ಕಿವಿಗೆ ಬಿದ್ದು, ಅಂತಹ ಸೌಂದರ್ಯವಾದರೂ ಏನಿರಬಹುದು ... ? ಒಮ್ಮೆ ಅವಳ ಮುಖವನ್ನು ನೋಡಲೇಬೇಕೆಂದು ರಾಜಾ ಉದಯಸಿಂಗ್‌ನಲ್ಲಿ ತನ್ನ ಮಹತ್ವಾಕಾಂಕ್ಷೆಯನ್ನು ನಿವೇದಿಸಿಕೊಂಡನಂತೆ. ಕೋಪಗೊಂಡ ಉದಯಸಿಂಗ್ ಕಡಾ ಖಂಡಿತವಾಗಿ ನಿರಾಕರಿಸಿದಾಗ, ದೂರದ ದೆಲ್ಲಿಯಿಂದ



ಚಿತ್ತೋಡ್‌ಘುರ್ ಕೋಟೆಯ ಒಳಗಿರುವ ಒಂಬತ್ತು ಅಂತಸ್ತಿನ ವಿಜಯಸ್ತಂಭ

ತನ್ನ ಇಡೀ ಸೈನ್ಯದ ಸಮೇತ ಚಿತ್ತೋಡ್‌ರ್‌ಗೆ ಧಾವಿಸಿ ಬಂದ ಖಿಲ್ಜಿ ಕೋಟೆಯ ಮುಂದೆ ತಿಂಗಳುಗಟ್ಟಲೆ ಸ್ಥಳ ಊರಿ ರಾಣಿ ಪದ್ಮಿನಿಯ ಮುಖ ನೋಡುವವರೆಗೂ ಸ್ಥಳಬಿಟ್ಟು ಕದಲುವುದಿಲ್ಲ ಎಂದು ಶಪಥ ಮಾಡಿಬಿಟ್ಟನಂತೆ.

ಅಕ್ಕ ಪಕ್ಕದ ರಾಜ್ಯಗಳ ರಾಜರೂ, ಅವನ ಆತ್ಮೀಯರೂ ಉದಯಸಿಂಗ್‌ನ ಮನ ಒಲಿಸಿದ ಮೇಲೆ, ಖಿಲ್ಜಿಯನ್ನು ಕೇವಲ ಇಬ್ಬರು ಅಂಗರಕ್ಷಕರ ಜೊತೆಗೆ ಬರಮಾಡಿಕೊಂಡ ಉದಯಸಿಂಗ್, ರಾಣಿ ಪದ್ಮಿನಿಯ ಅರಮನೆಗೆ ಎದುರಿಗಿರುವ ಸತ್ಕಾರದ ಭವನದಲ್ಲಿ ಕೂರಿಸಿ ಈ ದರ್ಪಣದ ಮುಖಾಂತರ ಸೌಂದರ್ಯವತಿಯಾದ ರಾಣಿ ಪದ್ಮಿನಿಯ ಮುಖವನ್ನು ಖಿಲ್ಜಿಗೆ ತೋರಿಸಿದ.

ಅವಳ ಸೌಂದರ್ಯವನ್ನು ನೋಡಿದ ಖಿಲ್ಜಿ ನಿಜಕ್ಕೂ ವಿಸ್ಮಯಗೊಂಡು ಚಿಂತಾಕ್ರಾಂತನಾದ....? ರಾಜ ಉದಯಸಿಂಗ್ ಸಂಪ್ರದಾಯಕವಾಗಿ ಅತಿಥಿಗಳನ್ನು ಹೆಬ್ಬಾಗಿಲದವರೆಗೂ ಕರೆ ತಂದು ಬೀಳ್ಕೊಡುವ ಪರಿಪಾಟನ್ನು ಇಟ್ಟುಕೊಂಡಿದ್ದ. ಇದನ್ನು ದುರುಪಯೋಗ ಪಡಿಸಿಕೊಂಡ ಖಿಲ್ಜಿ ಕತ್ತಿಯನ್ನು ಸರಕ್ಕನೆ ತೆಗೆದು ರಾಜಾ ಉದಯಸಿಂಗ್‌ನ ಎದೆಗಿಟ್ಟು ನೋಡು ನೋಡುತ್ತಿದ್ದಂತೆ ಕುದುರೆಗಳ ಸಹಾಯದಿಂದ ಉದಯಸಿಂಗನನ್ನು ತನ್ನ ಗುಡಾರಕ್ಕೆ ಅಪಹರಿಸಿಬಿಟ್ಟ.

ಖಿಲ್ಜಿ ಮತ್ತೆ ತನ್ನ ಸೇವಕನ ಕೈಯಲ್ಲಿ ಓಲೆಯೊಂದನ್ನು ಕಳುಹಿಸಿ, ರಾಣಿ ಪದ್ಮಿನಿ ಕೇವಲ ಒಂದು ರಾತ್ರಿ ತನ್ನ ಸ್ಥಳದಲ್ಲಿ ತಂಗಿದ್ದರೆ ಸಾಕು ರಾಜಾ ಉದಯಸಿಂಗ್‌ನನ್ನು ಬಿಟ್ಟು ಬಿಡುತ್ತೇನೆಂದು ಘೋಷಿಸಿದ.

ರಾಣಿ ಪದ್ಮಿನಿ ಒಪ್ಪಲಿಲ್ಲ. ದಿನಗಳು ಉರುಳಿದವು. ಕುಪಿತಗೊಂಡ ಖಿಲ್ಜಿ ನಾಲ್ಕು ಕಡೆಯಿಂದಲೂ ಚಿತ್ತೋಡ್‌ಗರ್ ಕೋಟೆಗೆ ಮುತ್ತಿಗೆ ಹಾಕಿದ.ಘೋರವಾದ ಯುದ್ಧ ನಡೆದು, ಭೀಕರವಾದ ರಕ್ತಪಾತವಾಯಿತು. ಇನ್ನೇನು ನಾಳೆ ಬೆಳಿಗ್ಗೆ ಉದಯಸಿಂಗನ್‌ನ ಸೈನಿಕರು ಪೂರ್ತಿಸೋತು, ರಾಣಿ ಪದ್ಮಿನಿ, ಖಿಲ್ಜಿಯ ವಶವಾಗಬೇಕು.

ಆ ರಾತ್ರಿ, ರಾಣಿ ಪದ್ಮಿನಿ ಕೋಟೆಯ ಒಳಗೆ ಪ್ರಪಾತದ ಹೊಳೆಯಂತಿರುವ ವಿಶಾಲ ಅಗ್ನಿಕುಂಡಕ್ಕೆ ಬೆಂಕಿಹಚ್ಚಿಸಿ, ಕೋಟೆಯ ಒಳಗಿದ್ದ ತನ್ನ ಎಲ್ಲಾ ಸಖಿಯರು. ಸೈನಿಕರ ಪತ್ನಿಯರು ಮತ್ತು ಮಕ್ಕಳ ಸಮೇತ ಬೆಂಕಿಗೆ ಆಹುತಿಯಾಗಿ ಬಿಟ್ಟಳು. ರಾಜಪೂತರ ಒಂದು ಕರಾಳ ಅಧ್ಯಾಯ ಅಲ್ಲಿಗೆ ಮುಗಿದಿತ್ತು"

ಆ ಮಾರ್ಗದರ್ಶಕ ಆ ರೀತಿಯಾಗಿ ಎಷ್ಟು ಸಲ, ಎಷ್ಟು ಜನರಿಗೆ ಈ ಕತೆಯನ್ನು ಹೇಳಿರಬಹುದೋ ಏನೋ ... ಈಗಲೂ ಅವನ ಮಾತುಗಳಲ್ಲಿ ಕೋಪ, ಅವೇಧನೆ, ಮತ್ತು ಶೋಕ ತುಂಬಿ ತುಳುಕುತ್ತಿತ್ತು.

"ಹುಟ್ಟಿ ಬಂದ ಸ್ಥಳವನ್ನು ಸೇರುವ ಕಾತುರದಲ್ಲಿ ಭೂಮಿಯ ಮೂಲೆ ಮೂಲೆಯನ್ನೂ ರಕ್ತದ ಓಕುಳಿಯಾಗಿಸಿರುವ ಈ ಮನುಷ್ಯನೆಂಬ ಮಾಯೆಯಾದರೂ ಏನೋ....?" ಎಂದು ಹಾಡಿರುವ ತಮಿಳು ಕವಿಯ ಸಾಲುಗಳು ಜ್ಞಾಪಕಕ್ಕೆ ಬರುತ್ತವೆ.

ಭೂವಿಜ್ಞಾನ ಅಭ್ಯಾಸದ ಜೊತೆ ಜೊತೆಗೆ ದಿನಗಳು ಉರುಳುತ್ತಿದ್ದಂತೆ ಉದಯಪುರಕ್ಕೆ ವಿಹಾರ ಹಾಕಿಕೊಂಡೆವು. ಸರೋವರಗಳ ನಗರವೆಂದೇ ಹೆಸರು ಪಡೆದಿರುವ ಉದಯಪುರ ನಿಜಕ್ಕೂ ಸುಂದರ ನಗರವೇ. ಸುಂದರವಾದ ಸರೋವರಗಳು, ಅರಮನೆಗಳು ಸೊಗಸಾದ ಹೂತೋಟಗಳು ನಮ್ಮ ಮನಸ್ಸನ್ನು ಸೂರೆಗೊಂಡವು. ಇವೆಲ್ಲಕ್ಕಿಂತ ಮುಖ್ಯವಾಗಿ ರಾಜಪೂತರ ಯುದ್ಧ ಸಾಮಗ್ರಿಗಳನ್ನೆಲ್ಲ ನೋಡಿ ಬೆಕ್ಕಸ ಬೆರಗಾದೆವು.

ಅಲ್ಲಿಂದ ಹತ್ತಿರದ ಒಂದು ಸಣ್ಣಗುಡ್ಡಕ್ಕೆ ಹೋದೆವು. ಗುಡ್ಡದ ಮೇಲೆ ರಾಣಾ ಪ್ರತಾಪ್‌ಸಿಂಗ್‌ನ ವಿಗ್ರಹವನ್ನು ಅವನ ನೆಚ್ಚಿನ ಕುದುರೆ ಚೇತಕ್ ಸಮೇತ ಲೋಹದಲ್ಲಿ



ಮೌಂಟ್ ಅಬು ಬೆಟ್ಟದಮೇಲಿರುವ ಅಮೃತಶಿಲೆಯ ದಿಪಾರಾ ಗುಡಿಯ ಒಳಗಿನ ಒಂದು ಕಲಾಕೃತಿ

ಕೆತ್ತಲಾಗಿದೆ. ಆ ವಿಗ್ರಹದ ಕೆತ್ತನೆ ಬಹಳ ಅದ್ಭುತವಾಗಿದ್ದು ಅದು ನನ್ನ ಮನವನ್ನು ಸೂರೆಗೊಂಡಿತು. ಸುಮಾರು ಹೊತ್ತು ಆ ವಿಗ್ರಹದ ಸುತ್ತಮುತ್ತಲು ಸುತ್ತಿ ಸುತ್ತಿ ನೋಡಿದೆ. ನಾಲ್ಕು ಕಡೆಯ ಪಕ್ಷಿನೋಟ, ಮುಗಿಲುಗಳ ಜೊತೆ ಹಾರಿ ಹೋಗುವಂತೆ ಪ್ರೇರೇಪಿಸುತ್ತಿರುವ ಬೀಸುಗಾಳಿಯನ್ನು ಬಿಟ್ಟು ಕೊನೆಗೂ ಮನಸ್ಸಿಲ್ಲದ ಮನಸ್ಸಿನಿಂದ ಆ ಸ್ಥಳವನ್ನು ಬಿಟ್ಟು ವಾಪಸ್ ಬರಬೇಕಾಯಿತು.

ಅದಕ್ಕಿನ್ನ ಮುಂಚೆ ಗುಜರಾತ್ ರಾಜ್ಯದ ಗಡಿಯಲ್ಲಿರುವ ಮೌಂಟ್ ಅಭು ಬೆಟ್ಟದ ಮೇಲಿರುವ ಅಮೃತಶಿಲೆಯ ದಿಲ್‌ವಾರಾ ಗುಡಿಗಳನ್ನು ನೋಡಿ ಮೂಕನಾಗಿಬಿಟ್ಟಿದ್ದೆ. ಹೊರಗಡೆಯಿಂದ ನೋಡಲು ಮಾಮೂಲಿ ಗುಡಿಗಳಂತೆ ಕಾಣುವ ಈ ಅಮೃತ ಶಿಲೆಗಳ ಗುಡಿಗಳನ್ನು ಒಳಗೆ ಹೋಗಿ ನೋಡಬೇಕು.ಎಷ್ಟು ವರ್ಷಗಳಿಂದ ಅಷ್ಟೊಂದು ನೈಪುಣ್ಯತೆಯನ್ನು ಸಾಧಿಸಿದ್ದರೋ ಆ ಕಲೆಗಾರರು. ಅಮೃತಶಿಲೆಗಳಲ್ಲಿ ಕೆತ್ತನೆಗೊಂಡಿರುವ ನೂರಾರು, ಸಾವಿರಾರು ಅದ್ಭುತ ಶಿಲಾ ವಿನ್ಯಾಸಗಳು ನಮ್ಮನ್ನು ಬೆಕ್ಕಸಬೆರಗಾಗಿಸಿಬಿಟ್ಟಿದ್ದವು. ಪುಟ್ಟ ಪುಟ್ಟ ಶಿಲೆಗಳು ಅವುಗಳಿಗೆ ಒಪ್ಪುವಂತಹ ಕೈಕಾಲುಗಳು, ತುಟಿ, ಗಲ್ಲ, ಕಣ್ಣು ಹುಬ್ಬುಗಳು, ಉಗುರುಗಳು ಅವುಗಳಿಗೆ ತೊಡಿಸಿರುವ ಆಭರಣಗಳು, ಪ್ರಾಣಿಗಳು, ಹೂ ಚಿತ್ತಾರಗಳು ಹೀಗೆ ಎಷ್ಟೊಂದು ತಾಳ್ಮೆಯಿಂದ ಕೆತ್ತನೆ ಮಾಡಿರುವರೋ ಹೇಳತೀರದ ವೈಭವ, ಮೌಂಟ್ ಅಭು ಬೆಟ್ಟದ ಆ ದೇವಾಲಯಗಳು ಕಲೋನಲ್ ಟಾಡ್ ಪ್ರಕಾರ ಈ ದೇವಾಲಯಗಳು ಭಾರತದಲ್ಲೇ ಅದ್ಭುತವಾದವು. ಇವುಗಳಿಗೆ ಸರಿ ಸಾಟಿಯಾದ ಇನ್ನೊಂದು ಅದ್ಭುತವೆಂದರೆ ತಾಜ್‌ಮಹಲ್ ಮಾತ್ರ. ಜೈನರ ಬಸದಿಗಳಾದ ಈ ದೇವಾಲಯಗಳನ್ನು ಒಂಬತ್ತು ನೂರು ವರ್ಷಗಳ ಹಿಂದೆ ಕಟ್ಟಲಾಗಿದೆ.

* * *

## 6 ಹಿಮಾಲಯದ ಕರೆಗೆ

ಜಾವರ್‌ನಲ್ಲಿ ತರಬೇತಿ ಮುಗಿಸಿದ ಮೇಲೆ ರಾಯಪುರ್ ಮತ್ತು ಚಿತ್ರದುರ್ಗದಲ್ಲೂ ತರಬೇತಿ ಮುಗಿಸಿದೆ. ಚಿತ್ರದುರ್ಗದಿಂದ ಕೆಜಿಎಫ್‌ಗೆ ಹೋಗಿ ಕೆಲವು ದಿನಗಳಿದ್ದು, ಅಲ್ಲಿಂದ ಬೆಂಗಳೂರಿನ ಮುಖಾಂತರ ದೆಹಲಿಗೆ ಹೊರಡುವ ರೈಲಿನಲ್ಲಿ ಸಹೋದ್ಯೋಗಿಗಳನ್ನು ಸೇರಿಕೊಂಡೆ. 1986 ಜೂನ್, 18ನೇ ತಾರೀಖು ಬೆಳಿಗ್ಗೆ ಎಂಟು ಗಂಟೆಗೆ ದೆಹಲಿ ತಲುಪಿ, ಆ ರಾತ್ರಿ ಅಲ್ಲಿ ತಂಗಿದ್ದು, ಮರುದಿನ ಬೆಳಿಗ್ಗೆ ಜಮ್ಮು ಎಕ್ಸ್‌ಪ್ರೆಸ್ ರೈಲಿನಲ್ಲಿ ಜಮ್ಮು ಕಡೆಗೆ ಪ್ರಯಾಣ ಬೆಳೆಸಿದೆವು. ಆ ರಾತ್ರಿ ಜಮ್ಮುವಿನಲ್ಲಿ ತಂಗಿದ್ದು, ಮಾರನೆಯದಿನ ಬೆಳಿಗ್ಗೆ ಜಿ.ಎಸ್.ಐ. ಬಸ್ಸಿನಲ್ಲಿ ಪೆಹಲ್‌ಗಾಂ ಮತ್ತು ಅನಂತನಾಗ್ ಮಧ್ಯದಲ್ಲಿರುವ ಅಹಿಶ್‌ಮುಖಂ ಕಣಿವೆಯ ಕಡೆಗೆ ಹೊರಟೆವು.

ಹಿಮಾಲಯ ಎಂದ ತಕ್ಷಣ ಹಲವು ರೀತಿಯ ವಿಷಯಗಳು ನಮ್ಮ ಮನಸ್ಸಿಗೆ ನುಗ್ಗುತ್ತವೆ. ಬರ್ಫ್ ಹೊದಿಕೆಯ ಎತ್ತರವಾದ ಗಿರಿಶಿಖರಗಳು, ಆಳವಾದ ಸ್ವಚ್ಛ ನೀರಿನ ತೊರೆಗಳು, ಹಚ್ಚ ಹಸರಾದ ಸಸ್ಯರಾಶಿ, ಮುಗಿಲು ಮೋಡಗಳು, ಕುಂಕುಮ ಕೆನ್ನೆ ನೀಳ ಮೂಗಿನ ಕಾಶ್ಮೀರಿ ಕನ್ಯೆಯರು, ಆ್ಯಪಲ್, ಅಕ್ರೋಟ್ ಬಾದಾಮಿ ಹಣ್ಣುಗಳು, ಸುಂದರವಾದ ಉದ್ಯಾನವನಗಳು ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ.

ಬೆಳಿಗ್ಗೆ ಒಂಬತ್ತು ಗಂಟೆಗೆ ಜಮ್ಮು ಬಿಟ್ಟ ಬಸ್ಸು ನಿಧಾನವಾಗಿ ಚಲಿಸುತ್ತಾ "ತಾವಿ" ನದಿಯ ದಡದಲ್ಲಿಯೇ ಹೋಗುತ್ತಿದೆ. ಸಾವಿರಾರು ವರ್ಷಗಳಿಂದ ಹಿಮಾಲಯದಿಂದ ಉರುಳಿಕೊಂಡು ಬಂದಿದ್ದ ಹೇರಳ ರಾಶಿ ರಾಶಿ ಮೆಕ್ಕಲು ಮಣ್ಣು, ಕಲ್ಲು ಬಂಡೆಗಳು ಮುಖ್ಯ ಹಿಮಾಲಯದ ಕವಚದಂತೆ ಹಾಸಿಕೊಂಡಿದೆ. ಕೆಳ ಹಿಮಾಲಯದ ತಪ್ಪಲುಗಳನ್ನು ಸುತ್ತಿ ಬಳಸಿ ತಿರುವುಗಳ ಮುಖಾಂತರ ಎತ್ತರ ಎತ್ತರಕ್ಕೆ ಏರುತ್ತಿದ್ದ ಬಸ್ಸು ಹೇರಳ ಸಸ್ಯರಾಶಿಯ ಜೊತೆಗೆ ಬಿಳಿ ಮೋಡಗಳ ಒಳಕ್ಕೆ ನುಗ್ಗಿ ಉದ್ದಾಮಪುರ್ ತಲುಪಿತು.

ಪಂಜಾಬಿ ಚೋಳಾ ಬಟೂರಾ, ಲಸ್ಸಿ, ಮದ್ರಾಸಿ ದೋಸಾ ಇಡ್ಲಿ, ಮಲೆಯಾಳಿ ಕಾಕಾ ಚಹ ಎಲ್ಲವೂ ಅಲ್ಲಿ ಸಿಗುತ್ತಿತ್ತು. ಉದ್ದಾಮಪುರ್ ಬಿಟ್ಟ ಬಸ್ಸು ಮತ್ತೆ "ತಾವಿ" ನದಿಯ ಜೊತೆಗೂಡಿತು. ಸುಮಾರು ದೂರ ಎರಡೂ ಜೊತೆ ಜೊತೆಗೆ ಸಾಗಿದ ಮೇಲೆ ತಾವಿ ನದಿಗೆ ವಿಧಾಯ ಹೇಳಿದ ಬಸ್ಸು ಸ್ವಲ್ಪ ಸಮತಟ್ಟಾದ ಪ್ರದೇಶದಲ್ಲಿ ಸಾಗುತ್ತಿತ್ತು. "ವೈಷ್ಣವಿದೇವಿ

ಮಂದಿರಕ್ಕೆ ಹೋಗಬೇಕಾದರೆ ಇಲ್ಲಿಂದ ನಡೆದುಕೊಂಡು ಹೋಗಬೇಕೆಂದು ಯಾರೋ ಮಾತನಾಡಿಕೊಳ್ಳುತ್ತಿದ್ದರು.

ಬಸ್ಸು ಅನಂತನಾಗ್‌ಗೆ ಹತ್ತಿರ ಸಮೃದ್ಧವಾದ ಹಸಿರು ಬುದು ಬುದು ಗದ್ದೆಗಳ ನಡುವಿನ ರಸ್ತೆಯಲ್ಲಿ ಸಾಗುತ್ತಿತ್ತು. ಹಸಿರು ಗದ್ದೆಗಳಲ್ಲಿ ಬೆಳ್ಳಕ್ಕಿಗಳಂತೆ ಸಾಲು ಸಾಲಾಗಿ ಕೆಲಸ ಮಾಡುತ್ತಿರುವ ಕಾಶ್ಮೀರಿ ಹೆಣ್ಣುಗಳು ಆಗಾಗ ತಲೆ ಎತ್ತಿ ನಮ್ಮ ಕಡೆ ನೋಡುತ್ತಿದ್ದರು. ಹುರುಪುಗೊಂಡ ಕಾಲೇಜಿನ ಪಡ್ಡೆ ಹುಡುಗರಂತೆ ನಮ್ಮ ಸಹೋದ್ಯೋಗಿಗಳು ಅವರ ಕಡೆಗೆ ಬಸ್ಸಿನ ಕಿಟಿಕಿಗಳಿಂದ ಕೈಗಳನ್ನು ಬೀಸುತ್ತಿದ್ದರು. ಆ ಹೆಣ್ಣುಗಳೂ ಅಷ್ಟೇ ಹುಡುಗರ ಹುರುಪನ್ನ ನಿರಾಶೆಗೊಳಿಸಬಾರದು ಎಂಬಂತೆ ಕೈ ಬೀಸಿ ಮುಸಿ ಮುಸಿ ನಗುತ್ತಾ ಏನೋ ಮಾತನಾಡಿಕೊಳ್ಳುತ್ತಿದ್ದಾರೆ. ನೀಳ ಮೂಗಿನ, ಗುಲಾಬಿ ಕೆನ್ನೆಗಳ ಆ ಸುಂದರಿಯರೆಲ್ಲರೂ ತಲೆಗೆ ಹಲ್‌ಚಲ್ ಬಟ್ಟೆಗಳನ್ನು ಕಟ್ಟಿ ಕೊಂಡಿದ್ದು, ಇನ್ನಷ್ಟು ಸೊಗಸಾಗಿ ಕಾಣುತ್ತಿದ್ದಾರೆ.

ತಪ್ಪಲುಗಳನ್ನು ಅಪ್ಪಿಕೊಂಡಿರುವ ಹಸಿರು ಕವಚಗಳು, ಕೊರಕಲು ನದಿಗಳು, ರಸ್ತೆಯ ಬದಿಗಳಲ್ಲಿ ಕಾಣಸಿಗುವ ಸಾಲು ಸಾಲು ಮರಗಳು, ಆ್ಯಪಲ್ ತೋಟಗಳು, ಹಸಿರು ಗದ್ದೆಗಳು ನಮ್ಮ ಕಣ್ಣುಗಳಿಗೆ ಹಬ್ಬವನ್ನೇ ಉಣಿಸಿತ್ತು. ತಾವಿ, ಚಿನಾಬ್ ಮತ್ತು ಜೀಲಮ್ ನದಿಗಳ ದಡಗಳನ್ನು ದಾಟುವಾಗ ಈ ಬಸ್ಸು ಎಲ್ಲಾದರೂ ಉರುಳಿಕೊಂಡರೆ .... ? ಅಬ್ಬಬ್ಬಾ ಈ ರೀತಿಯ ಯೋಚನೆಯೇ ಬೇಡ ಎಂದುಕೊಂಡೆ. ಆದರೆ ಒಮ್ಮೆ ಪಕ್ಕಕ್ಕೆ ನೋಡಿದಾಗ ಅಂತಹ ಯೋಚನೆ ಬರದೆ ಇರುತ್ತಿರಲಿಲ್ಲ.

ಸಾಯಂಕಾಲ ಆಗುತ್ತಿದ್ದಂತೆ ಚಳಿ ಹೆಪ್ಪುಗಟ್ಟುತ್ತಿತ್ತು. ಅನಂತನಾಗ್ ಬಿಟ್ಟ ಬಸ್ಸು ಮಾರ್‌ಟಾಂಡದ ಮುಖಾಂತರ ನಾವು ಸೇರಬೇಕಾಗಿರುವ ಅಚಿಶ್‌ಮುಖಿಂನ ತರಬೇತಿ ಕೇಂದ್ರವನ್ನು ತಲುಪಿದಾಗ ಸಾಯಂಕಾಲ ಏಳು ಗಂಟೆ. ಆಗಲೆ ನೀಲಿ ಬೆಟ್ಟಗಳನ್ನು ಏರಿ ಕುಳಿತಿರುವ ಚಂದ್ರನ ಬೆಳಕಿನಲ್ಲಿ ಸುತ್ತಲ ದೃಶ್ಯಗಳು ಅತಿ ಮನೋಹರವಾಗಿ ಕಾಣಿಸುತ್ತಿದ್ದವು.

ಪೂರ್ವದಿಂದ ಪಶ್ಚಿಮಕ್ಕೆ ಇಳಿಜಾರಾದ ಸುಂದರ ಕಣಿವೆ. ಮುಂದೆ ಪೂರ್ವದಲ್ಲಿ ಎತ್ತರವಾದ ನೀಲಿ ತಪ್ಪಲುಗಳು. ಹಿಂದೆ ಇಳಿಜಾರಿನಲ್ಲಿ ಉತ್ತರದಿಂದ ದಕ್ಷಿಣ-ಪಶ್ಚಿಮಾಭಿಮುಖವಾಗಿ ಹರಿಯುತ್ತಿರುವ ಲಿಡ್ಡಾರ್ ನದಿ. ನಾನು ಮತ್ತು ಡಾ. ಸುರೇಂದ್ರನಾಥ್ ಒಂದು ಕೊಠಡಿಯನ್ನು ಹಿಡಿದುಕೊಂಡೆವು.

ಬೆಳಿಗ್ಗೆ ತಿಂಡಿ ತಿಂದ ಮೇಲೆ ಪ್ಯಾಕ್ ಲಂಚ್ ಕೂಡ ಜೊತೆಗೆ ಕೊಂಡೊಯ್ಯಲು ತಯಾರಾಗಿದ್ದು, ಜೊತೆಗೆ ಬರಲಿದ್ದ ಕೂಲಿಗಳು ಎಲ್ಲವನ್ನೂ ಚೀಲಗಳಲ್ಲಿ ತುಂಬಿಕೊಳ್ಳುತ್ತಿದ್ದರು. ಉದ್ದುದ್ದವಾದ ಫೀಲ್ಡ್ ಟ್ರ್ಯಾವರ್ಸ್‌ಗಳು ಇರುವುದಾಗಿ ತಿಳಿಯಿತು.

ಎಲ್ಲರನ್ನೂ ನಾಲ್ಕು ಪಂಗಡಗಳಾಗಿ ವಿಭಾಗಿಸಿ ನಾಲ್ಕು ತರಬೇತುದಾರರ ಕೆಳಗೆ ರೊಟೇಶನ್ ಮುಖಾಂತರ ತರಬೇತಿ ನೀಡುವಂತೆ ತಿಳಿಸಲಾಗಿತ್ತು. ಒಂದು ಪಂಗಡ ಭೂ ನಕ್ಷೆಯನ್ನು ಹಿಡಿದುಕೊಂಡು ಎತ್ತರವಾದ ಪಂಜಾಲ್ ಶಿಖರಗಳನ್ನು ಹತ್ತಿದರೆ, ಇನ್ನೊಂದು ಪಂಗಡ ಲಿಡ್ಡಾರ್ ನದಿಯ ಮೇಲೆ ಅಣೆಕಟ್ಟು ಕಟ್ಟುವುದು ಹೇಗೆ ಎಂದು ಪರಿಶೀಲಿಸಬೇಕಿತ್ತು. ಮತ್ತೊಂದು ಪಂಗಡ ಕೋಟ್ಯಾಂತರ ವರ್ಷಗಳ ಹಿಂದಿನ ಪಳೆಯುಳಿಕೆಗಳನ್ನು ಹುಡುಕಬೇಕಾಗಿದ್ದು, ಇನ್ನೊಂದು ಪಂಗಡ ತಮ್ಮ ಪೂರ್ವಜರು ಜೀವಿಸುತ್ತಿದ್ದ ಲಿಡ್ಡಾರ್ ನದಿಯ ದಡಗಳಲ್ಲಿದ್ದ ಗವಿಗಳಲ್ಲಿ ಪರಿಶೋಧನೆ ನಡೆಸಬೇಕಿತ್ತು. ಎಲ್ಲರೂ ಎಲ್ಲಾ ವಿಷಯಗಳನ್ನು ಪರಿಶೀಲಿಸಬೇಕಾಗಿತ್ತು.

ಬಸ್ಸಿನಲ್ಲಿ ಎಲ್ಲರೂ ಕುಳಿತುಕೊಂಡೆವು. ಬಸ್ಸು ತರಬೇತಿ ಕೇಂದ್ರದ ಮುಖ್ಯಬಾಗಿಲಿನ ಹತ್ತಿರ ಬಂದಾಗ ಕಾವಲುಗಾರ ಬಾಗಿಲನ್ನು ತೆರೆದ. ಬಸ್ಸು ಸ್ವಲ್ಪ ದೂರ ಚಲಿಸಿತು. ಮುಂದೆ ಕುಳಿತಿದ್ದ ತರಬೇತುದಾರ ಬಿಳಿ ಮೀಸೆಯ ಸಿಂಗ್ ಅವರು

"ಏ ಡ್ರೈವರ್ ಬಸ್ ರಖೋ" ಆಜ್ಞೆ ಮಾಡಿದರು. ಬಸ್ಸು ನಿಂತು ಕೊಂಡಿತು.

"ಏ ವಾಚ್‌ಮನ್ ಇದರ್ ಹಾವ್" ಜೋರಾಗಿ ಕರೆದರು. ವಾಚ್‌ಮನ್ ಓಡಿ ಬಂದು ಬಸ್ಸಿನ ಮುಂದೆ ನಿಂತುಕೊಂಡ.

"ಸೆಲ್ಯೂಟ್ ಕ್ಯೋ ನಹಿ ಮಾರಾ ? ಸಿಂಗ್ ಕೇಳಿದರು.

"ಭೂಲ್ ಹೋಗಯಾ ಸಾಬ್" ವಾಚ್‌ಮನ್ ಹೇಳಿದ.

"ಭೂಲ್ ನಹಿ ಗಲತ್ ಹೋಗಯಾ. ಮಾರೋ ದಸ್ ಮಾರೋ" ಎಂದರು. ಹತ್ತು ಸಲ ಸೆಲ್ಯೂಟ್ ಹೊಡೆದ ಮೇಲೆ ಬಸ್ಸು ಮುಂದೆ ಚಲಿಸಿತು.

ನಾವೆಲ್ಲಾ ಜೋರಾಗಿ ನಗುತ್ತಿದ್ದೆವು.

"ಎಷ್ಟು ನಗುತ್ತೀರೋ ಈಗಲೇ ಮುಗಿಸಿ ಬಿಡಿ" ಸಿಂಗ್‌ರವರು ಎಚ್ಚರಿಕೆ ಕೊಟ್ಟು ಬಿಟ್ಟರು. ಅವರ ಗುಂಪಿನವರು ಕೈಕಾಲುಗಳನ್ನೆಲ್ಲಾ ಮುಟ್ಟಿ ಮುಟ್ಟಿ ನೋಡಿಕೊಂಡರು. A good geologist is in need of good eyes and thighs. ಎನ್ನುವುದು ಇನ್ನೊಂದು ಗಾದೆ. ಸಧ್ಯಕ್ಕೆ ನಾನು, ದಾಲ್ ಅವರ ಕೆಳಗೆ ಇದ್ದುದ್ದರಿಂದ ನೆಮ್ಮದಿಯಾಗಿ ಉಸಿರಾಡಿದೆ.

ಒಂದೊಂದು ಗುಂಪನ್ನು ಒಂದೊಂದು ಕಡೆ ಇಳಿಸಿದ ಬಸ್ಸು ನಮ್ಮನ್ನು ಹೊತ್ತುಕೊಂಡು "ಲಿಡ್ಡಾರ್" ನದಿಯ ದಡಕ್ಕೆ ಅಂದರೆ ಪೆಹಲ್‌ಗಾಂ ಕಣಿವೆಯ ಕಡೆಗೆ ಸಾಗಿತು.

ರಸ್ತೆಯ ಪಕ್ಕದಲ್ಲಿ ಹರಿಯುತ್ತಿದ್ದ ಲಿಡ್ಡಾರ್ ನದಿಯ ಎರಡೂ ಕಡೆಯೂ ಕಡಿದಾದ ಬೆಟ್ಟಗಳು ಸಮೃದ್ಧವಾದ ಹಸಿರು ಕವಚಗಳು ಸುತ್ತುವರಿದಿದ್ದವು.

ಕಾಶ್ಮೀರದ ಮುಖ್ಯ ಪ್ರವಾಸ ಸ್ಥಳಗಳಲ್ಲಿ ಪೆಹಲ್‌ಗಾಂ ಕೂಡ ಒಂದು. ಆ ಸಣ್ಣದಾದ ಪೆಹಲ್‌ಗಾಂ ಹಳ್ಳಿಯ ಸುತ್ತಲೂ ಎತ್ತರವಾದ ಮತ್ತು ಕಡಿದಾದ ಬೆಟ್ಟಗಳು, ಗುಲಾಬಿ ತೋಟಗಳು, ಚಿತ್ರವಿಚಿತ್ರವಾದ ಆಕಾರದ ಮನೆಗಳು, ಕುದುರೆಗಳ ಜೊತೆಗೆ ಕುದುರೆ ಸವಾರರು, ತೆರೆದ ರೆಸ್ಟೋರೆಂಟ್‌ಗಳು, ಸುತ್ತಲೂ ಜುಳು ಜುಳು ಹರಿಯುವ ನದಿ ತೊರೆಗಳು ಇದನ್ನೆಲ್ಲಾ ನೋಡುತ್ತಾ ನೋಡುತ್ತಾ ಭೂವಿಜ್ಞಾನವನ್ನೆಲ್ಲಾ ಮರೆತು ಬಿಟ್ಟೆವು.

ವಯಸ್ಸಾದ ಸಪೂರ ದೇಹದ ಡಾಲ್ ಅವರು ಬೆಟ್ಟಗಳನ್ನು ಹತ್ತಲಾಗದೆ ಅಲ್ಲೇ ಕಣಿವೆಯಲ್ಲೇ ಸುತ್ತಾಡಿಸಿ ಊಟಕ್ಕೆ ಬಿಟ್ಟಿದ್ದರು. ಅವರ ಪಕ್ಕದಲ್ಲೇ ಕುಳಿತಿದ್ದ ನನ್ನನ್ನು ಹತ್ತಿರಕ್ಕೆ ಕರೆದರು. ಏನೋ ನಿಗೂಢ ವೆಂದು ಹತ್ತಿರ ಸರಿದೆ.

"ನಿಮ್ಮದು ಯಾವ ಊರು ?" ಕೇಳಿದರು

"ಬೆಂಗಳೂರು" ಹೇಳಿದೆ.

"ಬಂಗ್ಲೂರ್.. ಅಚ್ಛಾ, ಬಂಗ್ಲೂರ್ ಆಫೀಸಿನಲ್ಲೆ ಇದ್ದೀಯಾ.. ?" ಕೇಳಿದರು.

"ಇಲ್ಲಾ ಸಾರ್, ಲಖನೌದಲ್ಲಿದ್ದೇನೆ..."ಎಂದೆ.

"ಲಖನೌ, ಹಾಗಾದರೆ ಒಳ್ಳೆ ಹಿಂದಿ ಬರುತ್ತದೆ."

"ಪರವಾಗಿಲ್ಲ ಬರುತ್ತದೆ" ಎಂದೆ.

ಮತ್ತೊಮ್ಮೆ ಕಿವಿ ಹತ್ತಿರ ತರುವಂತೆ ಸನ್ನೆ ಮಾಡಿದರು. ಇದು ಇನ್ಯಾವ ನಿಗೂಢ ಇರಬಹುದೆಂದು ಬಗ್ಗಿ ಕಿವಿಯನ್ನು ಅವರ ಮುಖದ ಹತ್ತಿರ ಬಿಟ್ಟೆ.

"ಮೈನೆ ಬಂಗ್ಲೂರ್ ಮೆ ಏಕ್ ತಗಡಿ ಕ್ಯಾಬರೆ ದೇಖಾ" ಎಂದರು. ನನ್ನಿಂದ ನಗು ತಡೆದುಕೊಳ್ಳಲಾಗಲಿಲ್ಲ. ಬಾಯಲ್ಲಿದ್ದ ರೋಟಿಯ ತುಕುಡಾ ಕೆಳಗೆ ಬಿತ್ತು. ಅವರ ಮುಖ ನೋಡಿದೆ. ಮುಖದಲ್ಲಿ ಯಾವ ರೀತಿಯ ಮಾರ್ಪಾಟು ಇರಲಿಲ್ಲ. ಅಕ್ಕಪಕ್ಕದಲ್ಲಿದ್ದವರೆಲ್ಲಾ ಆ ಹಾಸ್ಯವನ್ನು ಹಂಚಿಕೊಳ್ಳಲು ಆತುರ ಪಡುತ್ತಿದ್ದರು. ಆದರೆ ಮತ್ತೆ ಕಿವಿಯಲ್ಲಿ ಇನ್ನಷ್ಟು ಗಂಭೀರವಾಗಿ

"ಯಾರಿಗೂ ಹೇಳಬೇಡ" ಎಂದು ಆಜ್ಞೆಮಾಡಿದರು.

ಒಂದು ದಿನ ಸಾಯಂಕಾಲ ನಾವು ನಾಲ್ಕೈದು ಜನ ಆಹಿಶ್‌ಮುಖಂ ಹಳ್ಳಿಯ ಕಡೆಗೆ ಅಡ್ಡಾಡಲು ಹೊರಟೆವು. ಹಿಮಶಿಖರಗಳಿಂದ ಕರಗಿ ಹರಿದು ಬರುತ್ತಿದ್ದ ಬರ್ಫ್ ನೀರಿನಲ್ಲಿ ಪೂರ್ಣ ನಗ್ನರಾದ ಮಕ್ಕಳು ಬಿಸಿ ನೀರಿನಲ್ಲಿ ಸ್ನಾನ ಮಾಡುವಂತೆ ಈಜಾಡುತ್ತಿದ್ದಾರೆ. ಜೊತೆಯಲ್ಲಿದ್ದವರು ಮುಂದೆ ಹೋಗುತ್ತಿದ್ದಂತೆ ಸುರೇಂದರ್‌ನಾಥ್‌ಗೆ ಅಲ್ಲೇ ಇರುವಂತೆ ತಿಳಿಸಿ ಹತ್ತಿರದಲ್ಲೇ ಕಾಣುತ್ತಿದ್ದ ಒಂದು ಸಣ್ಣ ಪೆಟ್ಟಿಗೆ ಅಂಗಡಿಯ ಒಳಕ್ಕೆ ನುಗ್ಗಿದೆ. ಒಬ್ಬ ಅಸಲಿ ಹೋತಗಡ್ಡದ ಕಾಶ್ಮೀರಿ ಮುದುಕನಿಗೆ ಮಾತನಾಡಲು ಸಹ ಅವಕಾಶ ಕೊಡದೆ

"ನನ್ನ ತಲೆ ಜೋಳಿಸು" ಎಂದೆ. ಸ್ವಲ್ಪ ಬೆರಗಾದ ಆ ಮುದುಕ

"ಏಕೆ"? ಎಂದು ಪ್ರಶ್ನಿಸಿದ. ಒಬ್ಬ ಗಿರಾಕಿ ಒಳಕ್ಕೆ ಬಂದು ಕೆಲಸ ಮಾಡಿಸಿಕೊಳ್ಳುತ್ತೇನೆ ಎಂದರೆ ಪ್ರಶ್ನೆ ಬೇರೆ ಕೇಳುತ್ತಾನಲ್ಲಾ ಎಂದು ಕೊಂಡು

"ನನ್ನ ಕೂದಲು ಬಹಳ ಉದುರುತ್ತಿವೆ, ಅದಕ್ಕಾಗಿ ಜೋಳಿಸುತ್ತಿದ್ದೇನೆ" ಎಂದು ವಿವರಿಸಿದೆ. ಸ್ವಲ್ಪ ಸಮಾಧಾನಗೊಂಡ ಅವನು ಹಳೆ ಕತ್ತಿಯನ್ನು ಬಹಳ ಹೊತ್ತು ಕುರಿಮುಂದೆ ತೀಡುವಂತೆ ತೀಡತೊಡಗಿದ. ಎಷ್ಟು ಟಾಕಾಗಳಾಗುತ್ತವೋ ಏನೋ ಯಾವುದಕ್ಕೂ ಒಳ್ಳೆಯದೆಂದು ದೇವರನ್ನೊಮ್ಮೆ ನೆನೆದುಕೊಂಡೆ.

ಎರಡು ಕೈಗಳಲ್ಲಿ ನೀರನ್ನು ತೆಗೆದುಕೊಂಡು ನನ್ನ ತಲೆಗೆ ಹಾಕಿ ಚೆನ್ನಾಗಿ ಸವರಿದ ಅವನ ಬೆರಳುಗಳಲ್ಲಿ ಕೂದಲು ಸುತ್ತಿಕೊಂಡಿದ್ದನ್ನು ಅವನೇ ನೋಡಿ

"ಯಾಕೆ ಈ ತರಹ ಬರುತ್ತಿದೆ ?" ಎಂದು ಆಶ್ಚರ್ಯಪಟ್ಟ.

"ಗೊತ್ತಿಲ್ಲ" ಎಂದು ತಲೆ ಬಗ್ಗಿಸಿದೆ.

ಕೆಜಿಎಫ್‌ನಿಂದ ಲಖನೌಗೆ ಹೋದ ಮೇಲೆ ನನ್ನ ತಲೆಗೆ ಏನಾಯಿತೋ ಏನೋ ಕೂದಲು ಉದುರಲು ಶುರುವಾಗಿತ್ತು. ನನಗೆ ಗೊತ್ತಿದ್ದ ಎಲ್ಲಾ ರೀತಿಯ ಔಷಧಿಗಳನ್ನು ಬಳಸಿ ಇನ್ನಷ್ಟು ಕೂದಲನ್ನು ಕಳೆದುಕೊಂಡಿದ್ದೆ. ಬಹುಶಃ ಲಖನೌ ನಗರದ ಮಧ್ಯದಲ್ಲಿ ಹರಿಯುವ ಈ ಪವಿತ್ರ ಗೋಮತಿ ನದಿಯ ಕಲ್ಮಶ ನೀರೇ ಕಾರಣವಿರಬೇಕು. ನನ್ನ ತಲೆಕೂದಲು ಬಗ್ಗೆ ಬಹಳ ತಲೆಕೆಡಿಸಿಕೊಂಡಿದ್ದ ನಾನು, ಲಖನೌದ ಸಹೋದ್ಯೋಗಿ ನನ್ನಷ್ಟೆ ವಯಸ್ಸಿನ ಬೋಳು ತಲೆಯ ಡಾ. ಸುರೇಂದ್ರಪ್ರಸಾದ್ ಅವರನ್ನು ಕೂದಲು ಉದುರುವ ಬಗ್ಗೆ ವಿಚಾರಿಸಿದಾಗ ಒಂದು ತಮಾಷೆ ಹೇಳಿದ್ದ. ತನ್ನೂರು ಪಾಟ್ನಾದಲ್ಲಿ ಒಬ್ಬ ಹೆಸರಾಂತ ಚರ್ಮ ತಜ್ಞರ ಹತ್ತಿರ ಹೋಗಿ ನನ್ನ ತಲೆ ಕೂದಲು ಬಹಳ ಉದುರುತ್ತಿದೆ. ಯಾವುದಾದರೂ ಒಳ್ಳೆಯ ಔಷಧಿಯನ್ನು ಬರೆದುಕೊಡುವಂತೆ ಬೇಡಿಕೊಂಡನಂತೆ. ಬಹಳ ದುಃಖದಿಂದ ನಕ್ಕ ಚರ್ಮ ತಜ್ಞರು ತನ್ನ

ಬೋಳು ತಲೆಯನ್ನು ಮುಂದಕ್ಕೆ ಚಾಚಿ, ನೋಡಿ ನನ್ನ ತಲೆ. ಆ ತರಹ ಯಾವುದಾದರೂ ಔಷಧಿ ಇದ್ದಿದ್ದರೆ ನನ್ನ ತಲೆಯನ್ನು ಬೋಳಾಗಿ ಇಟ್ಟುಕೊಳ್ಳುತಿದ್ದೆನೆ? ಎಂದನಂತೆ.

ಆಗಾಗ 'ಕರ್ರ ಕರಕ್' ...ಎನ್ನುವ ಶಬ್ದದೊಡನೆ ನನ್ನ ತಲೆ ನುಣ್ಣಗಾಗುತ್ತಿದೆ. ಸದ್ಯ ದೇವರ ದಯೆಯಿಂದ ನನ್ನ ತಲೆ ಎಲ್ಲೂ ಗಾಯವಾಗದೆ ಉಳಿದುಕೊಂಡಿತು. "ಎಷ್ಟು?" ಎಂದಾಗ ಐದು ರೂಪಾಯಿ ಎಂದ. ಹಣ ಕೊಟ್ಟು ಕ್ಯಾಪ್ ಹಾಕಿಕೊಂಡು ಹೊರಕ್ಕೆ ಬಂದೆ. ಎಲ್ಲರೂ ಜೊತೆ ಕೂಡಿಕೊಂಡರು. ಆ ದಿನ ಅವರಿಗೆಲ್ಲ ನನ್ನ ಬೋಳು ತಲೆಯೇ ಟಾಪಿಕ್ ಆಗಿತ್ತು. ಸುಮಾರು ವರ್ಷಗಳು ಎಣ್ಣೆಯೇ ಇಡದಿದ್ದ ನಾನು ಈಗ ದಿನಾಗಲೂ ಎಣ್ಣೆ ಹಾಕಿ ಬೋಳು ತಲೆಯನ್ನು ತೀಡಿಕೊಳ್ಳುತ್ತಿದ್ದೆ. ಸುರೇಂದ್ರನಾಥ್ ಫೋಟೋ ತೆಗೆದಾಗ ಅರೆ ನೀನು ಸೈಯದ್ ಕಿರ್ಮಾನಿ ಥರಾನೆ ಕಾಣಿಸುತ್ತಿದ್ದೀಯಲ್ಲಾ ಎಂದು ಹಾಸ್ಯಮಾಡಿದ. ಅವನ ಹಾಸ್ಯದ ಇಂಗಿತ ನಾನು ಕಿರ್ಮಾನಿಯಂತೆ Ever baldy ಆಗಬೇಕಿತ್ತೋ ಏನೋ?

ಆಫಿಸ್ ಮುಖಿಂನಲ್ಲಿ ಆಗಾಗ ಮಳೆ ಬೀಳುತ್ತಿತ್ತು. ನಮ್ಮ ಗುಂಪು ದಾಲ್‌ರವರಿಂದ ಗೌರ್‌ರವರ ಕೆಳಗೆ ಬಂದಿತು. ಗೌರ್ ಅವರಿಗೆ ಬೆಟ್ಟಗಳನ್ನು ಹತ್ತುತ್ತಾ ಹೋಗುವುದೆಂದರೆ ಎಲ್ಲಿಲ್ಲದ ಖುಷಿ ಎಂದು ಕೇಳಿದ್ದೆವು. ಕಾಲುಗಳು ನೋವಾದರೆ ನೋವು ನಿವಾರಣೆಯ ಮಾತ್ರೆಗಳನ್ನು ನುಂಗುತ್ತಾ ಶಿಖರಗಳನ್ನು ಮೇಕೆಯಂತೆ ಹತ್ತುತ್ತ ಹೋಗುತ್ತಾರಂತೆ. ಬಸ್ಸು ಹೋಗುವಷ್ಟು ದೂರ ಹೋದನಂತರ ನಮ್ಮನ್ನು ದಾರಿಯಲ್ಲಿ ಇಳಿಸಿ ಹೊರಟು ಹೋಯಿತು. ಒಂದು ಕಣಿವೆಯಿಂದ ಹತ್ತಲು ಪ್ರಾರಂಭಿಸಿದ ನಾವು ಕಣಿವೆಗಳನ್ನು ಕಡಿದಾದ ತಪ್ಪಲುಗಳನ್ನು ಹತ್ತಿ ಇಳಿಯುತ್ತಾ ಅಲ್ಲಿನ ಶಿಲಾ ಪದರುಗಳನ್ನೆಲ್ಲಾ ಪರೀಕ್ಷಿಸತೊಡಗಿದೆವು.

ಕೆಲವು ಮೋಡಗಳು ನಮ್ಮನ್ನು ಸವರಿಕೊಂಡು ಓಡಾಡಿದರೆ ಇನ್ನೂ ಕೆಲವು ಪೂರ್ಣವಾಗಿ ಸುತ್ತುವರಿದುಕೊಂಡು ಮುಂದೆ ಸಾಗುವುದೇ ಕಷ್ಟವಾಗಿಬಿಡುತ್ತಿತ್ತು. ತಪ್ಪಲುಗಳನ್ನು ಹತ್ತುವಾಗ ಅಷ್ಟೆ ಕಷ್ಟವಾಗುತ್ತಿತ್ತು. ಆ ಚಳಿಯಲ್ಲೂ ಮೈಯೆಲ್ಲಾ ಬೆವರುತ್ತಿತ್ತು. ಒಮ್ಮೆ ತುದಿಯನ್ನು ತಲುಪಿ ಸುತ್ತಲಿನ ದೃಶ್ಯವನ್ನು ವೀಕ್ಷಿಸಿದಾಗ ನೋವೆಲ್ಲಾ ಕ್ಷಣಗಳಲ್ಲಿ ಮಾಯವಾಗಿ ಉಲ್ಲಾಸ ಮೂಡುತ್ತಿತ್ತು.

ಕೆಳ ತಪ್ಪಲುಗಳಲ್ಲಿ ಹಾದು ಬರುವಾಗ ಆಪಲ್ ಕಾಯಿಗಳನ್ನು ಕಿತ್ತು ತಂದಿದ್ದ ಕೆಲವರು ಮಧ್ಯೆ ಮಧ್ಯೆ ಎಲ್ಲರಿಗೂ ಒಂದೊಂದು ಕೊಡುತ್ತಿದ್ದರು. ಬೆಂಗಳೂರು ಮಾವಿನಕಾಯಿಯಷ್ಟೆ, ಹುಳಿ ಮತ್ತು ಸಿಹಿಯನ್ನು ತುಂಬಿಕೊಂಡಿದ್ದ ಆ ಕಾಯಿಗಳು ಎಲೆಗಳಷ್ಟೆ, ಹಸಿರಾಗಿದ್ದವು.

ಶಿಬಿರದ ತುತ್ತತುದಿಯಲ್ಲಿ ಕುಳಿತು ಜೊತೆಗೆ ತಂದಿದ್ದ ತಿಂಡಿ ತಿಂದು ಸ್ವಲ್ಪ ವಿಶ್ರಾಂತಿ

ಪಡೆದುಕೊಂಡೆವು ಸಮಯ ಆಗಲೇ ಎರಡು ಗಂಟೆ ತೋರಿಸುತ್ತಿತ್ತು. ಎದುರಿಗೆ ಕಾಣಿಸುತ್ತಿದ್ದ ಇನ್ನೊಂದು ಶಿಖರ ಪಂಜಾಲ್ ಜ್ವಾಲಾಮುಖಿಯನ್ನು ದೂರದಿಂದ (ಅಗ್ನಿ ಪರ್ವತ) ತೋರಿಸಿದ ಗೌರ್‌ರವರು,

"ಇಷ್ಟು ದೂರ ಬಂದಾದ ಮೇಲೆ ಆ ಹಳೆಯ ಅಗ್ನಿ ಪರ್ವತವನ್ನು ನೋಡಿ ಬಿಡೋಣ. ಮತ್ತೆ ಅದಕ್ಕಾಗಿಯೇ ಬರಬೇಕಾದರೆ ಕಷ್ಟವಾಗುತ್ತದೆ. ಜೊತೆಗೆ ಬಸ್ಸನ್ನು ಮುಂದಿನ ತಪ್ಪಲಿಗೆ ಬರುವಂತೆ ತಿಳಿಸಲಾಗಿದೆ" ಎಂದರು. ಕೆಲವರು ಆಗಲಿ ಸಾರ್ ಎಂದರೆ ಮತ್ತೆ ಕೆಲವರು ಕತ್ತಲಾಗಿ ಬಿಟ್ಟರೆ ಸಂಶಯ ವ್ಯಕ್ತ ಪಡಿಸಿದರು. ಸರಿ ನಡೆಯಿರಿ ಬೇಗನೆ ಹೋಗಿ ವಾಪಸ್ ಬಂದು ಬಿಡೋಣ ಎಂದು ಎಲ್ಲರೂ ಹೊರಟೆವು.

ಒಂದು ಕಣಿವೆ ಇಳಿಯುತ್ತಿದ್ದಂತೆ ಮೋಡಗಳು ಗುಂಪು ಕಟ್ಟಿಕೊಂಡು ನಮ್ಮನ್ನು ಸುತ್ತುವರಿದವು. ಕೆಲವೇ ನಿಮಿಷಗಳಲ್ಲಿ ಮಳೆ ಒಂದೇ ಸಮನೆ ಸುರಿಯ ತೊಡಗಿತು. ನಾವು ಧರಿಸಿದ್ದ ಬಟ್ಟೆಗಳೆಲ್ಲಾ ತೊಯ್ದು ತೊಪ್ಪೆಯಾದವು. ಕಣಿವೆಯಲ್ಲೆ ಉಳಿದರೆ ನೆರೆ ಬರುವ ಸಾಧ್ಯತೆ ಇದ್ದು ಹಿಂದಕ್ಕೆ ಹೋಗುವುದೋ ಅಥವಾ ಮುಂದಕ್ಕೆ ಹೋಗುವುದೋ ನಿರ್ಧಾರ ತೆಗೆದುಕೊಳ್ಳುವುದು ಕಷ್ಟವಾಯಿತು. ಹಿಂದಕ್ಕೆ ಹೋದರೆ ದೂರ ನಡೆಯಬೇಕಿದೆ. ಮುಂದಕ್ಕೆ ಹೋದರೆ ನೆರೆ ಬರುವು ಸಾಧ್ಯತೆ ಇದೆ. ನೆರೆಯಲ್ಲಿ ಕೊಚ್ಚಿಕೊಂಡು ಹೋಗುವುದಕ್ಕಿಂತ ಹಿಂದಕ್ಕೆ ನಡೆಯುವುದೇ ವಾಸಿ ಎಂದು ತೀರ್ಮಾನಿಸಲಾಯಿತು. ಕತ್ತಲು ತನ್ನ ಛಾಯೆಯನ್ನು ಗಾಢವಾಗಿ ಮುತ್ತಿಕೊಂಡಿತ್ತು. ತಪ್ಪಲನ್ನು ಇಳಿಯುವಾಗ ಮತ್ತು ಹತ್ತುವಾಗ ಕೆಲವರು ಜಾರಿ ಜಾರಿ ಬೀಳುತ್ತಿದ್ದಾರೆ. ಎಲ್ಲರಲ್ಲೂ ಒಂದು ರೀತಿಯ ಅನಿರೀಕ್ಷಿತ ಭಯದ ಅಲೆಗಳು ತುಂಬಿ ತುಳುಕಾಡುತ್ತಿವೆ. ಮರಗಳು ಮತ್ತು ಕಲ್ಲು ಬಂಡೆಗಳು ತಮ್ಮ ಆಕಾರಗಳನ್ನು ಬದಲಿಸಿಕೊಂಡು ನಮ್ಮನ್ನು ಅಣುಕಿಸುವಂತೆ ನೋಡುತ್ತಿವೆ.

ಈಗ ಹೆಚ್ಚೂ ಕಡಿಮೆ ಪೂರ್ಣ ಕತ್ತಲು ಹಾವುಗಳ ಭಯ ಬೇರೆ. ಗೌರ್ ಅವರು ಸಣ್ಣ ಪ್ಯಾಕೆಟ್ ಟಾರ್ಚು ಹಿಡಿದು ಮುಂದೆ ಹೋಗುತ್ತಿದ್ದಂತೆ ಹಿಂದಿನಿಂದ ನಾವೆಲ್ಲ ಒಂದೇ ಗೆರೆಯಲ್ಲಿ ರೈಲು ಭೋಗಿಗಳಂತೆ ಸಾಗುತ್ತಿದ್ದೇವೆ. ಮುಂದಿದ್ದ ಗೌರ್ ಅವರು ಆಗಾಗ ಐದಾರು ಕೆಲವೊಮ್ಮೆ ಹತ್ತು ಅಡಿ ದೂರ ಜಾರಿ ಕೊಂಡು ಹೋಗಿ ಬೀಳುತ್ತಿದ್ದಾರೆ. ನಾವೆಲ್ಲಾ ಯಾವ ಕಡೆಗೆ ಹೋಗುತ್ತಿದ್ದೆವೋ ..? ಯಾರಿಗೂ ಗೊತ್ತಿಲ್ಲ. ಚಳಿ ಹೆಪ್ಪುಗಟ್ಟುತ್ತಾ ಹೋಗುತ್ತಿದ್ದು ದಾಹವಾಗುತ್ತಿದೆ. ಸಮಯ ಸುಮಾರು ರಾತ್ರಿ ಒಂಬತ್ತು ಗಂಟೆಯಾಗಿದ್ದು ಇನ್ನೂ ಕಾಡಿನಲ್ಲೇ ಅಲೆದಾಡುತ್ತಿದ್ದೇವೆ. ಎಲ್ಲರೂ ಒಮ್ಮೆಲೆ ಪ್ರೊ. ಚಂದ್ರಶೇಖರ್ ರವರ ಕಪ್ಪು ರಂಧ್ರದೊಳಕ್ಕೆ ಹೋಗುವಂತೆ ತೋರುತ್ತಿದೆ.

ಯಾರೋ ಎಲ್ಲೋ ದೂರದಲ್ಲಿ ಕೂಗಾಡುವ ಸದ್ದು..ಸೀಟಿ ಹಾಕುತ್ತಿರುವ ಸದ್ದು.. ಸ್ವಲ್ಪ ಹೊತ್ತು ಉಸಿರು ಹಿಡಿದು ಸದ್ದು ಬರುವ ದಿಶೆಯನ್ನು ತಿಳಿದುಕೊಂಡ ಮೇಲೆ ಒಮ್ಮೆಲೆ ಎಲ್ಲರೂ ಪ್ರಾಣ ಬಂದಂತೆ ಕೂಗಿಕೊಂಡೆವು. ಅವರೂ.. ನಾವು, ನಾವು.. ಅವರೂ.. ಕೂಗಾಡುತ್ತ ಹತ್ತಿರವಾದೆವು. ತರಬೇತಿ ಕೇಂದ್ರದ ಕೂಲಿ ಆಳುಗಳು ಪೆಟ್ರೋಮ್ಯಾಕ್ಸ್ ದೀಪಗಳ ಜೊತೆಗೆ ನೀರು ಕೂಡ ತಂದಿದ್ದರು. ಎಲ್ಲರೂ ನೀರು ಕುಡಿದು ದಣಿವಾರಿಸಿಕೊಂಡ ಮೇಲೆ ನಿಧಾನವಾಗಿ ಇಳಿಯ ತೊಡಗಿದೆವು. ಕೊನೆಗೂ ಹನ್ನೊಂದು ಗಂಟೆ ರಾತ್ರಿಗೆ ಕ್ಯಾಂಪ್ ತಲುಪಿದೆವು. ತರಬೇತಿ ಕೇಂದ್ರದ ಮುಖ್ಯಸ್ಥರಾದ ಶರ್ಮಾ ಮತ್ತು ಎಲ್ಲಾ ತರಬೇತಿದಾರರೂ ಬಂದು ಮಾತನಾಡಿಸಿದರು. ಬಸ್ಸು ಆಗಲೇ ಬಂದು ನಿಂತಿತ್ತು. ಬೆಳಿಗ್ಗೆ ಎದ್ದಾಗ ನಡೆಯಲು ಆಗಲಿಲ್ಲ, ಕೈಕಾಲುಗಳೆಲ್ಲ ಸೆಳೆತುಕೊಂಡು ನೋವಾಗುತ್ತಿತ್ತು.

ಒಂದೆರಡು ದಿನಗಳಾದ ಮೇಲೆ ಶ್ರೀ ನಗರ ಮತ್ತು ಸೋನಾ ಮಾರ್ಗ ಕಡೆ ಪ್ರವಾಸ ಮಾಡಲು ತಯಾರಾದೆವು. ಒಂದು ಬೆಳಿಗ್ಗೆ ಅನಂತನಾಗ್ ಮತ್ತು ಅವಂತೀ ಪುರದ ಮುಖಾಂತರ ಶ್ರೀನಗರ ತಲುಪಿದೆವು. ದಾರಿಯಲ್ಲಿ ಹೋಗುವಾಗ ಕಣಿವೆಗಳ ತುಂಬಾ ತುಂಬಿಕೊಂಡಿರುವ ಸಣ್ಣನೆ ಮೆಕ್ಕಲು ಮಣ್ಣಿನ ಮೇಲೆ ಬೆಳೆಸಿರುವ ಚಿಕ್ಕ ಚಿಕ್ಕ ಎಲೆಗಳ ಪುಟ್ಟ ಗಿಡಗಳಲ್ಲಿ ಇನ್ನಷ್ಟು ಪುಟ್ಟದಾದ ಕುಂಕುಮ ಹೂವು (ಕೇಸರಿ)ಗಳು, ಎಲೆಗಳ ನಡುವೆ ಕೆಂಪು ಹರಳುಗಳಂತೆ ಹೊಳೆಯುತ್ತಿದ್ದವು. ಒಂದು ಗ್ರಾಂ ಹೂವು ನೂರು ಇನ್ನೂರು ರೂಪಾಯಿಗಳಿಂತ ಹೆಚ್ಚು ಬೆಲೆ.

ಶ್ರೀನಗರದ. ಗುಲ್ಷನ್ ಎಂಬ ಹೋಟೆಲಿನಲ್ಲಿ ಎಲ್ಲರೂ ಉಳಿದುಕೊಂಡೆವು. ಸಾಯಂಕಾಲ ಹತ್ತಿರದಲ್ಲೇ ಇದ್ದ "ದಾಲ್" ಸರೋವರದ ಹತ್ತಿರ ಬಂದಿದ್ದೆ ಒಂದು ತೆಪ್ಪೆಯವನ ಜೊತೆ ಮಾತನಾಡಿ ನಾನು, ಸುರೇಂದರ್‌ನಾಥ್ ಮತ್ತು ಮುಖ್ಯೋಪಾಧ್ಯಾಯ ತೆಪ್ಪೆ ಏರಿ ಕುಳಿತು ನೆಹರು ಹೂ ತೋಟಕ್ಕೆ (ಸರೋವರದ ಮಧ್ಯದಲ್ಲಿರುವ ಒಂದು ಸಣ್ಣ ದ್ವೀಪ) ಹೋಗುವಂತೆ ತಿಳಿಸಿದೆವು.

ಅದಕ್ಕಿಂತ ಕೆಲವೇ ಕ್ಷಣಗಳ ಮುಂಚೆ ನಡೆದ ಒಂದು ಸಣ್ಣ ಘಟನೆಯ ಬಗ್ಗೆಯೇ ಯೋಚಿಸುತ್ತಿದ್ದೆ. ನಾವು ಸರೋವರದ ದಡದಲ್ಲಿದ್ದಾಗ ಮಳೆ ಹನಿಗಳು ಪಟ ಪಟನೆ ಬೀಳುತ್ತಿದ್ದು ಒಬ್ಬ ಯೂರೋಪಿಯನ್ ಸರೋವರದ ಇನ್ನೊಂದು ದಡದಲ್ಲಿ ಶಾಶ್ವತವಾಗಿ ನಿಲ್ಲಿಸಿರುವ ಬೋರ್ಡಿಂಗ್ ದೋಣಿಗಳ ಕಡೆಗೆ ಹೋಗಲು ತೆಪ್ಪೆಯವನನ್ನು ಕೇಳಿದ. ಕೇವಲ ನೂರಾ ಐವತ್ತು ಅಡಿಗಳ ದೂರದಲ್ಲಿರುವ ದೋಣಿಗಳ ಕಡೆಗೆ ಹೋಗಲು ತೆಪ್ಪೆಯವನು ಇನ್ನೂರು ರೂಪಾಯಿಗಳನ್ನು ಕೇಳಿದ. ಯೂರೋಪಿಯನ್ ಇಪ್ಪತ್ತು ರೂಪಾಯಿಗಳನ್ನು ಕೊಡುವುದಾಗಿ ತಿಳಿಸಿದ. ತೆಪ್ಪೆಯವನು ನೂರಾ ಎಂಭತ್ತು ಎಂದ. ಯೂರೋಪಿಯನ್ ಮತ್ತೊಮ್ಮೆ ಇಪ್ಪತ್ತು ರೂಪಾಯಿಗಳಿಗೆ ಬರುವುದಿಲ್ಲವೇ ಕೇಳಿದ. ತೆಪ್ಪೆಯವನು ಇಲ್ಲ ನೂರಾಇಪ್ಪತ್ತು ಎಂದ. ಆ

ಯೂರೋಪಿಯನ್ ಸರೋವರದ ಹತ್ತಿರಕ್ಕೆ ಬಂದಿದ್ದೇ ದುಡುಂ ಎಂದು ಸರೋವರದೊಳಕ್ಕೆ ಒಂದು ಡೈವ್ ಹೊಡೆದು ನೋಡು ನೋಡುತ್ತಿದ್ದಂತೆ ಈಜುತ್ತಾ ಅವನ ದೋಣಿ ಮನೆಯ ಕಡೆಗೆ ಹೋಗಿಯೇ ಬಿಟ್ಟ. ಆ ಯೂರೋಪಿಯನ್ ನಮ್ಮ ದೇಶ, ಜನಗಳ ಬಗ್ಗೆ ಏನು ಯೋಚಿಸುತ್ತಿರಬಹುದು ? ಏಕೋ ನನ್ನ ಮನ ಸಂಕುಚಿತಗೊಂಡಿತ್ತು.

ನಮ್ಮ ತೆಪ್ಪ ನಿಧಾನವಾಗಿ ತಿರುಗಿಕೊಂಡು ಮಧ್ಯದಲ್ಲಿರುವ ನೆಹರೂ ತೋಟದ ಕಡೆಗೆ ಹೋಗುತ್ತಿದ್ದು, ಕತ್ತಲು ತನ್ನ ಹಿಡಿತವನ್ನು ಬಿಗಿಗೊಳಿಸುತ್ತಿತ್ತು. ದ್ವೀಪದ ಮಧ್ಯೆದಲ್ಲಿರುವ ವಿಶಾಲವಾದ ಮನೆ, ದೀಪಗಳು ಮತ್ತು ಹೂ ಬಳ್ಳಿಗಳಿಂದ ಶೃಂಗಾರಗೊಂಡಿದ್ದು ನೋಡಲು ಸೊಗಸಾಗಿ ಕಾಣಿಸುತ್ತಿತ್ತು.

ಅಷ್ಟರಲ್ಲಿ ಇನ್ನೊಮ್ಮೆ ಘರ್ಜಿಸಿದ ಕಪ್ಪು ಮೋಡಗಳು ಇದ್ದಕ್ಕಿದ್ದಾಗೆ ನಮ್ಮ ಮೇಲೆ ಆಲಿಕಲ್ಲಗಳ ಪ್ರಹಾರ ಮಾಡಿಬಿಟ್ಟಿತು. ತೋಟದ ಮನೆ ಇನ್ನೂ ಸುಮಾರು ಐವತ್ತು ಮೀಟರುಗಳ ದೂರದಲ್ಲಿದೆ. ನಾವಿಕ ಬಟ್ಟೆಯನ್ನು ತಲೆಗೆ ಸುತ್ತಿಕೊಂಡು ಹುಗೋಲಿಂದ ವೇಗವನ್ನು ಹೆಚ್ಚಿಸಿದ. ಸುರೇಂದ್ರನಾಥ್ ಮತ್ತು ಮುಖ್ಯೋಪಾಧ್ಯಾಯರ ನಡುವ ತೂರಿಕೊಂಡೆ.

ತೋಟವನ್ನು ತಲುಪಿದ್ದೆ ಅವನಿಗೆ ಹಣ ಕೊಟ್ಟು, ಎರಡೂ ಕೈಗಳನ್ನು ತಲೆಗೆ ಅಡ್ಡವಾಗಿ ಹಿಡಿದುಕೊಂಡು ಓಡೋಡಿ ಜನಗಳ ಮಧ್ಯೆ ಸೇರಿಕೊಂಡೆವು. ನೋಡುನೋಡುತ್ತಿದ್ದಂತೆ ಕೆಲವೇ ನಿಮಿಷಗಳಲ್ಲಿ ಇಡೀ ತೋಟವೇ ಆಲಿಕಲ್ಲುಗಳ ಹಾಸಿಗೆಯಿಂದ ಬಿಳುಪಾಗಿ ಬಿಟ್ಟಿತು. ಮಳೆ ನಿಂತ ತಕ್ಷಣ ಹೆಂಗಸರು ಮಕ್ಕಳು ಆಲಿಕಲ್ಲುಗಳ ಮೇಲೆ ಖುಷಿಯಿಂದ ಓಡಾಡತೊಡಗಿದರು. ನಾವು ಚಹ ಕುಡಿದು ಸ್ವಲ್ಪ ಸಮಯ ಕಳೆದ ಮೇಲೆ, ಅಲ್ಲಿಂದ ಹಿಂದಕ್ಕೆ ಬಂದೆವು.

ಅಲ್ಲಿಂದ ರಸ್ತೆಗೆ ಬಂದಿದ್ದೆ ನಮ್ಮ ಸಹೋದ್ಯೋಗಿಯಾದ ಬೋಳು ತಲೆಯ ಬ್ಯಾಚುಲರ್ ಬಷೀರ್ ಅಹ್ಮದ್ ಸಿಗರೇಟು ಹಚ್ಚಿಕೊಂಡು ನಡೆದು ಬರುತ್ತಿದ್ದ. ಹೋತಗಡ್ಡದ ಮಧ್ಯ ವಯಸ್ಸಿನ ಕಾಶ್ಮೀರಿ ಏಜೆಂಟ್ ಒಬ್ಬ ಬಷೀರ್ ಹಿಂದೆಯೇ ಗಂಟು ಬಿದ್ದಿದ್ದ. ನಾವು ಕೂಡಿಕೊಂಡಾಗ ಇನ್ನಷ್ಟು ಹುರುಪುಗೊಂಡು ಕೊಸರತೊಡಗಿದ. ಸುಮಾರು ದೂರ ನಡೆದ ಮೇಲೆ ತನ್ನ ತಲೆಯಲ್ಲಿದ್ದ ಮೂರು ಕೂದಲನ್ನು ಎಡಗೈಯಿಂದ ಸವರಿಕೊಂಡ ಬಷೀರ್ ಇಲ್ಲಿ ನೋಡು ಕಾಶ್ಮೀರಕ್ಕೆ ಬಂದ ಮೇಲೆ ಇಷ್ಟು ಕೂದಲು ಮಾತ್ರ ಉಳಿದಿದೆ. ಅವುಗಳನ್ನೂ ಬಿಡುವುದಿಲ್ಲವೆ.? ಎಂದ. ತನ್ನ ನಾಲಿಗೆ ನೇರಕ್ಕೆ ತೋರು ಬೆರಳನ್ನು ತೋರಿ ಇಲ್ಲ ಇಲ್ಲ ಎಂದು ಏಜೆಂಟ್ ಹೊರಟುಬಿಟ್ಟ.

ಮೊಘಲರ ಕಾಲದಲ್ಲಿ ವಿಶಾಲವಾಗಿ ಸೊಗಸಾಗಿ ಬೆಳೆಸಿದ್ದ ಹೂತೋಟಗಳು.

ಸರೋವರಗಳು, ಪ್ರಪಂಚ ಪ್ರಖ್ಯಾತ ಗುಲ್‌ಮಾರ್ಗ್, ಶಂಕರಾಚಾರ್ಯ ಗುಡ್ಡ ಎಲ್ಲವನ್ನೂ ನೋಡಿಕೊಂಡು ಮರುದಿನ ಸೋನಾಮಾರ್ಗ ಕಡೆಗೆ ಪ್ರವಾಸ ಹೊರಟೆವು.

ಕೇವಲ ಬಿಸಿಲು ಕಾಲದಲ್ಲಿ ಮಾತ್ರ ಹೋಗಬಹುದಾಗಿದ್ದ ಸೋನಾಮಾರ್ಗ ದಾರಿಯ ಉದ್ದಕ್ಕೂ, ಬಹಳಷ್ಟು ಹಳ್ಳ ಕೊಳ್ಳಗಳ ಜೊತೆಗೆ ಸೆಣಸಾಡಿದ ಬಸ್ಸು ಕೊನೆಗೂ ಸೋನಾಮಾರ್ಗ ತಲುಪಿತು. ದಾರಿಯ ಉದ್ದಕ್ಕೂ ಕಣಿವೆಗಳನ್ನು ಅಪ್ಪಿಕೊಂಡು ತಪ್ಪಲುಗಳ ಜೊತೆಜೊತೆಯೆ ಮಲಗಿದ್ದ ದೈತ್ಯಾಕಾರದ ಬರ್ಫ್ ಗುಡ್ಡಗಳ ಮೇಲೆಲ್ಲಾ ಓಡಾಡಿದೆವು. ಕೆಲವರಂತೂ ಎತ್ತರದಿಂದ ಕೆಳಗಿನವರೆಗೂ ಜಾರು ಬಂಡೆಯಾಟ ಆಡತೊಡಗಿದರು.

ಹಿಮಾಲಯದಲ್ಲಿ ಬರ್ಫ್ ಗುಡ್ಡೆಗಳು ಹೆಚ್ಚಾದಂತೆ ಸಸ್ಯರಾಶಿ ಕಡಿಮೆಯಾಗುತ್ತಾ ಹೋಗುತ್ತದೆ. ಸೋನಾಮಾರ್ಗ್ ಒಂದು ಸಣ್ಣ ಸಂತೆ ಹಳ್ಳಿ ಎನ್ನಬಹುದು. ಬಿಸಿಲು ಕಾಲದ ಮೂರು ತಿಂಗಳು ಮಾತ್ರ ಇಲ್ಲಿ ಮನುಷ್ಯರ ಓಡಾಟವಿರುತ್ತದೆ. ನಿಜವಾದ ಸೋನಾಮಾರ್ಗ್ ಪ್ರದೇಶಕ್ಕಿಂತಲೂ ಸೋನಾಮಾರ್ಗ್‌ಗೆ ಹೋಗುವ ದಾರಿಯೇ ರಮಣೀಯ ಪ್ರವಾಸ ಪ್ರದೇಶ ಎನ್ನಿಸಿತು.

ಈ ಹಿಮಾಲಯದ ಬಗ್ಗೆ ಹೇಳುತ್ತಾ ಹೋದರೆ ಮೈ ಪುಳಕಗೊಳ್ಳುತ್ತದೆ. ಆರ್ಯರು. ಮೊಗಲರು, ಭಾರತದ ಮೇಲೆ ಆಕ್ರಮಣ ನಡೆಸಿದ್ದು ಈ ಹಿಮಾಲಯವನ್ನು ದಾಟಿ ಬಂದೆ. ಭೂಮಿ ಅಚ್ಚೆ ಪಾರಿಯಾಗಿ ಅಲೆದಾಡುತ್ತಿದ್ದ ಕಾಲದಲ್ಲಿ· ಭೂಮಿಯ ಮಧ್ಯ ಮಹಾ ಬಿರುಕೊಂದು ಕಾಣಿಸಿಕೊಂಡಿತು. ಆ ಬಿರುಕಿನ ಸುತ್ತ ಹಬ್ಬಿಕೊಂಡಿದ್ದ ಮಹಾ ಸಾಗರವೆ ತೆಥೀಸ್ ಮಹಾಸಾಗರ. ಈ ಮಹಾಸಾಗರವನ್ನು ಇಂಡಿಯನ್ ಭೂ ಚಿಪ್ಪು ಮತ್ತು ಚೈನಾ ಭೂ ಚಿಪ್ಪು ಕತ್ತಿಸಿದಾಗ ಮುಖ್ಯವಾಗಿ ಮೂರು ಹಂತಗಳಲ್ಲಿ ಹಿಮಾಲಯ ಭೂಮಂಡಲದ ಮೇಲೆ ಅತಿ ಎತ್ತರಕ್ಕೆ ಎದ್ದು ನಿಂತಿತು. 2600 ಕಿ.ಮೀ. ಗಳ ಉದ್ದ ಮತ್ತು ಸರಾಸರಿ 200 ಕಿ.ಮೀ.ಗಳ ಅಗಲವಿರುವ ಈ ಹಿಮಾಲಯ ಶ್ರೇಣಿಗಳಲ್ಲಿ ಹರಿದು ಬರುವ ಸಿಂಧೂ ಗಂಗಾ ನದಿಗಳ ದಡಗಳಲ್ಲಿ ಅನೇಕ ನಾಗರಿಕ ತೊಟ್ಟಿಲುಗಳು ಬೆಳೆದು ನಿಂತವು.

* * *

## 7. ನಿಜಾಮರ ನಗರದಲ್ಲಿ

ಹಿಮಾಲಯದಿಂದ ವಾಪಸ್ ಬಂದ ಮೇಲೆ ಸುಮಾರು ಒಂಬತ್ತು ತಿಂಗಳು ಕಾಲ ದೂರವಿದ್ದ ನಾನು ಮತ್ತು ಸುಶೀಲ ಹೈದರಾಬಾದ್‌ನ ಹೋಟೆಲ್ ಮಂಜರಾದಲ್ಲಿ ಉಳಿದುಕೊಂಡೆವು.

ಸಹಪಾಟಿಗಳಾದ ಜೋರಾ, ಪ್ರಭೀರ್ ಗಂಗೂಲಿ, ಚಾರ್ಲ್ಯು, ಉಮಾರಾವ್ ಮತ್ತು ಉಮ್ಮರ್ ತಮ್ಮ ಪರಿವಾರಗಳ ಜೊತೆಗೆ ಬಂದಿದ್ದರು. ತರಬೇತಿ ಪ್ರಯೋಗ ಶಾಲೆಗೆ ಸೀಮಿತವಾಗಿದ್ದರಿಂದ ಸಾಯಂಕಾಲ ನಾಲ್ಕು ಗಂಟೆಗೆಲ್ಲಾ ಕೆಲಸ ಮುಗಿಯುತ್ತಿತ್ತು. ಮೂರು ಹೊತ್ತು ಹೊರಗಡೆಯೇ ಊಟ ಮಾಡುತ್ತಿದ್ದು, ಎರಡೂವರೆ ವರ್ಷದ ಕ್ರಾಂತಿಗೆ ಊಟ ಹೊಂದುತ್ತದೋ ಇಲ್ಲವೋ ಎನ್ನುವ ಭಯ ಬೇರೆ ಇತ್ತು. ಅವನೋ ಎಲ್ಲವನ್ನೂ ಬಿಟ್ಟು ಬರಿ ಉದ್ದಿನ ವಡೆಗಳನ್ನೇ ಕೇಳುತ್ತಿದ್ದ.

ಪತ್ರಿಕೆ, ರೇಡಿಯೋ ಜಾಹಿರಾತುಗಳ ಮುಖಾಂತರ ದಿನಕ್ಕೊಂದು ಸಿನಿಮಾ ಆಯ್ಕೆ ಮಾಡಿಕೊಂಡು ನೋಡುತ್ತಿದ್ದ ನಾವು ಕೆಲವೇ ದಿನಗಳಲ್ಲಿ ಸುತ್ತ ಮುತ್ತಲಿದ್ದ ಸಿನಿಮಾಗಳೆಲ್ಲವನ್ನು ನೋಡಿ ಮುಗಿಸಿದ್ದೆವು. ಅನಂತರ ದೂರವಿದ್ದ ಚಿತ್ರಮಂದಿರಗಳ ಕಡೆಗೆ ಹುಡುಕಿಕೊಂಡು ಹೋಗುವಂತಾಯಿತು. ಇದರ ನಡುವೆ ವಿಧಾನಸೌಧ, ಅಬೀಡ್ಸ್, ನೆಹರೂ ಪ್ರಾಣಿ ಸಂಗ್ರಹಾಲಯ, ಚಾರ್‌ಮಿನಾರ್, ಗೋಲ್ಕೊಂಡ ಕೋಟೆ, ಬಿರ್ಲಾಮಂದಿರ, ಹುಸೇನ್ ಸಾಗರ್ ಟ್ಯಾಂಕ್ ಬಂಡ್ ರಸ್ತೆ, ಸಾಲಾರ್‌ಜಂಗ್ ಪ್ರದರ್ಶನಾಲಯ ಎಲ್ಲವನ್ನು ನೋಡಿಯಾಗಿತ್ತು. ಮುಖ್ಯ ಮಂತ್ರಿ ಎನ್.ಟಿ. ರಾಮರಾವ್ ಅವರನ್ನು ಒಮ್ಮೆ ನೋಡಬೇಕೆಂದುಕೊಂಡರೂ ನೋಡಲು ಆಗಲೆ ಇಲ್ಲ.

ಆಗಾಗ ಮದ್ಯದ ರುಚಿ ನೋಡಿದ್ದ ನನಗೆ ಎಷ್ಟೋ ಸಲ ಸುಶೀಲಳ ಜೊತೆಗೆ ತೆಗೆದುಕೊಳ್ಳಬೇಕೆನಿಸುತ್ತಿತ್ತು. ಅವಳ ಅನುಮತಿ ಒಂದು ಕಡೆಗಿರಲಿ, ಅದನ್ನು ಕೇಳಲು ಧೈರ್ಯ ಕೂಡ ಬರುತ್ತಿರಲಿಲ್ಲ. ಒಮ್ಮೆ ಲಖನೌದಲ್ಲಿ ಚಳಿಗೆ ವಿಲ್ಸ್ ಫಿಲ್ಟರ್ ಸಿಗರೇಟು ಹಚ್ಚಿಕೊಂಡು ಮನೆ ಒಳಕ್ಕೆ ಸ್ಟೈಲ್ ಆಗಿ ನಡೆದು ಬಂದೆ. ಸುಶೀಲ.

"ಪ್ಲ ಕ್ರಾಂತಿ, ಡ್ಯಾಡಿ ನೋಡಮ್ಮ ಸಿಗರೇಟು ಸೇದುವುದು" ಎಂದಳು. ಖುಷಿಯಿಂದ ಇನ್ನೊಂದು ದಮ್ಮನ್ನು ಜೋರಾಗಿ ಎಳೆದೆ. ಅಷ್ಟರಲ್ಲಿ ಸಿಗರೇಟ್ ಕಸಿದುಕೊಂಡ ಸುಶೀಲ

ತನ್ನ ಕೈ ಮೇಲೆ ಜೋರಾಗಿ ಒತ್ತಿಕೊಂಡಳು. ಆಕಸ್ಮಾತ್ತಾಗಿ ಕ್ಷಣಾರ್ಧದಲ್ಲಿ ನಡೆದು ಹೋದ ಘಟನೆಯನ್ನು ನೋಡುತ್ತ ನಿಂತು ಬಿಟ್ಟೆ. ಸುಮಾರು ಹೊತ್ತು ಇಬ್ಬರೂ ಮಾತನಾಡಲಿಲ್ಲ.

ನಾವಿಬ್ಬರೂ ಜಗಳವಾಡಿ, ಸುಶೀಲ ಮಾಡಿದ್ದು ಅವಳಿಗೆ ತಪ್ಪೆನಿಸಿದ್ದೇ ಆದರೆ (ಅವಳ ಮನಸ್ಸಿಗೆ) ನನಗೆ ಗೊತ್ತಿಲ್ಲದೆ ಸಣ್ಣದಾಗಿ ಕಾಲಿನ ಮೇಲೆ ಯಾರಿಗೂ ಗೊತ್ತಾಗದ ಕಡೆ  ಬರೆ ಎಳೆದುಕೊಳ್ಳುತ್ತಿದ್ದಳಂತೆ. ಅದೂ ಒಂದು ತಪ್ಪಿಗೆ ಒಂದು, ಎರಡು ತಪ್ಪಿಗೆ ಎರಡು ಹೀಗೆ, ನನಗೆ ವಿಷಯ ತಿಳಿದ ಮೇಲೆ ಅವಳ ಸ್ಟೈಲಿಗೆ ಬೆರಗಾಗಿ ಹೋಗಿದ್ದೆ. ಇಷ್ಟಕ್ಕೂ ಅವೆಲ್ಲಾ ಮಾತುಗಳಲ್ಲೇ ನಡೆದ ಜಗಳಗಳು.

ತೆಲುಗಿನ ಪ್ರಖ್ಯಾತ ಜನಪದ ಕವಿ ವೇಮನ ಒಂದು ಮಾತು ಹೇಳಿದ್ದಾನೆ. ಹೆಣ್ಣು ಎಷ್ಟೇ ಒಳ್ಳೆಯವಳಾದರೂ ಅವಳಲ್ಲಿ ಬೇವಿನ ಕಾಯಿಯಷ್ಟು ಕಹಿ (ಹುಚ್ಚು) ಇದ್ದೇ ಇರುತ್ತದೆಂದು. ಹೆಂಗಸರಲ್ಲಿ ಹುಚ್ಚೇ ಇರುತ್ತದೋ ಕಹಿಯೇ ಇರುತ್ತದೋ ಒಟ್ಟಿನಲ್ಲಿ ಅವರ ಮನದ ಓಟವನ್ನು ಅರಿಯುವುದು ಕಷ್ಟದ ಕೆಲಸವೇ ಸರಿ.

1986ರ ಸೆಪ್ಟೆಂಬರ್ 16ರಂದು ಬೆಳಿಗ್ಗೆ ತರಬೇತಿ ಕೇಂದ್ರದ ಬಸ್ಸಿನಲ್ಲಿ ಎಲ್ಲಾ ಫ್ಯಾಮಿಲಿಗಳು ಹೈದರಾಬಾದ್‌ನಿಂದ ಒಂಗೋಲ್ ಕಡೆಗೆ ಪ್ರಯಾಣ ಬೆಳೆಸಿದೆವು. ಬಸ್ಸಿನೊಳಕ್ಕೆ ಏರಿಬಂದ ಕಾಂತಿ

"ಏನ್ ಡ್ಯಾಡಿ ನಿಮ್ಮ ಬಸ್ಸು ಇಷ್ಟೊಂದು ಚೆನ್ನಾಗಿದೆ ?" ಎಂದು ತನ್ನ ಬೆರಗನ್ನು ವ್ಯಕ್ತ ಪಡಿಸಿದ. ದಾರಿಯ ಮಧ್ಯೆ ನಿಸರ್ಗದ ಭೂಸ್ಮಾರಕಗಳನ್ನು ನೋಡಿಕೊಂಡು ಮಧ್ಯಾಹ್ನದ ಹೊತ್ತಿಗೆ ಮಾಚರ್ಲ ತಲುಪಿ ಊಟ ಮಾಡಲು ಒಂದು ಹೋಟೆಲ್ ಒಳಗೋದೆವು. ಹೋಟೆಲ್ ತುಂಬ ಜನರಿದ್ದರಿಂದ ನಮ್ಮ ಐದು ಫ್ಯಾಮಿಲಿಗಳನ್ನು ಒಂದು ಒಳಕೋಣೆಗೆ ಕರೆದೊಯ್ದರು.

ಎಲ್ಲರೂ ಕುಳಿತುಕೊಂಡ ಮೇಲೆ, ಎಲ್ಲರಿಗೂ ಎಲೆಗಳನ್ನು ಕೊಟ್ಟು ಉಪ್ಪಿನಕಾಯಿ, ಎರಡು ಪಲ್ಯ, ಒಂದು ರೀತಿಯ ಖಾರದ ಪುಡಿಯ (ಆಂಧ್ರ ಸ್ಪೆಶಲ್ ಗನ್ ಪೌಡರ್) ಜೊತೆಗೆ ಅನ್ನದ ಮೇಲೆ ತುಪ್ಪ ಸುರಿಸಿದರು. ಎಲ್ಲರೂ ತಿನ್ನಲು ಶುರುಮಾಡಿದೆವು. ಸೆಕೆಯಿಂದ ಬೆವರು ಒಂದೇ ಸಮನೆ ಸುರಿಯುತ್ತಿದೆ. ಎದುರಿಗೆ ಕುಳಿತಿರುವ ಸ್ಥಳೀಯ ಜನ ಕೆಂಪಾದ ಗನ್ ಪೌಡರ್‌ನಲ್ಲಿ ಅನ್ನ ಕಲಿಸಿ ಸರಾಗವಾಗಿ ಮುದ್ದೆ ಮುದ್ದೆಯಾಗಿ ಇಳಿಸುತ್ತಿದ್ದಾರೆ. ಅವರನ್ನು ಹಂಗಿಸುವಂತೆ ಮುಸಿ ಮುಸಿ ನಕ್ಕ ಗಂಗೂಲಿ ಸ್ವಲ್ಪ ಗನ್ ಪೌಡರ್‌ನ್ನು ಅನ್ನದ ಜೊತೆಗೆ ಕಲಿಸಿ ಬಾಯಿಗಿಟ್ಟಿದ್ದೆ ತಡ. ಬಾಯಿ ಬಾಯಿ ಬಡಿದುಕೊಂಡು ಹೊರಕ್ಕೆ ಓಡಿ ಬಿಟ್ಟ. ಎದುರಿಗಿದ್ದ ಹಳ್ಳಿಯವರು ತೊಡೆ ತಟ್ಟಿ ಇನ್ನಷ್ಟು ಗನ್ ಪೌಡರ್ ಸುರಿದುಕೊಂಡರು.ಪಕ್ಕದಲ್ಲಿದ್ದ ಉಮಾರಾವ್

"ವೀಡಮ್ಮ ಚಾಪುಲೋಡು ಸಚ್ಚೂಡರ ಬಾಬೋ" ಎಂದ. ಹೆಂಗಸರು ಜೋರಾಗಿ ನಗುತ್ತಿದ್ದರು.

ಈ ಜಂಪಾಣಿ ಉಮಾ ಮಹೇಶ್ವರರಾವ್ (ಜೆ.ಯು.ರಾವ್) ನಮ್ಮ ಗುಂಪಿನಲ್ಲಿ ಒಂದು ರೀತಿಯಲ್ಲಿ ನಗೆ ಪಾಟಲಾಗಿ ಬಿಟ್ಟಿದ್ದ. ಸ್ವಲ್ಪ ಕಾಲ ಮಿಲಿಟರಿಯಲ್ಲಿದ್ದು ಅಲ್ಲಿಂದ ಬಂದ ಮೇಲೆ ಸ್ನಾತಕೋತ್ತರ ಪದವಿ ಪಡೆದು ಸೀನಿಯರ್ ಟೆಕ್ನಿಕಲ್ ಅಸಿಸ್ಟೆಂಟ್ ಆಗಿ ಸೇರಿಕೊಂಡೆ ಎಂದು ಹೇಳುತ್ತಿದ್ದ. ಒಮ್ಮೆ ಆಫೀಷ್ ಮುಖಂ ಫೀಲ್ಡ್‌ನಲ್ಲಿ ತಿಂಡಿ ತಿನ್ನುತ್ತಿದ್ದಾಗ "ಮಾ ಪೆಳ್ಳಾಂನಿಂಕ ಲೆಟರ್ ರಾಲೇದು, ರಾಲೇದು" ಎಂದು ಚಡಪಡಿಸುತ್ತಿದ್ದ. ವಿಷಯ ಏನೆಂದು ಮೃದುವಾಗಿ ಕೇಳಿದೆ.

"ನಮ್ಮ ಪೇರೆಂಟ್ಸ್ ಅಮೇರಿಕಾದಿಂದ ಬರ್ತಾರೆ ಅಂತ ತಿಳಿಸಿದ್ದರು. ಬಂದರೋ ಇಲ್ಲವೋ ಗೊತ್ತಾಗಲಿಲ್ಲ" ಎಂದ.

"ಹೌದು ಅಮೇರಿಕಾದಲ್ಲಿ ಏನು ಮಾಡ್ತಾ ಇದ್ದಾರೆ ?" ಕೇಳಿದೆ.

"ಹೊಗೆಸೊಪ್ಪು ವ್ಯಾಪಾರ" ಎಂದ. ಮತ್ತೆ ನೀನ್ಯಾಕಯ್ಯ ಈ ತಿಂಗಳಿಗೊಮ್ಮೆ ಬರುವ ಸಂಬಳದ ಕೆಲಸದಲ್ಲಿದ್ದೀಯ ?" ಎಂದೆ ಸುಮ್ಮನೆ ಇದ್ದ. ಮತ್ತೆ

"ಹೌದು ಅಮೇರಿಕಾದಲ್ಲಿ ಎಲ್ಲಿದ್ದಾರೆ ?" ಕೇಳಿದೆ. ಸ್ವಲ್ಪ ಹೊತ್ತು ಯೋಚಿಸಿದ.

"ಅದೇನಯ್ಯ ಇಂಡಿಯಾ ಅಂದರೆ ದೆಹಲಿ, ಬಾಂಬೆ, ಬೆಂಗಳೂರು ಹಾಗೆ ಎಲ್ಲಿದ್ದಾರೆ..?" ಬೇತಾಳದಂತೆ ಮತ್ತೆ ಕೇಳಿದೆ. ಜಂಪಾಣಿ ತಕ್ಷಣ

"ಲಂಡನ್‌ನಲ್ಲಿ" ಅನ್ನಬೇಕೆ..? ನನಗೆ ತಲೆ ಗಿರ್ರನೆ ತಿರುಗಿ ಸುತ್ತಲೂ ನೋಡಿದೆ. ಅನಂತರ ಸುಮಾರು ದಿನಗಳ ಸಹದ್ಯೋಗಿಗಳೆಲ್ಲಾ ಜಂಪಾಣಿಯನ್ನು ಅಮೇರಿಕಾ ಲಂಡನ್ ಅಮೇರಿಕಾ ಲಂಡನ್ ಎಂದು ಗೇಲಿ ಮಾಡುತ್ತಿದ್ದರು.

ಗಂಗೂಲಿ ಮತ್ತೆ ಹೋಟೆಲ್ ಒಳಕ್ಕೆ ಬರಲೇ ಇಲ್ಲ ನಾವೆಲ್ಲ ಊಟಮಾಡಿ ಜೋರಾಗಿ ಉಸಿರು ತೆಗೆದು ಕೊಳ್ಳುತ್ತಾ ಹೊರಕ್ಕೆ ಬಂದೆವು. ಅಲ್ಲಿಂದ ಹೊರಟ ಬಸ್ಸು ರಾತ್ರಿ ಒಂಬತ್ತು ಗಂಟೆಗೆ ಒಂಗೋಲ್ ಸೇರಿತ್ತು.

ಮರು ದಿನ ಮಧ್ಯಾಹ್ನ ಫೀಲ್ಡಂ ಕೆಲಸ ಮುಗಿಸಿಕೊಂಡು ಸಾಯಂಕಾಲ ಒಂಗೋಲ್ ಸಮುದ್ರ ತೀರಕ್ಕೆ ವಿಹಾರ ಹೊರಟೆವು. ಸೂರ್ಯ ತನ್ನ ಬಿಸಿಲು ತಾಪವನ್ನು ಕಳೆದುಕೊಳ್ಳುತ್ತಿದ್ದಂತೆ ಬಸ್ಸು ಒಂಗೋಲ್ ನಗರವನ್ನು ಬಿಟ್ಟು ಸಮತಟ್ಟಾದ ಹೊಲಗದ್ದೆಗಳ

ಮಧ್ಯೆ ಒಂಟಿಯಾಗಿ ಹೋಗುತ್ತಿದೆ. ನಗರದ ಗದ್ದಲದಿಂದ ಮುಕ್ತಿ ಪಡೆದಂತೆ ಎಲ್ಲರೂ ಒಂದು ರೀತಿಯಲ್ಲಿ ತಮ್ಮ ಸಂತೋಷವನ್ನು ವ್ಯಕ್ತ ಪಡಿಸುತ್ತ ಸಮುದ್ರದ ಬಗ್ಗೆಯೇ ಮಾತನಾಡಿಕೊಳ್ಳುತ್ತಿದ್ದಾರೆ. ಸಮತಟ್ಟಾದ ನೆಲದ ಹಿಂದೆ ಅಡಗಿಕೊಂಡಿರುವ ಸಮುದ್ರ ತನ್ನ ಇರುವಿಕೆಯನ್ನು ಇನ್ನೂ ಗುಪ್ತವಾಗಿಯೇ ಹಿಡಿದಿಟ್ಟು ಕೊಂಡಿದೆ. ಇದ್ದಕ್ಕಿದ್ದ ಹಾಗೆ ಗಾಳಿಯಲ್ಲಿ ಶುದ್ಧ ತಮಟೆ ಸದ್ದು ಅಲೆ ಅಲೆಯಾಗಿ ಕೇಳಿ ಬರುತ್ತಿದೆ, ಜೊತೆಗೆ ಗುಂಪು ಗುಂಪು ಗುಡಿಸಲುಗಳು ಕೂಡ ಕಾಣಿಸಿಕೊಂಡವು. ಬಸ್ಸು ಗುಡಿಸಲುಗಳ ಮಧ್ಯೆ ತೂರಿ ಸ್ವಲ್ಪ ದೂರದಲ್ಲಿ ನಿಂತು ಕೊಂಡಿತು. ಒಂದು ಸಣ್ಣ ತೇರು, ತೇರಿನ ಸುತ್ತ ಒಂದಿಷ್ಟು ಜನ, ಹೆಚ್ಚಾಗಿ ಮಕ್ಕಳು ಮತ್ತು ತಮಟೆ ಹೊಡೆಯುವವರು ಕುಣಿಯುತ್ತಿದ್ದಾರೆ. ಬಸ್ಸು ನಿಂತ ತಕ್ಷಣ ಸುಮಾರು ಮಕ್ಕಳು ಬಸ್ಸಿನ ಕಡೆಗೆ ಓಡಿ ಬಂದರೆ, ಬಸ್ಸಿಳಿದ ಅರ್ಧ ಜನ ತೇರಿನ ಕಡೆಗೆ ಓಡಿ ಹೋದರು. ನಾವು ಫ್ಯಾಮಿಲಿ ಜನ ಮಧ್ಯದಲ್ಲಿ ನಿಂತು ಎರಡೂ ಕಡೆ ನೋಡ ತೊಡಗಿದೆವು.

ಯಾವಾಗಲೂ ಕಂಕುಳಲ್ಲೇ ಇರುತ್ತಿದ್ದ ಕ್ರಾಂತಿ ಕೆಳಕ್ಕೆ ಬಿಟ್ಟಿದ್ದೇ ತಡ, ಮರಳಿನಲ್ಲಿ ಗುಡು ಗುಡನೆ ಸಮುದ್ರದ ದಂಡೆಯಲ್ಲಿ ಓಡ ತೊಡಗಿದ. ಸ್ವಲ್ಪ ದೂರ ಓಡಿದ ಮೇಲೆ ದಡ ಇದ್ದಕ್ಕಿದ್ದ ಹಾಗೆ ಕಡಿದಾಗಿದ್ದರಿಂದ ಮುಂದಕ್ಕೆ ಹೆಜ್ಜೆ ತಪ್ಪಿ ಮುಗ್ಗರಿಸಿ ಬಿದ್ದ. ಓಡಿ ಹೋಗಿ ಎತ್ತಿ ನಿಲ್ಲಿಸಿದೆ. ಬಾಯಿ ತುಂಬಾ ಮರಳು ತುಂಬಿತ್ತು. ಎಲ್ಲವನ್ನೂ ಉಗುಳಿಸಿ ನಿಲ್ಲಿಸಿದೆ. ಮತ್ತೆ ಓಡಿ ಅದೇ ರೀತಿಯಾಗಿ ಬಿದ್ದ. ಈಗಲೂ ಬಾಯಿ ತುಂಬಾ ಮರಳು ತುಂಬಿತ್ತು.

ಕೆಲವರು ಬಟ್ಟೆಗಳ ಸಮೇತ ಈಜ ತೊಡಗಿದರೆ ಮತ್ತೆ ಕೆಲವರು ನಿಕ್ಕರ್‌ನಲ್ಲಿ ಈಜ ತೊಡಗಿದರು. ಈಜು ಬರದವರು ಅಲೆಗಳ ಜೊತೆ ಕಣ್ಣಾ ಮುಚ್ಚಾಲೆ ಆಡುತ್ತಿದ್ದರು. ಅಲೆಗಳು ಕುಪ್ಪಳಿಸಿ ಬಂದು ದಡಕ್ಕೆ ಅಪ್ಪಳಿಸಿದಾಗ ಕ್ರಾಂತಿ ನನ್ನ ಕೈಗಳ ಸಹಾಯದಿಂದ ಜಿಗಿದು ನೀರಿನಲ್ಲಿ ಬೀಳುತ್ತಿದ್ದ. ಅವನ ಬಟ್ಟೆಗಳೆಲ್ಲ ಒದ್ದೆಯಾಗಿದ್ದು ದಡಕ್ಕೆ ಕರೆದರೆ ಬರದೆ ಹಟ ಮಾಡುತ್ತ ಅಲ್ಲೇ ನಿಲ್ಲುತ್ತಿದ್ದ. ಸೂರ್ಯನ ಕೊನೆ ಎಚ್ಚರಿಕೆಯಂತೆ ಮೋಡಗಳ ಮರೆಯಿಂದ ಕಿರಣಗಳು ಅರೆ ಕೊರೆಯಾಗಿ ಹೊರಕ್ಕೆ ಇಣುಕಿ ನೋಡುತ್ತಿದ್ದವು.

ಆಗಲೇ ಪೂರ್ವದಲ್ಲಿ ಹುಟ್ಟಿ ಬಂದಿದ್ದ ಹುಣ್ಣಿಮೆ ಚಂದಿರನನ್ನು ನೋಡಿದ ತರಬೇತುದಾರರು ಸಮುದ್ರದ ಅಲೆಗಳ ಏರಿಳಿತಗಳು ಜಾಸ್ತಿಯಾಗುತ್ತವೆಂದು ಎಲ್ಲರನ್ನೂ ಹೊರಕ್ಕೆ ಕರೆದರು. ನಾನು, ಕ್ರಾಂತಿಯನ್ನು ಹೊತ್ತುಕೊಂಡು ಹೋಗಿ ಬಸ್ಸಿನಲ್ಲಿ ಬಟ್ಟೆ ಬದಲಾಯಿಸಿದೆ. ಬಸ್ಸು ವಾಪಸ್ ತಿರುಗಿಕೊಂಡಿತು.

* * *

## ನಾಗಾರ್ಜುನ ಸಾಗರದ ನಡುಗಡ್ಡೆಯಲ್ಲಿ

ಮಾರನೆ ದಿನ ಬೆಳಗ್ಗೆ ಉಪಹಾರ ಮುಗಿಸಿ ಫೀಲ್ಡ್ ಕೆಲಸದ ನಡುವೆ ಯಲಚೂರಿನಲ್ಲಿ ಊಟ ಮಾಡಿ ಸಾಯಂಕಾಲ ನಾಲ್ಕು ಗಂಟೆಗೆಲ್ಲಾ ನಾಗಾರ್ಜುನ ಸಾಗರ ತಲುಪಿದೆವು. ಅಣೆಕಟ್ಟೆಗೆ ಹತ್ತಿರವಿದ್ದ ಹೋಟೆಲ್‌ಗಳಲ್ಲಿ, ವಿಶ್ರಾಂತಿ ಗೃಹಗಳಲ್ಲಿ ಎಲ್ಲಿ ವಿಚಾರಿಸಿದರೂ ಕೊಠಡಿಗಳು ಖಾಲಿ ಇಲ್ಲ, ನಮಗೋ ಕನಿಷ್ಠ ಇಪ್ಪತ್ತು ಕೊಠಡಿಗಳಾದರೂ ಬೇಕು. ಕೊನೆಗೆ ಸಿಕ್ಕಿದ ನಾಲ್ಕು ಕೊಠಡಿಗಳಲ್ಲಿ ಒಂದನ್ನು ಹೆಂಗಸರು ಮತ್ತು ಮಕ್ಕಳಿಗೆ ಬಿಟ್ಟು, ಮಿಕ್ಕ ಮೂರು ಕೊಠಡಿಗಳಲ್ಲಿ, ಸಾಲದ್ದಕ್ಕೆ ವಿಶ್ರಾಂತಿ ಗೃಹದ ಹಜಾರದಲ್ಲಿ ರಾತ್ರಿಯಲ್ಲಾ ಕಾಲ ಕಳೆದೆವು.

ಬೆಳಿಗ್ಗೆ ಉಪಹಾರ ಮುಗಿಸಿ ಕೃಷ್ಣಾ ನದಿಯ ಮಧ್ಯೆ ಇರುವ ನಾಗಾರ್ಜುನ ಸಾಗರದ ನಡುಗಡ್ಡೆಗೆ ನಾವೆಯಲ್ಲಿ ಹೊರಟೆವು. ಸುಮಾರು ದೊಡ್ಡದಾದ ನಾವೆಯಲ್ಲಿ ನೂರು ಜನರಿರಬಹುದು. ನಾವೆ ಲಂಗುರನ್ನು ಬಿಚ್ಚಿಕೊಂಡು ದ್ವೀಪದ ಕಡೆಗೆ ಸಾಗಿತು. ಎರಡೂ ಕಡೆಯೂ ಗುಡ್ಡೆಗಳ ಸಮೂಹದ ಮಧ್ಯೆ ವಿಶಾಲವಾಗಿ ಹರಡಿಕೊಂಡಿರುವ ಕೃಷ್ಣಾನದಿ ಅಣೆಕಟ್ಟೆಯಿಂದ ಇನ್ನಷ್ಟು ವಿಶಾಲವಾಗಿ ಸಮುದ್ರದಂತೆ ಕಾಣಿಸುತ್ತಿದೆ. ನಾವೆ ಜುಯ್ಯನೆ ಸದ್ದು ಮಾಡುತ್ತ ನೀರಿನ ಮೇಲೆ ಸಾಗುತ್ತಿದ್ದು ನೀರಿನ ಮಟ್ಟದಿಂದ ಅಷ್ಟೇನು ಎತ್ತರವಲ್ಲದ ದ್ವೀಪ. ಗಿಡ ಮರಗಳಿಂದ ವಿಶಾಲವಾದ ಹೂವು ತೋಟಗಳಿಂದ ದೂರದಿಂದಲೇ ಸೊಗಸಾಗಿ ಕಾಣಿಸುತ್ತಿದೆ. ದ್ವೀಪಕ್ಕೆ ಹತ್ತಿರವಾಗಿದ್ದ ನಾವೆಯನ್ನು ನಿಲ್ಲಿಸಿದ ನಾವಿಕ,

"ಸರಿಯಾಗಿ ಎರಡು ಗಂಟೆಗೆ ಎಲ್ಲರೂ ಇದೆ ಸ್ಥಳದಲ್ಲಿರಬೇಕು... ಯಾರು ಬರಲಿ, ಬರದೆ ಹೋಗಲಿ ನಾವು ಮಾತ್ರ ಸರಿಯಾಗಿ ಎರಡು ಗಂಟೆಗೆ ಹೊರಟು ಬಿಡುತ್ತೇವೆ" ಎಂದು ಎಚ್ಚರಿಕೆ ನೀಡಿದ.

ಸುತ್ತಲೂ ನೀರು, ಮಧ್ಯೆ ವಿಶಾಲವಾದ ಮತ್ತು ಪ್ರಶಾಂತವಾದ ದ್ವೀಪ, ಅಲ್ಲಲ್ಲಿ ಬೆಳೆಸಿರುವ ಹೂವಿನ ಗಿಡ ಮರಗಳು ಮತ್ತು ಹಚ್ಚ ಹಸುರಿನ ಹುಲ್ಲಿಂದ ದ್ವೀಪ ಸೊಗಸಾಗಿ ಕಾಣುತ್ತಿದೆ. ದ್ವೀಪದ ನಡುವೆ ಸುಮಾರು ದೂರ ನಡೆದ ಮೇಲೆ ಶಿಥಿಲವಾದ ಇಟ್ಟಿಗೆ ಗೋಡೆಗಳ ನಡುವೆ ಅಲ್ಲಲ್ಲಿ ಬುದ್ಧ ಮತ್ತು ಅವನ ಅನುಯಾಯಿಗಳ ಅಂಗಾಂಗಗಳು ಮುರಿದುಕೊಂಡು ಬಿದ್ದಿವೆ.

ಬುದ್ಧನ ಅನುಯಾಯಿ ಬೌದ್ಧ ಧರ್ಮದ ಪ್ರಚಾರಕ ಮಹಾ ಬುದ್ಧಿ ಜೀವಿ ನಾಗಾರ್ಜುನ ಬೌದ್ಧ ಧರ್ಮವನ್ನು ಸ್ವೀಕರಿಸಿದ ಮೇಲೆ ಕೃಷ್ಣಾ ನದಿಯು ದಂಡೆಗೆ ಬಂದು ಒಂದು ಮಹಾ ವಿಶ್ವ ವಿದ್ಯಾನಿಲಯವನ್ನು ಸ್ಥಾಪಿಸಿದ್ದ. ಆ ಸ್ಥಳವೇ ಈ ನಾಗಾರ್ಜುನ ಕೊಂಡ.

ಈ ವಿಶ್ವವಿದ್ಯಾಲಯ ಬರಿ ಭಾರತದಲ್ಲೇ ಅಲ್ಲ, ಇಡೀ ಏಷ್ಯಾದಲ್ಲಿಯೇ ಹೆಸರು ವಾಸಿ ಪಡೆದಿತ್ತು. ಸುಮತ್ರ, ಮಲಯ, ಶ್ರೀಲಂಕಾ, ಚೈನಾ, ಕೊರಿಯಾ, ಪಾಕಿಸ್ತಾನ, ಬಲೂಚಿಸ್ತಾನ ಹೀಗೆ ನಾನಾ ದೇಶಗಳಿಂದ ವಿದ್ಯಾರ್ಥಿಗಳು ಬಂದು ವ್ಯಾಸಂಗ ಪಡೆಯುತ್ತಿದ್ದರು.

ಅಂತಹ ವಿಶ್ವವಿದ್ಯಾಲಯ ಅನಂತರದ ದಿನಗಳಲ್ಲಿ ಸನಾತನ ವೈದಿಕಶಾಹಿಗಳ ಆಕ್ರಮಣಗಳಿಂದ ಶಿಥಿಲಗೊಂಡಿತು. ಕೃಷ್ಣಾನದಿಗೆ ಅಣೆಕಟ್ಟು ಕಟ್ಟುವಾಗ ಅಳಿದುಳಿದ ಶಿಲೆಗಳು ಮತ್ತು ಅದರ ಅವಶೇಷಗಳನ್ನು ಸಂಗ್ರಹಿಸಿ ಅಲ್ಲೇ ದ್ವೀಪದ ಮಧ್ಯದಲ್ಲಿ ಒಂದು ಸಂಗ್ರಹಾಲಯವನ್ನು ತೆರೆದಿದ್ದರು.

ಒಂದು ಕಡೆಯಿಂದ ಸಂಗ್ರಹಾಲಯದಲ್ಲಿದ್ದ ವಸ್ತುಗಳನ್ನೆಲ್ಲಾ ನೋಡುತ್ತಾ ಹೋಗುತ್ತಿದ್ದೇವೆ. ಅದೊಂದು ಸೊಗಸಾದ ಸಂಗ್ರಹಾಲಯವೆಂದೇ ಹೇಳಬೇಕು. ಸಮಯ ಆಗಲೇ ಮುಗಿಯುತ್ತ ಬಂದಿದ್ದು ಸರಿಯಾಗಿ ನೋಡದೆ ಹೊರಕ್ಕೆ ಬರಬೇಕಾಯಿತು.

ಅಲ್ಲಿಂದ ಅಣೆಕಟ್ಟೆಯನ್ನು ನೋಡಿಕೊಂಡು ಅಣೆಕಟ್ಟೆಯ ಕೆಳಗಿದ್ದ ಜಲ ವಿದ್ಯುತ್ ಶ್ಶಕ್ತಿ ಸ್ಥಾವರಗಳನ್ನು ನೋಡಲು ಹೋದೆವು. ಮೇಲಿಂದ ಸಣ್ಣ ಸಣ್ಣದಾಗಿ ಕಾಣುತ್ತಿದ್ದ ಸ್ಥಾವರಗಳು ಹತ್ತಿರ ಹತ್ತಿರ ಹೋದಂತೆ ಭಯವನ್ನು ಹುಟ್ಟಿಸುವಷ್ಟು ದೈತ್ಯಾಕಾರವಾಗಿದ್ದವು.

ಸ್ಥಾವರಕ್ಕೆ ಸ್ವಲ್ಪ ದೂರದಲ್ಲಿ ಎತ್ತರವಾದ ಸ್ಥಳದಲ್ಲಿ ಒಂದು ಸೊಗಸಾದ ವಿಶ್ರಾಮ ಗೃಹ ಕಟ್ಟಿದ್ದು ನೋಡಲು ಬಹಳ ಅಂದವಾಗಿತ್ತು. ಹೊರಗೆ ಮತ್ತು ಒಳಗೆ ಬಣ್ಣ ಬಣ್ಣದ ಹೂಗಿಡ, ಬಳ್ಳಿಗಳನ್ನು ಬೆಳೆಸಿ ಮಧ್ಯೆ ಮಧ್ಯೆ ಹಲವು ರೀತಿಯ ಹಕ್ಕಿಗಳಿರುವ ಪಂಜರಗಳನ್ನು ನೇತುಹಾಕಲಾಗಿತ್ತು. ಉದ್ದುದ್ದ ಮೀಸೆಯ ಬಿಳಿ ಮೊಲಗಳು ಇನ್ನೊಂದು ದೊಡ್ಡ ಪಂಜರದಲ್ಲಿ ಎಳೆ ಹುಲ್ಲಿನ ಮೇಲೆ ಕುಳಿತುಕೊಂಡಿವೆ. ಕ್ರಾಂತಿ ಹುಲ್ಲಿನ ತೃಣಗಳನ್ನು ತೆಗೆದುಕೊಂಡು ಅವುಗಳ ಮುಖಕ್ಕೆಟ್ಟಾಗ ತುಟಿಗಳಿಂದ ಅವು ಸಪ್ಪಳಿಸುತ್ತಿದ್ದು, ಒಂದೇ ಖುಷಿಯಿಂದ ನಲಿದಾಡುತ್ತಿದ್ದಾನೆ.

ಸಾಮಾನ್ಯವಾಗಿ ದೇಶದ ಆಯ ಕಟ್ಟು ಸ್ಥಳಗಳಿಗೆ ಹೊರ ದೇಶದವರನ್ನು ಅಪ್ಪಣೆ ಇಲ್ಲದೆ ಬಿಡುವುದಿಲ್ಲ. ನಮ್ಮ ಜೊತೆಯಲ್ಲಿ ತರಬೇತಿಗೆಂದು ಬಂದಿದ್ದ ಚೈನಾದ "ಲೀ ಮತ್ತು ಫಿಲಿಫೈನ್ಸ್‌ನ ಜಾನ್" ಇದ್ದರು. ಇಬ್ಬರನ್ನೂ ಸ್ಥಾವರದ ಒಳಕ್ಕೆ ಹೋಗದಂತೆ ತಡೆಹಿಡಿಯಲಾಯಿತು. ಮಧ್ಯೆ ಪ್ರವೇಶಿಸಿದ ತರಬೇತಿದಾರರು ಅವರು ತರಬೇತಿ ಪಡೆಯಲು ಬಂದಿದ್ದರಿಂದ ನೋಡಲು ಬಿಡಬೇಕೆಂದು ಕೇಳಿಕೊಂಡರು. ಕ್ಯಾಮರಾ ಮತ್ತು ಮಿಕ್ಕ ವಸ್ತುಗಳನ್ನು ಹೊರಗಡೆಯೇ ಇಡುವಂತೆ ತಿಳಿಸಿ ಅವರನ್ನು ನೋಡಲು ಒಳಕ್ಕೆ ಬಿಡಲಾಯಿತು.

ಚೈನಾದ "ಲೀ" ಬಹಳ ಶಿಸ್ತು ಮತ್ತು ಸಂಯಮದಿಂದ ನಡೆದುಕೊಳ್ಳುತ್ತಿದ್ದರೆ,

ಹಲ್ಲುಗಳಿಲ್ಲದ ಫಿಲಿಫೈನ್ಸ್‌ನ ಡೆಂಚರ್ "ಜಾನ್" ಫುಟ್ ಪಾತ್‌ಗಳಲ್ಲಿ ಸಿಗುವ ಬೋಂಡಾ, ವಡೆಗಳನ್ನು ತಿನ್ನುತ್ತಾ ಬೀದಿ ಬೀದಿ ಅಲೆಯುತ್ತಿದ್ದ.

ಸ್ಥಾವರಗಳನ್ನು ನೋಡಿ ಹೊರ ಬಂದ ಎಲ್ಲರೂ ಬೆವರನ್ನು ಒರೆಸಿಕೊಳ್ಳುತ್ತಿದ್ದರು. ಹತ್ತಿರದಲ್ಲೇ ನಿಂತಿದ್ದ ಮುಖ್ಯೋಪಾಧ್ಯಾಯ **what Mr. Lee the redness of your face must be questioning how this Indians advanced so much.. ? is it not..?** ಎಂದು ನಕ್ಕ

"ಲೀ" ಮುಖ ನಿಜವಾಗಿಯೂ ಸ್ವಲ್ಪ ಚಿಂತೆ ತುಂಬಿಕೊಂಡಂತೆ ಕಾಣುತ್ತಿದ್ದು ಆ ಪ್ರಶ್ನೆಗೆ ಹಾರಿಕೆಯ ನಗುವೇ ಉತ್ತರವಾಗಿ ಹೊರಬಿತ್ತು.

ಅಲ್ಲಿಂದ ಬಸ್ಸೇರಿದ ನಾವು ಹೈದರಾಬಾದ್ ಕಡೆಗೆ ಪ್ರಯಾಣ ಮಾಡಿದೆವು. ಆಕಾಶದಲ್ಲಿ ಸೂರ್ಯನು ಮುಳುಗಿ, ಚಂದ್ರನು ತನ್ನ ರಾಜ್ಯಭಾರವನ್ನು ಆಳ ತೊಡಗಿದ್ದ. ತರಬೇತಿಯ ಅಂತಿಮ ದಿನಗಳು ಕೊನೆಗೊಳ್ಳುತ್ತಿದ್ದೆವು. ಬಸ್ಸು ಹೈದರಾಬಾದ್ ಹೊಂವಲಯದಲ್ಲಿ ಸಾಗುತ್ತಿತ್ತು. ಹಿಂದಿದ್ದ ಕೆಲವರು ಹಾಡುಗಳನ್ನು ಹಾಡುತ್ತಿದ್ದರೆ ಇನ್ನೂ ಕೆಲವರು ನರ್ತಿಸುತ್ತಿದ್ದರು. ನಟನೆಯ ಬಿಸಿ ಏರುತ್ತ ಹೋಗುತ್ತಿದ್ದು ಎಲ್ಲರೂ ನಿಂತುಕೊಂಡು ಚಪ್ಪಾಳೆ ತಟ್ಟುತ್ತಿದ್ದಾರೆ. ನಲವತ್ತರ ಗಡಿಯಲ್ಲಿದ್ದ

"ಸಾರೂಮೀರೂ" ಎಂಬ ಬಿರುದು ಪಡೆದಿರುವ ನರಸಿಂಹರಾವ್ ಅವರ ನೃತ್ಯ ಅದೊಂದು ವಿಚಿತ್ರ ರೀತಿಯ ನಾಟ್ಯವೆಂದೇ ಹೇಳಬೇಕು.

"ಸಾರೂ ಮೀರೂ" ಗೆ ಕುಡಿತದಿಂದ ನರಗಳ ಬಲಹೀನತೆ ಹೊಂದಿದ್ದು ನಾಟ್ಯ ತನ್ನದೇ ಆದ ಒಂದು ಪ್ರತ್ಯೇಕತೆಯನ್ನು ತುಂಬಿಕೊಂಡಿತ್ತು.

ಅದೇ ಸಾರೂ ಮೀರೂ ಒಮ್ಮೆ ಹಿಮಾಲಯದಲ್ಲಿ ಸ್ವಲ್ಪ ಕಡಿದಾದ ತಪ್ಪಲನ್ನು ಹತ್ತಿ ಇಳಿಯುವಾಗ ಆ್ಯಪಲ್ ಗಿಡವಂತೆ ಅಲ್ಲಾಡಿ ಬಿಟ್ಟಿದ್ದರು. ಅವರನ್ನು ಕೆಳಕ್ಕೆ ಇಳಿಸಿಕೊಂಡು ಬರಲು ನಾಲ್ಕು ಜನರ ಸಹಾಯ ತೆಗೆದುಕೊಳ್ಳಲಾಗಿತ್ತು.

1986ರ ಅಕ್ಟೋಬರ್ 29ರಂದು ಬೀಳ್ಕೊಡುವ ಸಮಾರಂಭವನ್ನು ಹೋಟೆಲ್ ಮಂಜಿರಾದಲ್ಲಿ ಏರ್ಪಡಿಸಿ ಎಲ್ಲರೂ ಒಬ್ಬರಿಗೊಬ್ಬರು ವಿದಾಯ ಹೇಳಿಕೊಂಡೆವು. ನಾನು ಹೈದರಾಬಾದ್‌ನಿಂದಲೇ ಲಖನೌಗೆ ಒಂದು ತಿಂಗಳು ರಜಾ ಬರೆದು ಕಳುಹಿಸಿ ಕೆಜಿಎಫ್ ಸೇರಿಕೊಂಡೆ.

* * *

## ಭಾಗ ೨

### 8 ವಿಂಧ್ಯಾಚಲದ ಕಡೆಗೆ

ಕೆ.ಜಿ.ಎಫ್‌ನಿಂದ ಬಂದ ಮೇಲೆ ಲಖನೌದಲ್ಲಿ ಒಂದು ತಿಂಗಳು ಕಳೆದು ಮಿರ್ಜಾಪುರ ಜಿಲ್ಲೆಯ ಕಡೆಗೆ ಫೀಲ್ಡ್ ಸಂಶೋಧನೆಗೆಂದು ಹೊರಟೆವು. ನನ್ನ ಜೊತೆಯಲ್ಲಿ ವರಿಷ್ಠ ಭೂಶಾಸ್ತ್ರಜ್ಞ ಎಸ್.ಎ.ಖಾನ್ ಮತ್ತು ಡ್ರೈವರ್ ಅಲಿ ಅಹ್ಮದ್ ಕೂಡ ಇದ್ದರು. ಫೀಲ್ಡ್ ಸಾಮಾನುಗಳನ್ನೆಲ್ಲ ಟ್ರೇಲರ್ ಮತ್ತು ಜೀಪಿನಲ್ಲಿ ತುಂಬಿಕೊಂಡು ಅದೇ ಜಿಲ್ಲೆಗೆ ಬರಲಿರುವ ಮತ್ತೊಬ್ಬ ಭೂಗರ್ಭ ಶಾಸ್ತ್ರಜ್ಞ ಎಂ.ಎ. ಖಾನ್ ಮನೆಯ ಹತ್ತಿರ ಹೋದೆವು.

ಎಂ.ಎ. ಖಾನ್ ತಯಾರಾಗಿಯೆ ನಿಂತಿದ್ದು ಅಲ್ಲಿಂದ ಪ್ರಯಾಣ ಶುರು ಮಾಡಿದೆವು. ಉತ್ತರ ಭಾರತದ ಎಲ್ಲಾ ಕಡೆಯೂ ಚಳಿಗಾಲ ಅತಿಯಾಗಿಯೇ ಇರುತ್ತದೆ. ಚಳಿಯನ್ನು ಎದುರಿಸಲು ಒಂದು ಹಾಸಿಗೆ, ರಜಾಯಿ, ಒಂದೆರಡು ಸ್ವೆಟರುಗಳು ಮತ್ತು ಮಫ್ಲರ್ ಕೊಂಡುಕೊಂಡಿದ್ದೆ. ಲಖನೌ ನಗರದ ಬೀದಿ ಬೀದಿಗಳಲ್ಲೂ ಉಣ್ಣೆ ಬಟ್ಟೆಗಳ ಮಹಾಪೂರವೇ ಹರಿದಾಡಿದಂತೆ ಜನ ಬೆಚ್ಚನೆ ಉಡುಪುಗಳನ್ನು ಧರಿಸಿ ಓಡಾಡುತ್ತಿದ್ದಾರೆ.

ದಕ್ಷಿಣ ಭಾರತಕ್ಕಿಂತ ಉತ್ತರ ಭಾರತದವರು ಬಟ್ಟೆಗಳನ್ನು ಚೆನ್ನಾಗಿ ಧರಿಸುವುದು ನೋಡಬಹುದು. ಅವರಿಗೆ ಋತುಗಳಿಗೆ ತಕ್ಕ ಹಾಗೆ ಬೇರೆ ಬೇರೆ ರೀತಿಯ ಬಟ್ಟೆಗಳ ಅಗತ್ಯವು ಇದೆ. ನಾನು ಲಖನೌಗೆ ಹೋದ ಮೇಲೆಯೆ ಷರ್ಟ್ ಟಕ್ ಮಾಡುವುದನ್ನು ಕಲಿತುಕೊಂಡಿದ್ದು. ಚಳಿಗಾಲದಲ್ಲಿ ಕಛೇರಿಗೆ ಬರುತ್ತಿದ್ದ ಒಬ್ಬ ನಾಲ್ಕನೇ ದರ್ಜೆಯ ನೌಕರ ಕೂಡ ಬೂಟು ಮತ್ತು ಹಳೆ ಕೋಟನ್ನು ಧರಿಸಿ ಬರುತ್ತಿದ್ದ.

ಜೀಪು, ಲಖನೌ ನಗರದ ಹೊರವಲಯದಲ್ಲಿದ್ದ ಕಂಟೋನ್‌ಮೆಂಟ್ ದಾಟಿ ರಾಯಬರೇಲಿ ರಸ್ತೆಯಲ್ಲಿ ಹೋಗುತ್ತಿದೆ. ಗೋಧಿ ಮತ್ತು ಬತ್ತದ ಬಯಲುಗಳಿಂದ ಗಾಳಿ ತಣ್ಣಗೆ ಬೀಸುತ್ತಿದೆ. ಬಿಳಿ ಬಣ್ಣದ ಉದ್ದ ಗೋಣಿನ ಕನ್ನಡಕ ಮತ್ತು ಗಡ್ಡಧಾರಿ ಖಾನ್ ನನ್ನ ಪಕ್ಕದಲ್ಲಿ ಕುಳಿತಿದ್ದಾರೆ. ಚಳಿಗೆ ಒಂದು ಹಳೆ ಉದ್ದ ತೋಳಿನ ಜಾಕೆಟ್ ತೊಟ್ಟು, ಕಾಲಿಗೆ ಹಂಟರ್ ಶೂ ಹಾಕಿದ್ದಾರೆ. ಬಲಗಡೆ ಡ್ರೈವರ್ ಅಲಿ ಅಹ್ಮದ್ ತನ್ನ ಖಪತ್ತರ ಗಡಿಯಲ್ಲಿದ್ದರೂ ನೀಟಾಗಿ ಶರ್ಟನ್ನು ಟಕ್ ಮಾಡಿಕೊಂಡು ಚೂಪು ಬೂಟುಗಳಲ್ಲಿ ಎಕ್ಸಲೇಟರನ್ನು ಒತ್ತಿ ಹಿಡಿದಿದ್ದಾನೆ. ಜೀಪು ಟ್ರೇಲರ್ ಸಮೇತ 70-80 ಕಿ.ಮೀ.ಗಳ ವೇಗದಲ್ಲಿ ಧಾವಿಸುತ್ತಿದೆ. ಇನ್ನೊಬ್ಬ ಖಾನ್ ಜೀಪಿನಲ್ಲಿ ಹಿಂದೆಯೇ ಬರುತ್ತಿದ್ದಾರೆ.

ಲಖನೌ ಬಿಡುವುದೇ ಹನ್ನೊಂದು ಗಂಟೆಯಾಗಿದ್ದು ನಾವು ಸೇರಬೇಕಾಗಿರುವ

ಸೋನ್ ನದಿಯ ಪ್ರದೇಶ ಇನ್ನೂ ಸುಮಾರು 300 ಕಿ.ಮೀ. ದೂರದಲ್ಲಿದೆ. ಇಲಹಾಬಾದ್ ತಲುಪಿದಾಗ ರಾತ್ರಿ ಎಂಟು ಗಂಟೆ. ರಸ್ತೆಗಳ ತುಂಬಾ ಗಿಜು ಗುಡುವ ಜನ, ವಾಹನಗಳು, ಹೊಗೆ, ಧೂಳು ಉಸಿರು ಕಟ್ಟುವಂತಹ ವಾತಾವರಣ.

ಇಲಹಾಬಾದ್ ತಲುಪುದುದಕ್ಕೆ ಮುಂಚೆ ಖಾನ್,

" ಇದೇ ತ್ರಿವೇಣಿ ಸಂಗಮ" ಎಂದು ದೂರದಿಂದ (ಗಂಗಾ, ಯಮುನಾ ಸರಸ್ವತಿ ಸಂಗಮ) ತೋರಿಸಿದ್ದರು. ಕತ್ತಲಲ್ಲಿ ಸರಿಯಾಗಿ ಕಾಣಿಸಲಿಲ್ಲ. ಆದರೂ ಅದು ವಿಶಾಲವಾಗಿ ಸಮತಟ್ಟಾಗಿ ಸಮುದ್ರದಂತೆ ಕಾಣುವ ಮರಳು, ಮೆಕ್ಕಲು ಮಣ್ಣು ತುಂಬಿದ ಪ್ರದೇಶ ಎನ್ನುವುದು ಗೊತ್ತಾಯಿತು.

ಬಹಳಷ್ಟು ಸಹೋದ್ಯೋಗಿಗಳು, ನೀವು ಖಾನ್ ಜೊತೆಗೆ ಹೋಗುತ್ತಿದ್ದೀರಿ, ಬಹಳ ಒಳ್ಳೆಯವರು, ನೀವು ಸಮಯವನ್ನು ಚೆನ್ನಾಗಿ ಕಳೆಯುತ್ತೀರ, ಹೀಗೆ ಏನೇನೋ ಹೇಳಿ ಹೊಗಳಿದ್ದರು. ನನಗೆ ಮೊದಲ ಫೀಲ್ಡ್ ಸಂಶೋಧನೆಯಾಗಿದ್ದರಿಂದ ಡೈರೆಕ್ಟರ್ ಬಿ.ಕೆ. ಸೇಟ್‌ರವರು,

"ನಿನಗೆ ಯಾವ ರೀತಿಯ ಸಹಾಯ ಬೇಕಾಗಿದ್ದರೂ, ಏನೇ ತೊಂದರೆ ಯಾದರೂ ನಾಚಿಕೆ ಪಡಬೇಡ, ಖಾನ್ ಸಹಾಯ ತೆಗೆದುಕೋ. ಖಾನ್ ನಿನಗೆ ದೊಡ್ಡಣ್ಣನ ಹಾಗೆ" ಎಂದು ಹೇಳಿ ಕಳುಹಿಸಿದ್ದರು. ಒಂದಿಬ್ಬರು ಮಾತ್ರ

"ಯಾವುದಕ್ಕೂ ನಿನ್ನ ಹುಷಾರಿನಲ್ಲಿ ನೀನಿರುವುದು ಒಳ್ಳೆಯದು. ಸಾಲಾ ಮುಸ್ಲಿಂ, ನಂಬಬೇಡ" ಎಂದು ಎಚ್ಚರಿಕೆ ನೀಡಿದರು. ನಾನು ಮಾತ್ರ ಮೇಲಿನ ಯಾವ ಮಾತುಗಳಿಗೂ ತಲೆಕೆಡಿಸಿಕೊಳ್ಳಲಿಲ್ಲ. ನನ್ನ ಪಾಡಿಗೆ ನಾನು ಸರಿಯಾಗಿದ್ದರೆ, ಬೇರೆ ಯಾರು ತಾನೆ ಏನು ಮಾಡಲು ಸಾಧ್ಯ? ಎಂದು ಉದಾಸೀನದಿಂದಿದ್ದೆ. ಬೆಳಿಗ್ಗೆ ಮತ್ತೆ ಇಲಹಾಬಾದ್ ಬಿಟ್ಟು ವಿಂದ್ಯಾಚಲ ಬೆಟ್ಟಗಳ ಮುಖಾಂತರ ರಾಬರ್ಟ್ ಗಂಜ್ ದಾಟಿ, ಸೋನ್ ನದಿಯ ಬಲದಂಡೆಯಲ್ಲಿದ್ದ ಛೋಪಾನ್ ಎಂಬ ಹಳ್ಳಿಯನ್ನು ತಲುಪಿದೆವು. ಸುಮಾರು ಎಂಟು ವರ್ಷಗಳಿಂದ ಅದೇ ಸುತ್ತ ಮುತ್ತಲ ಸ್ಥಳಗಳಲ್ಲಿ ಕೆಲಸ ಮಾಡುತ್ತಿದ್ದ ಖಾನ್‌ಗೆ ಎಲ್ಲಾ ಸ್ಥಳಗಳ ಪರಿಚಯವು ಇದೆ ಎಂದು ಕೇಳಿದ್ದೆ. ನಾವು ಸಾಯಂಕಾಲ ಆ ವಿಶ್ರಾಮ ಗೃಹವನ್ನು ತಲುಪಿದ್ದೆ ಅಲ್ಲೆ ಕಾದಿದ್ದ ಇಬ್ಬರು ಹಳೇ ಕೆಲಸಗಾರರು ಓಡಿ ಬಂದು ಖಾನ್ ಪಾದಗಳನ್ನು ಮುಟ್ಟಿ ನಮಸ್ಕರಿಸಿದರು.

"ಇವನು ಸಂಕಟ. ಇವನು ದೇಪ್‌ಮಣಿ, ಇಬ್ಬರೂ ಎಂಟು ವರ್ಷಗಳಿಂದ ನನ್ನ ಹತ್ತಿರ ಕೆಲಸ ಮಾಡ್ತಾ ಇದ್ದಾರೆ. ಇಲ್ಲಿಂದ ನಲವತ್ತು ಕಿ.ಮೀ.ಗಳ ದೂರದ "ಜಂಗಲ್"

ಹಳ್ಳಿಯವರು ಸೋನ್ ನದಿಯ ದಕ್ಷಿಣಕ್ಕಿರುವ ಬಿಯಲೆಲ್ಲ ಹಿಂದುಳಿದ ಬುಡಕಟ್ಟುಗಳಿರುವ ಪ್ರದೇಶಗಳು" ಖಾನ್ ಹೇಳಿದರು.

ಬರುವಾಗ ರಾಬರ್ಟ್ ಗಂಜ್‌ನಿಂದಲೇ ಭೋಪಾನ್ ವಿಶ್ರಾಂತಿ ಗೃಹವನ್ನು ಮೂರು ದಿನಗಳಿಗೆ ಕಾಯ್ದಿರಿಸಿಕೊಂಡು ಬಂದಿದ್ದೆವು. ಸಂಕಟ ಮತ್ತು ದೇವ್‌ಮಣಿ ಸುಮಾರು ಹತ್ತು ಕಬ್ಬಿನ ಜಲ್ಲೆಗಳನ್ನು ಹೊತ್ತು ತಂದಿದ್ದರು.

"ಕ್ಯಾ ಮಿಸ್ಟರ್ ಸ್ವಾಮಿ ಗನ್ನಾ ಕಾಯೇಗಾ" ಎಂದು ಖಾನ್ ನನ್ನನ್ನು ಕೇಳಿದಾಗ ಹರೇ ಸಾಬ್ ಚಳಿಯಲ್ಲಿ ಇದನ್ನು ತಿನ್ನಲು ಸಾಧ್ಯವೇ..?" ಎಂದು ಮರು ಪ್ರಶ್ನಿಸಿದೆ. ಪಕ್ಕದಲ್ಲಿದ್ದ ಇನ್ನೊಬ್ಬ ಖಾನ್

"ಏನು ಕಬ್ಬು ತಿನ್ನುವುದಿಲ್ಲವೇ..?" ಕೇಳಿದ ಖಾನ್

"ಎಲ್ಲವನ್ನೂ ನಿಧಾನವಾಗಿ ತಿನ್ನಿಸೋಣ" ಎಂದಿದ್ದೆ ಇಬ್ಬರೂ ನಕ್ಕರು.

ಸಂಕಟ ಮತ್ತು ದೇವ್‌ಮಣಿ ಬೇಕಾಗಿದ್ದ ಸಾಮಾನುಗಳನ್ನೆಲ್ಲ ಇಳಿಸಿ, ಮಿಕ್ಕ ಸಾಮಾನುಗಳನ್ನು ಟ್ರೇಲರ್‌ನಲ್ಲೆ ಬಿಟ್ಟು, ಬಾವಿಯಿಂದ ನೀರು ತಂದು ಎಲ್ಲರಿಗೂ ಹಾಸಿಗೆಗಳನ್ನು ನೀಟಾಗಿ ಹಾಸಿಕೊಟ್ಟು, ಹೇಳಿದ ಕೆಲಸಗಳನ್ನೆಲ್ಲಾ ಕ್ಷಣಗಳಲ್ಲಿ ಮುಗಿಸುತ್ತಿದ್ದರು.

ಚಳಿ ಮಾತ್ರ ಇನ್ನಷ್ಟು ಜಾಸ್ತಿಯಾಗಿ ಮೈ ನಡುಗುತ್ತಿದೆ. ಅಡಿಗೆಯನ್ನು ಮಾಡುವುದು ಸಾಧ್ಯವಿಲ್ಲ ಎಂದು, ಹತ್ತಿರವಿದ್ದ ಒಂದು ಪಂಜಾಬಿ ಡಾಬಾದಲ್ಲಿ ಉಂಡುಬಂದೆವು. ಸಂಕಟ, ದೇವ್‌ಮಣಿಯನ್ನು ಕೇಳಿದಾಗ, ನಾವು ಎರಡು ದಿನಗಳಿಗಾಗುವಷ್ಟು ರೊಟ್ಟಿಗಳನ್ನು ಹೊತ್ತು ತಂದಿರುವುದಾಗಿ ಹೇಳಿದರು.

ದಪ್ಪವಾದ ಹಾಸಿಗೆಯ ಮೇಲೆ ಮಲಗಿ ಕೊಂಡು ರಜಾಯಿಯನ್ನು ಹೊದ್ದುಕೊಂಡಾಗ ಮನಸ್ಸು ಹಗುರವಾಗಿ ಮುದಗೊಂಡಿತು. ಎರಡು ದಿನಗಳಿಂದ ಪ್ರಯಾಣ ಮಾಡಿ ಮೈ ಕೈ ಗಳೆಲ್ಲಾ ನೋವಾಗುತ್ತಿದ್ದು ಮಲಗಿದ ತಕ್ಷಣವೇ ನಿದ್ದೆ ಆವರಿಸಿತ್ತು.

ಬೆಳಿಗ್ಗೆ ಎದ್ದು ದಿನ ನಿತ್ಯದ ಕೆಲಸಗಳನ್ನು ಮುಗಿಸಿಕೊಂಡು ಎಲ್ಲರೂ ತಯಾರಾದೆವು. ಎಂ.ಎ.ಖಾನ್ ಇನ್ನೂ ಸುಮಾರು 50 ಕಿ.ಮೀ.ಗಳ ದೂರ, ಸೋನ್ ನದಿಯ ದಕ್ಷಿಣಕ್ಕೆ ಹೋಗಬೇಕಾಗಿದ್ದರಿಂದ ನಮ್ಮಿಂದ ಬೀಳ್ಕೊಂಡರು. ನಾವು ಡೇರೆಗಳನ್ನು ಹಾಕಲು ನೀರು ಮತ್ತು ನೆರಳಿನ ಸೌಕರ್ಯವಿರುವ ಸ್ಥಳವನ್ನು ಹುಡುಕಲು ಹೊರಟೆವು.

"ನನಗೇಕೋ ಈ ಹಳ್ಳಿಗಳಲ್ಲಿ ಇರುವುದೆಂದರೆ ಸ್ವಲ್ಪವೂ ಹಿಡಿಸುವುದಿಲ್ಲ, ಒಂದೆರಡು ಕಿ.ಮೀ.ಗಳು ದೂರವಿದ್ದರೇನೆ ಒಳಿತು" ಎಂದು ಜಾನ್ ಹೇಳಿದ್ದು ಕೇಳಿ ಒಳ್ಳೆ ಕಾಡು ಜೀವಿಯೇ ಎಂದು ಕೊಂಡೆ.

"ಇಲ್ಲೊಬ್ಬರು ಗೊತ್ತಾದ ಡಾಕ್ಟರ್ ಇದ್ದಾರೆ. ಯಾವುದಕ್ಕೂ ಅವರನ್ನೊಮ್ಮೆ ಸಂಧಿಸೋಣ" ಎಂದು ಕರೆದುಕೊಂಡು ಹೋದರು. ಅದೊಂದು ಪ್ರಾಥಮಿಕ ಆರೋಗ್ಯ ಕೇಂದ್ರ, ಅದರ ಆವರಣದಲ್ಲಿಯೇ ಇದ್ದ ಒಂದು ಕ್ವಾರ್ಟರ್ಸ್ ಹತ್ತಿರ ಹೋಗಿ ಬಾಗಿಲು ತಟ್ಟಿದೆವು. ಸ್ವಲ್ಪ ಹೊತ್ತಿನಲ್ಲೇ ಹೊರಕ್ಕೆ ಬಂದ ಡಾಕ್ಟರ್ ಬಹಳ ಆತ್ಮೀಯವಾಗಿ ಕೈ ಕುಲುಕಿ ಕುರ್ಚಿಗಳನ್ನು ತೋರಿಸಿದರು.

"ಇವರು ವೆಂಕಟಸ್ವಾಮಿ ಅಂತ ಹೊಸತಾಗಿ ಬಂದಿರುವ ಸಹದ್ಯೋಗಿ" ಎಂದು ಪರಿಚಯಿಸಿದರು. 50ರ ಗಡಿಯಲ್ಲಿರುವ ಎತ್ತರದ ಕಟ್ಟುಮಸ್ತಾದ ಹಳ್ಳಿಗನಂತೆ ಕಾಣುವ ಡಾಕ್ಟರ್

"ತಮ್ಮದು ಯಾವವೂರು.?" ಕೇಳಿದರು.

"ಬೆಂಗಳೂರು " ಹೇಳಿದೆ.

"ಬಂಗ್ಲೂರ್ ನಮ್ಮ ಹುಡುಗನೊಬ್ಬ ಇಂಟರ್ ಮೀಡಿಯಟ್ ಓದುತ್ತಿದ್ದಾನೆ. ಎಂಜಿನಿಯರಿಂಗೋ ಅಥವಾ ಮೆಡಿಕಲ್‌ಗೋ ಸೇರಿಸಬೇಕೆಂದಿದ್ದೇನೆ, ಡೊನೇಷನ್ ಎಷ್ಟಾಗಬಹುದು.? ಕರ್ನಾಟಕದಲ್ಲಿ ಬೇಕಾದಷ್ಟು ಖಾಸಗೀ ವಿದ್ಯಾಲಯಗಳು ಇವೆಯಂತಲ್ಲಾ" ಎಂದರು.

ಸ್ವಲ್ಪ ಉಸಿರುಕಟ್ಟಿದಂತಾದ ನಾನು ನಮ್ಮ ರಾಜ್ಯದ ಬಗ್ಗೆ ಇಂತಹ ಒಳ್ಳೆಯ ಅಭಿಪ್ರಾಯ ಅಲ್ಲಿಯವರೆಗೂ ಹಬ್ಬಿರುವುದು ನೋಡಿ ಬೆರಗಾಗಿ ಬಿಟ್ಟೆ. ಈ ಖ್ಯಾತಿ ನಮ್ಮ ರಾಜ್ಯಕ್ಕೆ ಸಲ್ಲಲೇಬೇಕು.

"ನನಗೆ ಅಷ್ಟೊಂದು ವಿವರವಾಗಿ ಗೊತ್ತಿಲ್ಲ, ಬೇಕಾದರೆ ತಿಳಿದುಕೊಂಡು ಹೇಳುತ್ತೇನೆ" ಎಂದು ಹಾರಿಕೆಯ ಉತ್ತರ ನೀಡಿ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಂಡೆ.

ಮಾತುಗಳು ಬೇರೆಯ ಕಡೆಗೆ ತಿರುಗಿದವು. ನಮ್ಮ ಕ್ಯಾಂಪಿನ ಬಗ್ಗೆ ಮಾತುಗಳು ಬಂದಾಗ,

"ಇಲ್ಲಿ ನಿಮ್ಮವರ್‍ಯಾರೋ ಇದ್ದಾರಲ್ಲ" ಎಂದರು. ನಮಗೆ ಗೊತ್ತಿಲ್ಲದೆ ಯಾರು

ಬಂದಿದ್ದಾರೆ. ಬೇರೆ ಯಾವುದೋ ವಿಭಾಗದವರಿರಬಹುದು. ಎರಡೂ ಮೂರು ಸ್ಥಳಗಳನ್ನು ಹೇಳಿದ ಮೇಲೇ,

"ಬೇಕಾದರೆ ನಮ್ಮ ಆಸ್ಪತ್ರೆಯ ಆವರಣದಲ್ಲೇ ಇದ್ದು ಬಿಡಿ. ನೀರಿದೆ, ನೆರಳಿದೆ, ಇನ್ನೂ ಬೇಕಾದರೆ ಒಂದು ಮನೆ ಖಾಲಿ ಮಾಡಿಸಿ ಕೊಡುತ್ತೇನೆ" ಎಂದರು.

"ಇಲ್ಲ ಊರಿನ ಮಧ್ಯೆ ಇದ್ದರೆ ನಿಮಗೂ ತೊಂದರೆ ನಮಗೂ ತೊಂದರೆ ಖಾನ್ ಹೇಳಿದರು" ಅಷ್ಟರಲ್ಲಿ ಚಹ ಬಂದಿತ್ತು. ಚಹ ಕುಡಿದು ಅಲ್ಲಿಂದ ಡಾಕ್ಟರ್ ತಿಳಿಸಿದ ಸ್ಥಳದ ಕಡೆಗೆ ನಡೆದೆವು. ವಿಶಾಲವಾದ ಬೇಲಿಯ ಮಧ್ಯೆ ಸಣ್ಣದಾದ ಮನೆ. ಪಕ್ಕದಲ್ಲಿಯೇ ದೊಡ್ಡದಾದ ಎರಡೂ ಮಘುವಾ ಮರಗಳು. ಮೂಲೆಯಲ್ಲೊಂದು ಸಣ್ಣದಾದ "ಎಸ್" ಡೇರೆ. ಡೇರೆ ನೋಡಿದ ತಕ್ಷಣವೇ ನಮ್ಮ ಕಸುಬುದಾರರೇ ಎಂದು ಕೊಂಡು ಕೊಠಡಿಯ ಹತ್ತಿರಕ್ಕೆ ಹೋಗಿ ಬಾಗಿಲು ಒಳಕ್ಕೆ ಇಣುಕಿ ನೋಡಿ ಸದ್ದು ಮಾಡಿದೆವು. ಬುಡ್ಡಿ ದೀಪದ ಮಂದ ಬೆಳಕಿನ ಜೊತೆಗೆ ಒಂದು ಕಪ್ಪು ಆಕಾರ ನಡೆದು ಹೊರಕ್ಕೆ ಬಂದಿತು.

"ಖಾನ್ ಜಿ.ಎಸ್.ಐ." ಎಂದು ಕೈ ನೀಡಿದರು. ನಾನೂ ಕೈ ಕುಲಿಕಿ ಹೆಸರು ಹೇಳಿದೆ.

"ನಾನು ವಾಖಿಲೂ, ಭೂಶಾಸ್ತ್ರಜ್ಞ, ಅಣುಶಕ್ತಿ ಖನಿಜಗಳ ವಿಭಾಗ" ಎಂದರು. ನಂತರ ದೂರದಲ್ಲಿ ನಿಂತಿದ್ದ ಸೇವಕನನ್ನು ಕರೆದು ಕುರ್ಚಿಗಳನ್ನು ಹೊರಕ್ಕೆ ಹಾಕಿಸಿಕೊಂಡು ಕುಳಿತು ಕೊಂಡೆವು. ಒಂದೆರಡು ಸಲ ಚಹ ಆಗಿ, ರಾತ್ರಿ ಒಂಬತ್ತು ಗಂಟೆಯಾಯಿತು. ಮಾತುಗಳು ಮುಗಿಯುತ್ತಲೇ ಇಲ್ಲ.

"ನೀವು ಇಲ್ಲೇ ಬಂದು ಬಿಡಿ. ನನಗೂ ಸ್ವಲ್ಪ ಜೊತೆ ಸಿಕ್ಕಿದಂತಾಗುತ್ತದೆ. ಇನ್ನೂ ಒಂದು ತಿಂಗಳು ಇಲ್ಲೇ ಇರುತ್ತೇನೆ" ವಾಖಿಲೂ ಹೇಳಿದರು.

"ಕ್ಯಾ ಸ್ವಾಮಿ ಆಪ್ ಕ್ಯಾ ಕಹೇಂಗೆ ?" ಖಾನ್ ನನ್ನ ಕಡೆ ನೋಡಿ ಹೇಳಿದರು.

"ನನಗೇನೂ ಅಭ್ಯಂತರವಿಲ್ಲ" ಎಂದೆ.

ಮಾರನೆಯ ದಿನ ಬೆಳಗ್ಗೆ ನನ್ನ ಮತ್ತು ಖಾನ್ ಡೇರೆಗಳು ಒಂದು ದೊಡ್ಡ ಮಘುವಾ ಮರದ ಕೆಳಗೆ ನಿಂತಿದ್ದರೆ ಡ್ರೈವರ್ ಮತ್ತು ಸೇವಕರ ಡೇರೆಗಳು ಇನ್ನೊಂದು ಮರದ ಕೆಳಗೆ ನಿಂತಿದ್ದವು. ಮಧ್ಯೆ ಅಡಿಗೆ ಮಾಡುವ ಡೇರೇ. ಸ್ವಲ್ಪ ದೂರದ ಹೊಲದಲ್ಲಿ ಮೂರು "ಎಸ್" ಡೇರೆಗಳು (ಲ್ಯಾಟ್ರೀನ್) ಇನ್ನೊಂದು ಮೂಲೆಯಲ್ಲಿ ಸ್ನಾನ ಮಾಡುವ ಡೇರೆ.

ಮುಂದಿನ ದಿನ ಫೀಲ್ಡ್ ಕೆಲಸ ಶುರು ಆಗಿಯೇ ಹೋಯಿತು. ಬೆಳಗ್ಗೆ ಏಳು ಗಂಟೆಗೆ

ಕ್ಯಾಂಪ್ ಬಿಟ್ಟರೆ ಮಧ್ಯಾನ್ಹ ಎರಡೂವರೆ ಗಂಟೆಗೆ ವಾಪಸ್ಸು ಬರುತ್ತಿದ್ದೆವು. ದೂರದ ಪ್ರಯಾಣ ಏನಾದರು ಇದ್ದಲ್ಲಿ ಬುತ್ತಿಯನ್ನು ಜೊತೆಯಲ್ಲಿ ತೆಗೆದುಕೊಂಡು ಹೊರಡುತ್ತಿದ್ದೆವು. ಒಮ್ಮೆ ಒಂದು ಹಳ್ಳಿಯ ಮಧ್ಯದಲ್ಲಿ ಹಾದು ಹೋಗುವಾಗ ಒಂದು ಮಸೀದಿ ಕಾಣಿಸಿತು.

"ಅಲೀಮಿಯ ಸ್ವಲ್ಪ ಗಾಡಿ ನಿಲ್ಲಿಸು" ಎಂದ ಖಾನ್ ಶೂಗಳನ್ನು ಹೊರಗೆ ಬಿಟ್ಟು ಮಸೀದಿಯ ಒಳಕ್ಕೆ ಹೋದರು.

"ಅಲೀಮಿಯ ಹೋಗುವುದಿದ್ದರೆ ನೀನು ಹೋಗಿ ಬಾ" ಎಂದೆ.

"ಇಲ್ಲಾ ಸಾರ್ ನಾನು ಹೋಗುವುದಿಲ್ಲ" ಎಂದ

"ಏಕೆ....?" ಪ್ರಶ್ನಿಸಿದೆ.

"ಮಸೀದಿಗೆ ಹೋಗುವಾಗ ಶ್ರದ್ಧೆಯಿಂದ ಸ್ವಚ್ಛವಾಗಿ ಹೋಗಬೇಕು.. ಹೇಗೆಂದರೆ ಹಾಗೆ ಹೋಗುವುದು ಸರಿ ಇಲ್ಲ ..." ಎಂದ.

ಅಷ್ಟರಲ್ಲಿ ಇನ್ನೊಬ್ಬ ಅಲ್ಲಿಗೆ ಬಂದ. ಮಾತು ಮಾತಿನಲ್ಲಿ ಇಬ್ಬರೂ ಒಂದೇ ಧರ್ಮಕ್ಕೆ ಸೇರಿದವರೆಂದು ತಿಳಿದುಕೊಂಡರು. ಬಂದವನು ಹೇಳಿದ

"ಮಿಯ ಅಬ್ ದೇಶಕ ಅಬಾಧಿ ಮೇ ಹಮಾರಾ ಅಬಾಧಿ ಕಿತ್ನಾ ಹೋಗಯಾ ಮಾಲೂಮ್ ಹೈ ... ? ಬೀಸ್ ಕರೋರ್ ಹೋಗಯ" (ದೇಶದ ಜನಸಂಖ್ಯೆಯಲ್ಲಿ ನಮ್ಮ ಜನಸಂಖ್ಯೆ ಎಷ್ಟು ಗೊತ್ತೆ, ಇಪ್ಪತ್ತು ಕೋಟಿ ಆಗಿದೆ) ಹೆಮ್ಮೆಯಿಂದ ಹೇ—

"ಹ್ಹ ಹೋತು ಹೈ" ನಮ್ಮ ಡ್ರೈವರ್ ಹೇಳಿದ. ಅಷ್ಟರಲ್ಲಿ ಒಂದಷ್ಟು ಕೋಳಿಗಳು ಹಾರಿಕೊಂಡು ಬಂದವು.

"ನಿಮ್ಮೂರಿನಲ್ಲಿ ಬಹಳ ಕೋಳಿಗಳಿವೆ ಒಂದರೆಡು ಹಣಕ್ಕೆ ಸಿಗುತ್ತವೆಯೇ?" ಅಲಿ ಕೇಳಿದ.

"ನಮ್ಮೂರಿನಲ್ಲಿ ಕೋಳಿಗಳು ಸಿಗುವುದೇ .. ? ನಮಗೆಯೇ ಸಾಕಾಗುವುದಿಲ್ಲ .." ಇಬ್ಬರೂ ನಕ್ಕರು.

ಮಸೀದಿಯಿಂದ ಹೊರಕ್ಕೆ ಬಂದ ಖಾನ್, ಅಲಿಗೆ ಹೇಳಿದ ಹಾಗೆ ಜೀಪು ರಾಬರ್ಟ್ ಗಂಜಿನ ಒಂದು ಕಛೇರಿಯ ಮುಂದೆ ನಿಂತುಕೊಂಡಿತು. ಖಾನ್ ಜೇಬಿನಿಂದ ಒಂದು ಸ.. ಪತ್ರವನ್ನು ತೆಗೆದು ನೋಡಿ, ನನ್ನನ್ನು ಅಲ್ಲೇ ಇರುವಂತೆ ತಿಳಿಸಿ ಕಛೇರಿಯ ಒಳಗೆ ಹೋದರು. ಸ್ವಲ್ಪ ಹೊತ್ತಾದ ನಂತರ ಒಬ್ಬ ಯುವಕನ ಜೊತೆಗೆ ಹೊರಕ್ಕೆ ಬಂದ ಖಾನ್ ನನ್ನನ್ನು

ಪರಿಚಯಿಸಿದರು. ಆ ಯುವಕ ನೀರಾವರಿಯ ವಿಭಾಗದಲ್ಲಿ ಎಂಜಿನೀಯರ್ ಆಗಿದ್ದು ಶ್ರೀಮತಿ ಖಾನ್‌ಗೆ ಸಂಬಂಧಿಕನಂತೆ.

"ನೀನು ಚಿಕ್ಕ ಹುಡುಗನಾಗಿದ್ದಾಗ ನೋಡಿದ್ದು" ಖಾನ್ ಹೇಳಿದರು.

"ನಾನೂ ಅಷ್ಟೇ ನಿಮ್ಮನ್ನು ಒಂದೆರಡು ಸಲ ಹುಡುಗನಾಗಿದ್ದಾಗ ನೋಡಿದ್ದು" ಯುವಕ ಹೇಳಿದ. ಮಾತನಾಡುತ್ತಾ ಹತ್ತಿರದಲ್ಲೇ ಇದ್ದ. ಕ್ವಾರ್ಟರ್ಸ್ ಕಡೆಗೆ ಎಲ್ಲರೂ ನಡೆದೆವು. ಇತ್ತೀಚೆಗೆ ಮದುವೆಯಾಗಿದ್ದ ಆ ಯುವಕ ಹೊಸ ಸಂಸಾರ ಹೂಡಿದ್ದ.

"ಮದುವೆಯಲ್ಲಾ ಅವರೇ ಮಾಡಿಕೊಟ್ಟು, ಎಲ್ಲಾ ಮೂರು ಲಕ್ಷದಷ್ಟು ಒಡವೆ, ವಸ್ತುಗಳು, ಹಣ ಕೊಟ್ಟಿದ್ದಾರೆ. ಇನ್ನು ಕೆಲವೇ ದಿನಗಳಲ್ಲಿ ಒಂದು ಕಾರು ಕೂಡ ಬರಲಿದೆ" ಯುವಕ ಪ್ರತಿಷ್ಠೆಯಿಂದ ಹೇಳ ತೊಡಗಿದ. ಖಾನ್ ಮಾತಿನ ಮಧ್ಯೆ,

"ಮಾಶಾ ಅಲ್ಲಾ.. ಬಹುತ್ ಅಚ್ಛಾ" ಎಂದು ಕಣ್ಣುಗಳನ್ನು ಹಿಗ್ಗಿಸುತ್ತ ಖುಷಿ ವ್ಯಕ್ತಪಡಿಸುತ್ತಿದ್ದರು.

ಒಬ್ಬ ಹುಡುಗ ಕೆಲವು ಸಿಹಿ ತಿಂಡಿಗಳ ಜೊತೆಗೆ ಹಣ್ಣು ರಸದ ಗ್ಲಾಸುಗಳನ್ನು ತಂದಿಟ್ಟ.

"ಸ್ವಾಮಿ ಲೇಲೋ" ಖಾನ್ ಹೇಳಿದರು. ಯುವಕ ತಟ್ಟೆಯನ್ನು ನಮ್ಮ ಮುಂದಿಟ್ಟು ತೆಗೆದುಕೊಳ್ಳುವಂತೆ ಹೇಳಿದ. ಒಂದೆರಡು ಸಿಹಿ ತಿಂಡಿಗಳ ಜೊತೆಗೆ ಹಣ್ಣಿನ ರಸವನ್ನು ಕುಡಿದಾಯಿತು.

ಜೀಪಿನ ಹತ್ತಿರದವರೆಗೂ ಬಂದ ಯುವಕ ಬೀಳ್ಕೊಡುವ ಮುಂದೆ

"ಸಾಧ್ಯವಾದಷ್ಟು ಮೊಸರು ಮತ್ತು ಬೆಳ್ಳುಳ್ಳಿಯನ್ನು ಧಾರಾಳವಾಗಿ ತೆಗೆದುಕೊಳ್ಳಿ" ಎಂದ

"ಏಕೆ..?" ಪ್ರಶ್ನಿಸಿದೆ.

"ನಿಮಗೆ ಗೊತ್ತಿಲ್ಲವೆ..?" ಈ ಪ್ರದೇಶದ ನೀರಿನಲ್ಲಿ ಸತ್ವ ಇಲ್ಲವಂತೆ, ಷಂಡನಾಗುವ ಸಾಧ್ಯತೆ ಇರುವುದಾಗಿ ಜನ ಹೇಳಿಕೊಳ್ಳುತ್ತಾರೆ. ಯಾವುದಕ್ಕೂ ಒಳ್ಳೆಯದು. ಮೊಸರು ಮತ್ತು ಬೆಳ್ಳುಳ್ಳಿಯನ್ನು ಹೆಚ್ಚು ತೆಗೆದುಕೊಳ್ಳಿ ಅಷ್ಟೇ ಅಲ್ಲ, ಈ ನೀರಿನಲ್ಲಿ ಅಯೋಡಿನ್ ಕೂಡ ಕಡಿಮೆ ಇದೆಯಂತೆ" ಎಂದ.

ನನಗೇಕೋ ಸಣ್ಣ ಆಘಾತವಾಯಿತು. ಕರ್ನಾಟಕದಿಂದ ಇಲ್ಲಿಗೆ ಬಂದು ಷಂಡನಾಗಿ ವಾಪಸ್ ಹೋಗಬೇಕೆ ..? ಗಂಡ ಹೆಂಡತಿಯರ ವ್ಯವಹಾರದಲ್ಲಿ ತೊಂದರೆ ಬಂದರೆ ...? ಏನೇನೋ ಯೋಚನೆಗಳ ಜೊತೆಗೆ ಜೀಪು ಕ್ಯಾಂಪ್ ಕಡೆಗೆ ಓಡುತ್ತಿತ್ತು.

**ಕಾಡಿನಲ್ಲಿ ಕಳ್ಳತನ, ಪೋಲೀಸ್ ಠಾಣೆ ಇತ್ಯಾದಿ**

ಒಂದು ದಿನ ಬೆಳಿಗ್ಗೆಯೇ ಎಂ.ಎ. ಖಾನ್ ಬಂದವನೆ ದೂರದಿಂದಲೆ

"ಓ ಸ್ವಾಮಿ ಸಾಬ್ ಕ್ಯಾ ಓ ರಹಾ ಹೈ" ಎಂದು ಡೇರೆ ಒಳಕ್ಕೆ ನುಗ್ಗಿ

"ಖಾನ್ ಸಾಬ್ ಇಲ್ಲವೆ ?" ಕೇಳಿದ. ಖಾನ್ ಸಾಬ್ ನನ್ನೆ ರಾತ್ರಿಯೆ ರಜಾ ಹಾಕಿ ಲಖನೌಗೆ ಹೋಗಿರುವುದಾಗಿ ತಿಳಿಸಿದೆ.

"ಅವೆ ಯಾರ್..." ನನ್ನ ಸರ್ವೀಸ್‌ನಲ್ಲಿ ಯಾವಾಗಲೂ ಅಷ್ಟೊಂದು ಭಯಪಟ್ಟಿಲ್ಲ.. ನಮ್ಮ ಕ್ಯಾಂಪಿನಲ್ಲಿ ರಾತ್ರಿ ಕಳ್ಳತನ ಆಯಿತು, ಮೇ ತೂ ಬಹುತ್ ಗಭ್ರಾಗಯಾ ಯಾರ್, ಸಾಲಾ" ಎನ್ನುವಷ್ಟರಲ್ಲಿ

"ಏನೆಲ್ಲಾ ಹೋಯಿತು" ಎಂದೆ ಮಧ್ಯದಲ್ಲಿ.

"ಸುನೋ ತೂ.. ರಾತ್ರಿ ಅಮಾವಾಸೆ ಕತ್ತಲು. ಮೂರು ಡೇರೆಗಳು ಪಕ್ಕಪಕ್ಕದಲ್ಲಿಯೇ ಇವೆ, ನನ್ನ ಡೇರೆಯ ಎದುರಿಗೆ ರಾಮ್‌ಜವ್ವನ್ (ಡ್ರೈವರ್) ಡೇರೆ, ಪಕ್ಕದಲ್ಲೇ ಸ್ವಲ್ಪ ಹಿಂದಕ್ಕೆ ಕೆಲಸಗಾರರ ಡೇರೆ, ರಾತ್ರಿ ಹನ್ನೊಂದು ಗಂಟೆಯವರೆಗೂ ಚಳಿಗೆ ಬೆಂಕಿ ಕಾಯಿಸುತ್ತಾ ಹೊರಗೆ ಕುಳಿತಿದ್ದೆವು. ಹೊರಗಡೆ ಬೆಂಕಿಯ ಪಕ್ಕದಲ್ಲೇ ಮಲಗಿದ್ದ ಕಾವಲುಗಾರರು ಹಾಗೆಯೇ ನಿದ್ದೆ ಮಾಡಿಬಿಟ್ಟಿದ್ದಾರೆ. ಚಳಿಗೆ ಬೆಂಕಿ ಕೂಡ ಯಾವಾಗಲೋ ನಂದಿ ಹೋಗಿದೆ..ರಾತ್ರಿ ಎರಡು ಗಂಟೆ, ಗಾಢವಾದ ನಿದ್ದೆ,, ಎಲ್ಲೋ ಏನೋ ಸರಸರ ಎನ್ನುವ ಸದ್ದು, ನಿಧಾನವಾಗಿ ಕತ್ತಲಲ್ಲೇ ಕಣ್ಣು ತೆರೆದು ನೋಡುತ್ತೇನೆ, ತಕ್ಷಣ ಏನೂ ಕಾಣಿಸದಿದ್ದರೂ ಸದ್ದು ಮಾತ್ರ ಆಗುತ್ತಲೇ ಇದೆ. ಸದ್ದು ಬರುವ ಕಡೆಗೆ ಕಣ್ಣುಗಳನ್ನು ಹಿಗ್ಗಿಸಿ ಒಂದೇ ಸಮನೆ ನೋಡುತ್ತೇನೆ..? ಅಲ್ಲೇ ಪಕ್ಕದಲ್ಲೇ ಅಸ್ಪಷ್ಟವಾದ ಕಪ್ಪು ಆಕೃತಿ ಚಲಿಸುತ್ತಿದೆ. ಒಮ್ಮೆಲೇ ಜೋರಾಗಿ ಕಿರುಚಿ ಬಿಟ್ಟೆ, ಕಿರುಚಿಬಿಟ್ಟೆ ಎಂದರೆ ಎಷ್ಟೊತ್ತು ಹಾಗೆ ಅಬ್ಬರಿಸಿದೆನೋ.. ಕೊನೆಗೆ ನನ್ನ ಕೂಗು ನನಗೇ ಕೇಳಿಸಲಿಲ್ಲ.. ಗಂಟಲೆಲ್ಲಾ ಕಟ್ಟೋಗಿದೆ ನೋಡು.." ಎಂದು ಕೀರಲು ಧ್ವನಿಯಲ್ಲಿ ಮಾತನಾಡಿ ತೋರಿಸಿದ. ಮತ್ತೆ

"ಸುಮಾರು ಹೊತ್ತಾದ ಮೇಲೆ ರಾಮ್‌ಜವ್ವನ್, ಕೆಲಸಗಾರರೆಲ್ಲ ಬಂದರು. ಕಳ್ಳರು ಹೋದ ದಿಕ್ಕಿಗೆ ಕತ್ತಲಲ್ಲಿ ಇವರೆಲ್ಲ ಸುಮಾರು ದೂರ ಹೋಗಿ ವಾಪಸ್ ಬಂದರು. ಬ್ರೀಫ್‌ಕೇಸು, ಪೇಪರುಗಳು ಮತ್ತು ಕೆಲವು ಸಾಮಾನುಗಳು ಬಯಲೆಲ್ಲಾ ಚೆಲ್ಲಿ ಹೋಗಿ ಬೆಳಗ್ಗೆ ಸಿಕ್ಕಿದವು. ಈಗ ಮುಖ್ಯವಾಗಿ ಎಸ್.ಐ. ಕ್ಯಾಮರಾ ಮತ್ತು ರೇಡಿಯೋ ಮಾತ್ರ ಸಿಗಬೇಕಾಗಿದೆ. ಹಣ ನನ್ನ ತಲೆ ದಿಂಬಿನ ಕೆಳಗಿಟ್ಟು ಕೊಂಡಿದ್ದರಿಂದ ಬಚಾವಾಯಿತು. ನೆನ್ನೆ ದಾಲಾ ಪೋಲೀಸ್ ಠಾಣೆಯಲ್ಲಿ ಎಫ್.ಐ. ಆರ್. ಬರೆಸಿ ಬಂದಿದ್ದೇನೆ. ಇವೊತ್ತು ಬಾ ಎಂದು ತಿಳಿಸಿದ್ದಾರೆ. ನೀನೂ ಬಂದರೆ ಜೊತೆಯಲ್ಲಿ ಹೋಗೋಣ" ಎಂದು ದೀರ್ಘ ಉಸಿರು ಬಿಟ್ಟು, ನನ್ನ ಕಡೆಗೆ ನೋಡಿದ.

ಇಲ್ಲ ಬರುವುದಿಲ್ಲ ಎನ್ನಲು ಆಗುತ್ತದೆಯೇ..? ಸರಿ ಹೋಗೋಣ ಎಂದು ಬೆಳಗಿನ ಉಪಾಹಾರ ಮುಗಿಸಿ ಜೀಪಿನಲ್ಲಿ ದಾಲಾ ಪೋಲೀಸ್ ಠಾಣೆಗೆ ಹೊರಟೆವು. ಊರಿಗೆ ಸ್ವಲ್ಪ ದೂರದಲ್ಲಿದ್ದ ಪೋಲೀಸ್ ಠಾಣೆಯ ಕಾಂಪೌಂಡ್ ಒಳಗೆ ನಮ್ಮ ಜೀಪು ನಿಂತುಕೊಂಡಿತು. ಇಬ್ಬರೂ ಇಳಿದು ಎಸ್. ಐ. ಇದ್ದ ಕೊಠಡಿಯ ಕಡೆಗೆ ಹೋದೆವು. ಕೊಠಡಿಯ ಒಳಗೆ ಕುಳಿತಿದ್ದ ಒಬ್ಬ ದೊಡ್ಡ ಮೀಸೆಯ ದಡೂತಿ ಮನುಷ್ಯ ಮಫ್ತಿ ಉಡುಪಿನಲ್ಲಿ,

"ಬನ್ನಿ ಬನ್ನಿ ಕುಳಿತುಕೊಳ್ಳಿ" ಎಂದು ಎದುರಿಗಿದ್ದ ಕುರ್ಚಿಕಡೆಗೆ ಕೈ ತೋರಿಸಿದ. ಖಾಕಿ ಉಡುಪು ತೊಟ್ಟು ಭುಜಕ್ಕೆ ಬಂದೂಕನ್ನು ನೇತಾಕಿಕೊಂಡು ಇದೇ ಮನುಷ್ಯ ಕಾಡಿನಲ್ಲಿ ಕಾಣಿಸಿಕೊಂಡರೆ ಹೆಂಗಸರು ಮಕ್ಕಳೆನ್ನದೆ ಎಲ್ಲರೂ ಉಚ್ಚೆ ಹೊಯ್ದುಕೊಂಡು ಓಡಿಬಿಡುತ್ತಿದ್ದರೇನೋ..?

ನಮ್ಮ ಕಡೆ ನೋಡಿ,

"ಹ್ಹಾ.. ಬೋಲಿಯೇ ಸಾಬ್" ಎಂದಾಗ ಅಲ್ಲೇ ಪಕ್ಕದಲ್ಲೇ ನಿಂತಿದ್ದ ಪೇದೆ

"ಅದೇ ಸಾಬ್ ನೆನ್ನೆ ಎಫ್.ಐ.ಆರ್. ಬುಕ್ ಮಾಡಿ ಹೋಗಿದ್ದಾರೆ ಎಂದು ಹೇಳಲಿಲ್ಲವೆ ?" ಜ್ಞಾಪಿಸಿದ. ಸ್ವಲ್ಪ ಹೊತ್ತು ಎಲ್ಲಾ ಕೇಳಿ ತಿಳಿದುಕೊಂಡರು. ಅಷ್ಟರಲ್ಲಿ ಚಹ ಬಂದಿತ್ತು.

"ಬನ್ನಿ, ಹೊರಗಡೆ ಕುಳಿತುಕೊಳ್ಳೋಣ, ಚೆನ್ನಾಗಿರುತ್ತದೆ ಬಿಸಿಲು" ಎಂದರು. ಹೊರಗಡೆ ಬಂದು ಕುಳಿತುಕೊಂಡೆವು. ಚಹ ಕುಡಿಯುತ್ತಿದ್ದಂತೆ ಪೋಲೀಸ್ ಉಡುಪಿನಲ್ಲಿದ್ದ ಪೇದೆಯೊಬ್ಬ ಸುಮಾರು ಇಪ್ಪತ್ತು ವರ್ಷಗಳ ಯುವಕನನ್ನು ಹತ್ತಿರಕ್ಕೆ ಕರೆದುಕೊಂಡು ಬಂದು

"ಸಾಬ್ ಇವನೇ ಸಾಬ್ ಅದೆ ಹತ್ತು ಸಾವಿರ" ಎಂದ.

ಚಹ ಕುಡಿಯುತ್ತಿದ್ದ ಎಸ್.ಐ. ತನ್ನ ದಪ್ಪ ಕತ್ತನ್ನು ಪಕ್ಕಕ್ಕೆ ತಿರುಗಿಸಿ ಅವನನನ್ನೊಮ್ಮೆ ಕೆಳಗಿಂದ ಮೇಲೆ ನೋಡಿ,

"ಏನೋ ನಿನ್ನ ಹೆಸರು" ಎಂದಿದ್ದೆ.. ಯುವಕ ಹೇಳಿದ.

"ನೋಡು, ಹತ್ತು ಸಾವಿರ ಎಲ್ಲಿಟ್ಟಿದ್ದೀಯೊ ತಂದು ಕೊಟ್ಟುಬಿಡು, ಸಾಯಿಸಿಬಿಡುತ್ತೀನಿ ಘರ್ಜಿಸಿದ"

"ಸಾಬ್ ಸತ್ಯವಾಗಲು ನನಗೆ ಗೊತ್ತಿಲ್ಲ ಸಾಬ್" ಯುವಕ ಹೇಳಿದ. ಎಸ್.ಐ ನಮ್ಮ ಕಡೆಗೆ ಒಮ್ಮೆ ನೋಡಿ,

"ನೋಡಿ ಸಾಬ್. ಪಾಪ ಮದುವೆಗೆ ಅಂತ ಬ್ಯಾಂಕನಿಂದ ಹತ್ತು ಸಾವಿರ ರೂಪಾಯಿಗಳನ್ನು ತಂದು ಮನೆಯಲ್ಲಿಟ್ಟಿರೆ, ಇವನು ಹಾರಿಸಿ ಬಿಟ್ಟಿದ್ದಾನೆ. ಮದುವೆ ಇನ್ನೊಂದು ವಾರ ಕೂಡ ಇಲ್ಲ, ಆ ಮುದುಕ, ಹುಡುಗಿ ತಂದೆ ಗೋಳೋ ಅಂತ ಅಳುತ್ತಿದ್ದಾನೆ" ಎಂದೇಳಿ ಮತ್ತೆ,

"ಹೌದು, ನೀನು ಅವರ ಮನೆಗೆ ಹೋಗಿದ್ದೇ ತಾನೇ..?" ಎಸ್.ಐ. ಕೇಳಿದ

"ಇಲ್ಲ, ಸಾಬ್ ಅವರ ಕಾಂಪೌಂಡಿಗೆ ಹೋಗಿದ್ದೆ" ಯುವಕ ಹೇಳಿದ.

"ಏತಕ್ಕೆ ಹೋಗಿದ್ದೆ?" ಸ್ವಲ್ಪ ತಡವರಿಸಿದಂತೆ ಯುವಕ ಏನೋ ಹೇಳಿದ. ಪೇದೆಯ ಕೈಯಲ್ಲಿದ್ದ ಉದ್ದವಾದ ಬಿದಿರು ಲಾಟಿಯನ್ನು ಕಸಿದುಕೊಂಡ ಎಸ್.ಐ. ಯುವಕನ ಭುಜಗಳು ಮತ್ತು ಅಡ್ಡವಿಡುತ್ತಿದ್ದ ಅವನ ಕೈ ಎಲುಬುಗಳ ಮೇಲೆ ಬದಲಿಸಿ ಬದಲಿಸಿ ಲೊಟ್.. ಲೋಟ್.. ಲೋಟ್.. ಎಂದು ಒಂದೇ ಸಮನೆ ಹೊಡೆಯತೊಡಗಿದ. ಅನಿರೀಕ್ಷಿತವಾಗಿ ಶರವೇಗದಲ್ಲಿ ನಡೆದು ಹೋದ ದಾಳಿಯಿಂದ ತತ್ತರಿಸಿ ಹೋದ ಯುವಕ ಚೀರಾಡಿಬಿಟ್ಟ. ಆದರೂ ಮೊದಲಿಂದಲೂ ಒಂದೇ ಮಾತು ನನಗೆ ಗೊತ್ತಿಲ್ಲ.. ನನಗೆ ಗೊತ್ತಿಲ್ಲ.

ಎಸ್.ಐ. "ಈ ತರಹ ಇವನು ಕಕ್ಕುವುದಿಲ್ಲ, ಹು" ಎಂದು ಏನೋ ಕಣ್ಣುಗಳಲ್ಲೇ ಸನ್ನೆ ಮಾಡಿದ. ಇಬ್ಬರು ಪೇದೆಗಳು ಅವನನ್ನು ಹಿಡಿದುಕೊಂಡು ಹೋಗಿ ಹತ್ತಿರದಲ್ಲೇ ಇದ್ದ ಒಂದು ಕಂಬಕ್ಕೆ ಒರಗಿಸಿ ಎರಡೂ ಕಾಲುಗಳನ್ನು ಉದ್ದವಾಗಿ ಚಾಚುವಂತೆ ಹೇಳಿ ದೊಡ್ಡದಾದ ಮರದ ತುಂಡನ್ನು ತೊಡೆಗಳ ಮೇಲೆ ಅಡ್ಡವಾಗಿ ಇಟ್ಟು, ಅದರ ಮೇಲೆ ಒಬ್ಬ ಪೇದೆ

ನಿಂತುಕೊಂಡು ಬೂಟು ಕಾಲುಗಳಲ್ಲಿ ಉರುಳಿಸತೊಡಗಿದ. ಇನ್ನೊಬ್ಬ ಪೇದೆ ಅವನ ಎರಡೂ ಕೈಗಳನ್ನು ಹಿಂದಕ್ಕೆ ಎಳೆದು ಗಟ್ಟಿಯಾಗಿ ಹಿಡಿದುಕೊಂಡಿದ್ದ. ಅವನ ಅಳಲು ಆಕಾಶ ಮುಟ್ಟುತ್ತಿತ್ತು.

ಮುಖವನ್ನು ಒಂದು ರೀತಿಯಾಗಿ ಮಾಡಿಕೊಂಡ ಖಾನ್ ನನ್ನ ಕಡೆಗೊಮ್ಮೆ ನೋಡಿದ. ಅಲ್ಲಿಂದ ಎದ್ದು ಜೀಪನ ಕಡೆಗೆ ನಡೆಯುತ್ತಿದ್ದಂತೆ ಹಿಂದೆಯೇ ಬಂದ ಎಸ್.ಐ ಜೀಪಿನ ಹತ್ತಿರವಿದ್ದ ಕೆಲಸಗಾರರನ್ನು,

"ಇವರ್‍ಯಾರು?" ಕೇಳಿದ.

"ಕೆಲಸ ಮಾಡುವವರು" ಖಾನ್ ಉತ್ತರಿಸಿದ

"ಇವರನ್ನು ಸ್ವಲ್ಪ ವಿಚಾರಿಸಬಹುದೆ..?"

ಇಲ್ಲ.. ಇಲ್ಲ.. ಅವರು ನನ್ನ ಹತ್ತಿರ ಸುಮಾರು ಐದಾರು ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ." ಖಾನ್ ಹೇಳಿದ.

"ಯಾವ ಸಮಯದಲ್ಲಿ ಯಾರು ಏನು ಮಾಡುವರೋ.. ? ಏನು ಯೋಚಿಸುವರೊ.. ಎಲ್ಲಾ ಸಂದರ್ಭ ಮತ್ತು ಸನ್ನಿವೇಶದ ಮೇಲೆ ಹೋಗುತ್ತದೆ" ಎಸ್ಐ. ಹೇಳಿದ.

"ಇಲ್ಲ ಅವರು ಅಂತಹವರಲ್ಲ"... ಖಾನ್ ಮಾತಿಗೆ,

"ಆಯಿತು ನಿಮ್ಮಿಷ್ಟ, ಸಾಯಂಕಾಲ ಸಾಧ್ಯವಾದರೆ ನಾನೇ ಬರುತ್ತೇನೆ. ಇಲ್ಲವೆಂದರೆ ಪೇದೆಯನ್ನು ಕಳುಹಿಸುತ್ತೇನೆ, ನಮಸ್ಕಾರ್" ಎಂದು ಹಿಂದಕ್ಕೆ ತಿರುಗಿಕೊಂಡು ಮೋಟಾರ್ ಸೈಕಲ್‌ನಲ್ಲಿ ಡುಂ.. ಡುಂ.. ಎಂದು ಹೊರಟು ಹೋದ. ನಾವು ಅಲ್ಲಿಂದ ಹೊರಕ್ಕೆ ಬಂದುಬಿಟ್ಟೆವು. ಆ ಯುವಕನ ಚೀರಾಟ ನನ್ನ ಕಿವಿಯಲ್ಲಿ ಗುಯ್ ಗುಟ್ಟುತ್ತಲೇ ಇತ್ತು.

ಆಮೇಲೆ ಸುಮಾರು ದಿನಗಳಾದ ಮೇಲೂ ಪೋಲೀಸರು ಆ ಕಡೆ ಸುಳಿಯಲಿಲ್ಲ ಎಂಬುದಾಗಿ ತಿಳಿಯಿತು. ಆಶ್ಚರ್ಯವೆಂದರೆ ಒಂದು ಬೆಳಿಗ್ಗೆ ಡೇರೆಯ ಹತ್ತಿರದಲ್ಲೇ ಕ್ಯಾಮರಾ ರೇಡಿಯೋ ಬಿದ್ದಿತ್ತಂತೆ.

***

## 9 ಗಂಗೆಯಿಂದ ಕಾವೇರಿಯವರೆಗೆ

ಒಂದು ದಿನ ಬೆಳಿಗ್ಗೆ ಕೆಜಿಎಫ್‌ಗೆ ಹೊರಡಲು ಭೋಪಾನ್‌ನಿಂದ ಬನಾರಸ್‌ಗೆ ಬಸ್ಸಿನಲ್ಹೋಗಿ ಇಳಿಯುತ್ತಿದ್ದಂತೆ ಸೈಕಲ್ ರಿಕ್ಷಾದವನು "ಆಯಿಯೇ ಆಯಿಯೇ" ಎನ್ನುತ್ತ ಕೈಯಲ್ಲಿದ್ದ ಸೂಟ್‌ಕೇಸನ್ನು ಕಿತ್ತುಕೊಂಡು ಬಿಟ್ಟ.

"ಏಯ್ ಚೋಡೋ ಬೈ, ಕ್ಯೂ ಹೈಸಾ ಕರತಾ ಹೈ" ಎಂದು ಜೋರಾಗಿ ಗದರಿಸಿದೆ. ಅವನು ಅಷ್ಟೆ ಜೋರಾಗಿ,

"ಕ್ಯೂ ನೈ ಕರ್ತಾ..? ಹಮ್ ಕರೇಂಗೆ, ಸಬ್ ಲೋಗ್ ಬಸ್‌ಮೇ ಚಲೆಜಯಾಂಗೇ ತುಃ ಹಮ್ ಲೋಗ್ ಕ್ಯಾ ಕರೇಂಗೇ" ಎಂದು ದಬಾಯಿಸಿದ. ಬೆಪ್ಪಾದ ನಾನು, ಅವನ ಕೈಯಿಂದ ಸೂಟುಕೇಸನ್ನು ಜೋರಾಗಿ ಕಿತ್ತುಕೊಂಡೆ. ಸೂಟುಕೇಸನ್ನೇನೋ ಬಿಟ್ಟು ಬಿಟ್ಟ. ಆದರೆ ನನ್ನ ಕಡೆಗೆ ನೋಡುತ್ತಲೇ ಬೈಯ್ಯತೊಡಗಿದ. ಸುತ್ತಲಿದ್ದವರು ಯಾರೂ ಮಾತನಾಡಲಿಲ್ಲ. ಇದು ಯಾವ ಗ್ರಹಚಾರ ಎಂದುಕೊಂಡು ರೈಲ್ವೆ ನಿಲ್ದಾಣದ ಕಡೆಗೆ ಬಿರಬಿರನೆ ನಡೆದುಬಿಟ್ಟೆ.

ಗಂಗಾ-ಕಾವೇರಿ ಎಕ್ಸ್‌ಪ್ರೆಸ್ ಕೌಂಟರ್ ಮುಂದೆ ಟಿಕೆಟ್ ಕೊಳ್ಳಲು ಸಾಲಿನಲ್ಲಿ ನಿಂತುಕೊಂಡೆ. ಉದ್ದವಾದ ವರಾಂಡದಲ್ಲಿ ಸಣ್ಣ ಸಣ್ಣ ಕಿಟಕಿಗಳಿರುವ ಕೌಂಟರ್‌ಗಳ ಮುಂದೆ ಸಾಲುಸಾಲಾಗಿ ಜನ ನಿಂತಿದ್ದಾರೆ. ಮಧ್ಯದಲ್ಲಿ ಇನ್ನಷ್ಟು ಜನ ತಮ್ಮ ಸಾಮಾನು ಸರಂಜಾಮುಗಳ ಜೊತೆ ಇಷ್ಟ ಬಂದಂತೆ ಕುಳಿತಿದ್ದಾರೆ. ಹೆಚ್ಚು ಜನ ಯಾವ ಸಂಕೋಚವೂ ಇಲ್ಲದೆ ತುಃ .. ತುಃ .. ಎಂದು ಪಾನ್ ಎಂಜಲನ್ನು ಉಗಿಯುತ್ತಿದ್ದಾರೆ. ಸಾಲದ್ದಕ್ಕೆ ನಿಂತಿರುವ ಸಾಲುಗಳ ಮಧ್ಯೆ ಕೌಂಟರ್‌ಗಳಿದ್ದ ಗೋಡೆಗೆ ಉಗಿದು ಬರುತ್ತಿದ್ದಾರೆ. ಉಗಿದ ಎಂಜಲು ಗೋಡೆಯಿಂದ ಹಿಂದಕ್ಕೆ ಕಾಲುವೆಗಳಂತೆ ಹರಿಯುತ್ತಿವೆ.

ಪ್ರಾಣ ಬಿಗಿಹಿಡಿದು ನನ್ನ ಸರದಿ ಬರುವವರೆಗೂ ಕಾಯುತ್ತಾ ನಿಂತೆ. ಸರದಿ ಬಂದಿದ್ದೆ, ಕೌಂಟರ್ ಒಳಗಿದ್ದ ಗುಮಾಸ್ತ,

"ಬರ್ತ್ ಎಲ್ಲಾ ಮುಗಿದಿದೆ. ಟಿಕೆಟ್ ಮೇಲೆ ಇಪ್ಪತ್ತು ರೂಪಾಯಿಗಳು ಆಗುತ್ತದೆ" ಎಂದ. ದೊಡ್ಡ ಭಾಗ್ಯವೇ ಸಿಕ್ಕಿದಂತಾಗಿ ಒಂದು ಕ್ಷಣವೂ ಯೋಚಿಸದೆ ಕೊಡುತ್ತೇನೆ ಎಂದೆ.

ಟಿಕೆಟ್ ಏನೋ ಸಿಕ್ಕಿಬಿಟ್ಟಿತು. ಸಾಯಂಕಾಲ ಆರು ಗಂಟೆಯವರೆಗೂ ಸಮಯ

ಕಳೆಯುವುದಾದರೂ ಹೇಗೆ ? ಅಲ್ಲೇ ಒಂದು ಹೋಟೆಲಿನಲ್ಲಿ ಊಟ ಮಾಡಿ ಇಂಡಿಯಾ ಟುಡೇ ಪತ್ರಿಕೆಯನ್ನು ತೆಗೆದುಕೊಂಡು ನಿರೀಕ್ಷಕರ ಕೊಠಡಿಯಲ್ಲಿ ಕುಳಿತುಬಿಟ್ಟೆ.

ಸರಿಯಾದ ಸಮಯಕ್ಕೆ ಗಂಗಾ-ಕಾವೇರಿ ಎಕ್ಸ್‌ಪ್ರೆಸ್ ಬನಾರಸ್ ಬಿಟ್ಟು ಹೊರವಲಯದಲ್ಲಿ ಹೋಗುತ್ತಿದ್ದಂತೆ ಗಾಳಿ ತಣ್ಣಗೆ ಬೀಸುತ್ತಿದ್ದು, ಮನಸ್ಸು ತುಸು ಸಮಾಧಾನಗೊಂಡಿತು. ಆದರೂ ಬೆಳಿಗ್ಗೆ ನಡೆದ ಘಟನೆ ಇನ್ನೂ ಒಳಗೊಳಗೆ ಕೊರೆಯುತ್ತಲೇ ಇತ್ತು. ಇನ್ನು ಸುಶೀಲ ಮತ್ತು ಕ್ರಾಂತಿಯನ್ನು ಫೀಲ್ಡ್‌ಗೆ ಕರೆದುಕೊಂಡು ಬರುವುದರೊಳಗೆ ಯಾವು ಯಾವ ರೀತಿಯ ತೊಂದರೆಗಳನ್ನು ಅನುಭವಿಸಬೇಕೋ ಎಂದುಕೊಂಡೆ.

ರೈಲು ಪ್ರಯಾಣದಲ್ಲಿ ಬಹಳ ವಿಚಿತ್ರ ಸನ್ನಿವೇಶಗಳು ಮತ್ತು ವಿಚಿತ್ರ ಸ್ವಭಾವದ ವ್ಯಕ್ತಿಗಳು ಆಗಾಗ ಸಿಗುವುದುಂಟು. ಒಬ್ಬ ಒರಿಯಾ ಯುವಕ ನನ್ನ ಪಕ್ಕದಲ್ಲೇ ಕುಳಿತು ಬೆಂಗಳೂರಿಗೆ ಪ್ರಯಾಣ ಮಾಡುತ್ತಿದ್ದ. ಅವನು ಬೆಂಗಳೂರಿನಲ್ಲಿ ಕೆಲಸ ಮಾಡುತ್ತಿರುವುದಾಗಿ ತಿಳಿದ ಮೇಲೆ ನಾನು ಬೆಂಗಳೂರಿಗೆ ಯಾವಾಗ ವರ್ಗವಾಗಿ ಬರಬಹುದು ಎನ್ನುವ ಯೋಚನೆ ಅರೆಕ್ಷಣ ನನ್ನ ತಲೆಯಲ್ಲಿ ಮಿಂಚಿ ಮಾಯವಾಯಿತು.

ಮರುದಿನ ರಾತ್ರಿ ಎಂಟೂವರೆ ಗಂಟೆಗೆ ಗಂಗಾ. ಕಾವೇರಿ ಎಕ್ಸ್‌ಪ್ರೆಸ್ ಮದ್ರಾಸಿನ ರೈಲ್ವೇ ನಿಲ್ದಾಣ ತಲುಪಿ ಅಲ್ಲಿಂದ ಬೆಂಗಳೂರಿಗೆ ಬೇರೆ ರೈಲನ್ನು ಹಿಡಿಯಬೇಕಾಗಿತ್ತು. ಬೆಂಗಳೂರಿನವರೆಗೆ ಟಿಕೇಟ್ ಇದ್ದರೂ, ರಿಜರ್ವೇಶನ್ ಮಾತ್ರ ಇರಲಿಲ್ಲ. ಅಲ್ಲೇ ಪಕ್ಕದ ಪ್ಲಾಟ್‌ಫಾರ್ಮ್‌ನಲ್ಲಿ ಬೆಂಗಳೂರಿಗೆ ಹೊರಡುವ ರೈಲು ತಯಾರಾಗಿ ನಿಂತಿದೆ. ರಿಜರ್ವೇಶನ್ ಕೌಂಟರ್‌ನಲ್ಲಿ ವಿಚಾರಿಸಿದಾಗ ಬರ್ತ್‌ಗಳು ಖಾಲಿ ಇಲ್ಲ ಎಂಬ ಉತ್ತರ ಬಂತು.

ಪ್ಲಾಟ್‌ಫಾರ್ಮ್‌ನಲ್ಲೆ ರಿಜರ್ವೇಶನ್ ಪಟ್ಟಿ ಹಿಡಿದುಕೊಂಡು ಓಡಾಡುತ್ತಿದ್ದ ಒಬ್ಬ ಟಿ.ಸಿ.ಯನ್ನು ನಿಲ್ಲಿಸಿ ಬರ್ತ್‌ಗಳು ಖಾಲಿ ಇದ್ದರೆ ಕೊಡುವಂತೆ ಕೇಳಿಕೊಂಡೆ. ಅವನು ಎಲ್ಲಿ ಹೋದರು ಜನ ಜೇನು ನೊಣಗಳಂತೆ ಅವನ ಸುತ್ತಲು ಮುತ್ತಿಕೊಳ್ಳುತ್ತಿದ್ದಾರೆ. ಒಂದೆರೆಡು ನಿಮಿಷಗಳಾದ ಮೇಲೆ ಮತ್ತೆ ಇನ್ನಷ್ಟು ವಿನಯದಿಂದ ಅವನನ್ನೇ

"ವಾರಣಾಸಿಯಿಂದ ಬರುತ್ತಿದ್ದೇವೆ, ದಯವಿಟ್ಟು ಒಂದಾದರೂ ಬರ್ತ್ ಕೊಡಿ ಇಬ್ಬರೂ ಹಂಚಿಕೊಳ್ಳುತ್ತೇವೆ" ಎಂದೆ ತಮಿಳಿನಲ್ಲಿ.

"ವಾರಣಾಸಿಯಿಂದಾದರೂ ಬಾ ವಾಣಿಂಬಾಡಿಯಿಂದಾದರೂ ಬಾ.. ನನಗೇನು..? ಬರ್ತ್ ಇಲ್ಲ ಅಂದರೆ ಮುಗಿಯಿತು" ಎಂದು ಗದರಿದಂತೆ ಹೇಳಿದ.

ಇವನನ್ನು ಯಾಕಾದರೂ ಕೇಳಿದೆನೋ ಎನಿಸಿ ಅಲ್ಲೇ ನಿಂತುಬಿಟ್ಟೆ. ಒರಿಯಾ ಯುವಕ ನನ್ನ ಹಿಂದೆಯೇ ನಿಂತಿದ್ದಾನೆ. ಹಿಂದೆ ಇದ್ದ ಒಂದೇ ಒಂದು ಜನರಲ್ ಬೋಗಿಯನ್ನು ನೋಡಿ ದೂರವೇ ನಿಂತುಬಿಟ್ಟೆವು. ಆ ಜನ.. ಆ ನುಗ್ಗಾಟ.. ಭಯ ಹುಟ್ಟಿಸುವಂತಿತ್ತು.

ಈಗೇನು ಮಾಡಬೇಕು, ಒಂದೂ ಅರ್ಥವಾಗಲಿಲ್ಲ. ಇನ್ನೇನು ರೈಲು ಹೊರಟೇ ಬಿಟ್ಟಿತು ಎನ್ನುವಾಗ ಒಂದು ರಿಸರ್ವೇಶನ್ ಬೋಗಿಯಲ್ಲಿ ಹತ್ತಿಯೇ ಬಿಟ್ಟೆವು.

ಆ ಬೋಗಿಯಲ್ಲಿ ಅಷ್ಟೇನು ಜನ ಇರಲಿಲ್ಲ. ಮಧ್ಯದಲ್ಲಿ ಒಂದು ಕಡೆ ಮಧ್ಯ ವಯಸ್ಸಿನ ತೆಳುವಾದ ಟಿ.ಸಿ. ಕುಳಿತಿದ್ದಾನೆ. ಒರಿಯಾ ಯುವಕ,

"ನೋಡಿ ಇದೇ ಸಮಯ ನಿಮಗೆ ತಮಿಳು ಬೇರೆ ಬರುತ್ತದೆ ಕೇಳಿಬಿಡಿ" ಎಂದು ಸ್ವಲ್ಪ ಪಂಪ್ ಹೊಡೆದ. ಅವನು ಹೇಳುವುದು ಸರಿಯೇ. ಧೈರ್ಯಮಾಡಿ ಹತ್ತಿರಹೋಗಿ ವಿಷಯ ತಿಳಿಸಿ ಮೃದುವಾಗಿ ಹಣ ಬೇಕಾದರೆ ಸ್ವಲ್ಪ ಕೊಟ್ಟು ಬಿಡುತ್ತೇನೆ ಎಂದೆ.

ಸ್ವಲ್ಪ ಹೊತ್ತು ಸುಮ್ಮನೆ ದುರುಗುಟ್ಟಿ ನೋಡಿದ

"ಹಣ ಕೊಡ್ತೀಯ ನನಗೆ, ಅಂದರೆ ಲಂಚ ಬಾ".. ಎಂದು ಬಾಗಿಲವರೆಗೂ ಇಬ್ಬರನ್ನೂ ಕರೆದುಕೊಂಡು ಬಂದು, ನೋಡಿ ರೈಲು ವೇಗವಾಗಿ ಓಡುತ್ತಿದೆ, ಸಧ್ಯಕ್ಕೆ ಇಲ್ಲೇ ನಿಂತಿರಿ, ಮುಂದಿನ ನಿಲ್ದಾಣ ಬಂದ ತಕ್ಷಣ ಇಳಿದು ಬಿಡಿ, ಇನ್ನೇನು ಮಾತನಾಡಬೇಡಿ ಎಂದು ಗಂಭೀರ ಎಚ್ಚರಿಕೆ ನೀಡಿ ಹೊರಟು ಹೋದ. ಆ ಟಿಸಿ.ಗೆ ಬಹುಶಃ ಲೋ ಬಿ.ಪಿ. ಜೊತೆಗೆ ಗೂರಲು ರೋಗ ಇರಬಹುದು.. ಸಧ್ಯಕ್ಕೆ ಹೊರಕ್ಕೆ ದಬ್ಬದೆ ಬಿಟ್ಟನಲ್ಲ ಎಂದು ಕಾಟ್‌ಪಾಡಿ ನಿಲ್ದಾಣದವರೆಗೂ ಶೌಚಾಲಯದ ಹತ್ತಿರವೇ ನಿಂತುಕೊಂಡಿದ್ದೆವು.

ಕಾಟ್‌ಪಾಡಿ ಹತ್ತಿರ ಬರುತ್ತಿದ್ದಂತೆ ರೈಲಿನ ವೇಗ ಕಡಿಮೆಯಾಗುತ್ತಿದ್ದು, ಟಿ.ಸಿ. ನಮ್ಮ ಹತ್ತಿರಕ್ಕೆ ನಿಧಾನವಾಗಿ ಬಂದು,

"ನಿಲ್ದಾಣ ಬರ್‍ತಾ ಇದೆ ತಯಾರಾಗಿ" ಎಂದು ಎಚ್ಚರಿಕೆ ನೀಡಿ ರೈಲು ನಿಂತಿದ್ದೆ ನಿಮ್ಮಿಬ್ಬರನ್ನು ಬೋಗಿಯಿಂದ ಹೊರಕ್ಕೆ ದಬ್ಬಿ, ಬಾಗಿಲು ಜಡಿದುಬಿಟ್ಟ. ಅಲ್ಲಿಂದ ಕತ್ತಲಲ್ಲಿ ಒಂದೇ ಓಟದಲ್ಲಿ ಹಿಂದಿದ್ದ ಜನರಲ್ ಬೋಗಿಯ ಕಡೆಗೆ ಎದ್ದುಬಿದ್ದು ಓಡತೊಡಗಿದೆವು. ಇಳಿಯುತ್ತಿದ್ದವರು ಇಳಿಯದೆ, ಹತ್ತುತ್ತಿದ್ದವರು ಹತ್ತದೆ, ಇಬ್ಬರ ಮಧ್ಯೆ ಒಂದು ದೊಡ್ಡ ಯುದ್ಧವೆ ನಡೆಯುತ್ತಿತ್ತು. ನಾವು ಬಾಗಿಲು ಹತ್ತಿರ ಹತ್ತಿರ ಹೋದಂತೆ ರೈಲು ಚಲಿಸತೊಡಗಿತು. ನಮ್ಮ ಜೊತೆ ಇನ್ನಷ್ಟು ಜನ ಹತ್ತಲಾಗದೆ ಉಳಿದುಕೊಂಡರು.

"ಈ ಸೂಳೆ ಮಕ್ಕಳಿಗೆ ಇನ್ನೊಂದೆರಡು ಪಬ್ಬಿಗಳ್ನಾಕಿದ್ದಿದ್ದರೆ ಏನಾಗ್ತಾ ಇತ್ತೋ ಏನೋ.. ತೂ" ಎಂದು ಉಗಿದ ಒಂದು ಹೆಂಗಸು ರೈಲ್ವೇಯವರನ್ನು ಪೂರ್ತಿ ತರಾಟೆಗೆ ತೆಗೆದುಕೊಂಡಳು, ಮಧ್ಯರಾತ್ರಿ ಅದೂ ತಮಿಳಿನಲ್ಲಿ.

ನಿಲ್ದಾಣವೆಲ್ಲ ನಾಯಿಗಳಂತೆ ಅಲೆದಾಡಿದ ನಾವು ಬೆಳಗಿನ ಜಾವ ಕಾಟ್‌ಪಾಡಿ .. ಜ್ವಾಲಾರಪೇಟೆಯ ಪ್ಯಾಸೆಂಜರ್ ರೈಲು ಹಿಡಿದು ಜ್ವಾಲಾರಪೇಟೆಗೆ ಬಂದು, ಅಲ್ಲಿಂದ ಇನ್ನೊಂದು ರೈಲು ಹಿಡಿದು ಬಂಗಾರಪೇಟೆಗೆ ಬಂದು ಕೆಜಿಎಫ್ ಸೇರಿಕೊಳ್ಳುವುದರಲ್ಲಿ ಸೂರ್ಯ ಇನ್ನೊಂದು ದಿನದ ಅಂತ್ಯವನ್ನು ಸಾರುತ್ತಿದ್ದ.

ಕೆಜಿಎಫ್ ಮತ್ತು ಸುತ್ತಮುತ್ತಲು ಹಳ್ಳಿಗಳಲ್ಲಿ ನಾನೂ, ಸುಶೀಲ ಮತ್ತು ಕ್ರಾಂತಿ ಆತುರಾತುರವಾಗಿ ಕೆಲವು ದಿನಗಳನ್ನು ಕಳೆದು ಮದ್ರಾಸಿನಿಂದ ಮತ್ತೆ ವಾರಣಾಸಿ ಕಡೆಗೆ ಪ್ರಯಾಣ ಮಾಡಿದೆವು. ಮದ್ರಾಸ್ ಬಿಟ್ಟ ರೈಲು ಗುಂಟೂರು, ನೆಲ್ಲೂರು, ಒಂಗೋಲ್, ವಿಜಯವಾಡ, ವಾರಂಗಲ್, ಸಿರ್‌ಪುರ್ ಕಾಗಜ್‌ನಗರ್, ಚಂದ್ರಾಪುರ, ವಾರ್ಧಾ ಮತ್ತು ನಾಗಪುರ ದಾಟಿ ಮಧ್ಯಪ್ರದೇಶದಲ್ಲಿ ಸಾಗುತ್ತಿತ್ತು. ಮಹಾರಾಷ್ಟ್ರದ ಗಡಿಯವರೆಗೂ ವೇಗವಾಗಿ ಓಡುತ್ತಿದ್ದ ರೈಲು ಮಧ್ಯಪ್ರದೇಶ ತಲುಪಿದ್ದೇ ರೈಲು ಗಾಡಿ, ಎತ್ತಿನ ಗಾಡಿಯಾಗಿ ರಿಜರ್ವೇಶನ್ ಬೋಗಿಗಳು ಜನರಲ್ ಬೋಗಿಗಳಾಗಿ ಮಾರ್ಪಟ್ಟಿದ್ದವು. ಮದ್ರಾಸಿನಿಂದ ನಿದ್ರೆ ಮಾಡಿಕೊಂಡು ಬರುತ್ತಿದ್ದ ಪ್ರಯಾಣಿಕರನ್ನು ಸ್ಥಳೀಯರು,

"ರಾತ್ರಿ ಮಾತ್ರ ರಿಜರ್ವೇಶನ್ ದಿನದಲ್ಲಲ್ಲ, ಎದ್ದು ಕುಳಿತುಕೊಳ್ಳಿ" ಎಂದು ಎಬ್ಬಿಸಿ ಪಕ್ಕಕ್ಕೆ ತಳ್ಳಿ ಕುಳಿತುಕೊಳ್ಳುತ್ತಿದ್ದರು. ವಿಧಿ ಇಲ್ಲದೆ ಪ್ರಯಾಣಿಕರು ಗೊಣಗುತ್ತಾ ವಾರಣಾಸಿ ಬರುವುದನ್ನೇ ಕಾಯುತ್ತಿದ್ದರು. ಅಂತು ರಾತ್ರಿ ಹತ್ತು ಗಂಟೆಗೆ ವಾರಣಾಸಿ ಬಂದಿತು.

ದೀರ್ಘನಿದ್ದೆಯಲ್ಲಿದ್ದ ಕ್ರಾಂತಿಯನ್ನು ಎಬ್ಬಿಸಿ ಹೆಗಲ ಮೇಲೆ ಹಾಕಿಕೊಂಡು ಸಮಾನುಗಳ ಜೊತೆ ಹೊರಕ್ಕೆ ಬಂದಾಗ ಸೈಕಲ್ ರಿಕ್ಷಾದವರು ಮಾಮೂಲಿಯಾಗಿಯೇ ಹಿಂದೆ ಬಿದ್ದಿದ್ದರು. ಗಾಳಿ ಅದಷ್ಟು ಥಂಡಿಯಾಗಿಯೇ ಬೀಸುತ್ತಿತ್ತು. ಸೈಕಲ್ ರಿಕ್ಷಾದಲ್ಲಿ ಕುಳಿತುಕೊಂಡು ರಿಕ್ಷಾದವನಿಗೆ ಹತ್ತಿರ ಇರುವ ಯಾವುದಾದರೂ ಒಳ್ಳೆ ಹೋಟೆಲಿಗೆ ನಡಿ ಎಂದೆ. ಸೈಕಲ್ ರಿಕ್ಷಾದವನು ಸ್ವಲ್ಪ ದೂರದವರೆಗೂ ಮುಖ್ಯ ರಸ್ತೆಯಲ್ಲೇ ಹೋಗುತ್ತಿದ್ದು, ಇದ್ದಕ್ಕಿದ್ದಂತೆ ಒಂದು ಸಣ್ಣ ಗಲ್ಲಿ ಒಳಕ್ಕೆ ನುಸುಳಿಕೊಂಡ. ವಾರಣಾಸಿಯ ಕಥೆಗಳನ್ನು ಕೇಳಿದ್ದ ನಾನು ಸೈಕಲ್ ರಿಕ್ಷಾದವನನ್ನು ನಿಲ್ಲಿಸುವಂತೆ ಹೇಳಿದರೂ, ಕೇಳಿಸದವನಂತೆ ಹೋಗುತ್ತಲೇ ಇದ್ದ. ಸುಶೀಲ ಆಗಲೇ ಭೀತಿಯಿಂದ ಏನೇನೋ ಬಡಬಡಿಸುತ್ತಿದ್ದಳು. ಹಿಂದಿನಿಂದ ಅವನನ್ನು ಹಿಡಿದುಕೊಂಡು ನಿಲ್ಲುವಂತೆ ಹೇಳಿದೆ. ನಿಂತುಕೊಂಡ.

"ಎಲ್ಲಿಗೆ ಹೋಗುತ್ತಿದ್ದೀಯಾ..? ಯಾವುದಾದರೂ ಒಳ್ಳೆ ಹೋಟೆಲಿಗೆ ಕರೆದುಕೊಂಡ್ಹೋಗು ಅಂದರೆ ಎಲ್ಲೋ ಗಲ್ಲಿ ಒಳಕ್ಕೆ ಕರೆದುಕೊಂಡು ಹೋಗುತ್ತಿದ್ದೀಯಲ್ಲ?" ಎಂದೆ. ಒಲ್ಲದ ಮನಸ್ಸಿನಿಂದ ರಿಕ್ಷಾ ಹಿಂದಕ್ಕೆ ತಿರುಗಿಸಿಕೊಂಡ. ಆಗಲೇ ರಾತ್ರಿ ಹತ್ತೂವರೆ ಗಂಟೆ ಆಗಿದ್ದು, ಜನಗಳ ಓಡಾಟ ತೀರ ಕಡಿಮೆಯಾಗಿ ಗಲ್ಲಿಗಳೆಲ್ಲಾ ಚಳಿಗೆ ನಿದ್ದೆ ಮಾಡುತ್ತಿದ್ದವು.

ಸೈಕಲ್ ರಿಕ್ಷಾ ಮುಖ್ಯ ರಸ್ತೆಗೆ ಬಂದಿದ್ದೆ ವಾಹನಗಳ ಓಡಾಟ ಮತ್ತು ನಿಯಾನ್ ದೀಪಗಳ ಬೆಳಕಿನಿಂದ ಸ್ವಲ್ಪ ಧೈರ್ಯ ಬಂದು ಹಾಗೆ ಮುಂದಕ್ಕೆ ಹೋಗುವಂತೆ ಹೇಳಿದೆ. ಸೈಕಲ್ ರಿಕ್ಷಾ ಮುಖ್ಯ ರಸ್ತೆಯಲ್ಲೇ ಹೋಗುತ್ತಿದ್ದು ಬಲಗಡೆ ಒಂದು ದೊಡ್ಡ ಹೋಟೆಲ್ ಕಾಣಿಸಿದ್ದೇ ಒಳಕ್ಕೆ ಹೋಗುವಂತೆ ಹೇಳಿದೆ. ರಾತ್ರಿ ಅಲ್ಲಿ ತಂಗಿದ್ದು ಮರುದಿನ ಅಲ್ಲಿಂದ ಸೈಕಲ್ ರಿಕ್ಷಾ ಹಿಡಿದುಕೊಂಡು ಸ್ವಲ್ಪ ದೂರವಿದ್ದ ಬಸ್ಸು ನಿಲ್ದಾಣಕ್ಕೆ ಬಂದು ಭೋಪಾಲ್ ಕಡೆಗೆ ಹೊರಡುವ ಬಸ್ಸಿಗಾಗಿ ಕಾಯತೊಡಗಿದೆವು. ಬಿಸಿಲು ಹಗುರವಾಗಿ ಏರುತ್ತಿತ್ತು. ಸುಮಾರು ಅರ್ಧಗಂಟೆ ಕಾದ ಮೇಲೆ ಬಸ್ಸು ಬಂದಿದ್ದು, ಬನಾರಸ್‌ನಿಂದ ಭೋಪಾಲ್ ಕಡೆಗೆ ನಮ್ಮ ಬಸ್ಸು ಪ್ರಯಾಣ ಪ್ರಾರಂಭವಾಯಿತು.

ಬಸ್ಸು ಧೂಳು ಮತ್ತು ಹೊಲಸಾದ ರಸ್ತೆಗಳಲ್ಲಿ ಗಿಜಿಗಿಡುವ ಜನಗಳನ್ನು ಹಿಂದಕ್ಕೆ ಹಾಕುತ್ತಾ ವಾರಣಾಸಿ ನಗರದ ಮಧ್ಯೆ ಹರಿಯುವ ಗಂಗಾನದಿಯ ಹತ್ತಿರಕ್ಕೆ ಬಂದಿತು. ಬಹಳ ಮಜುಭೂತಾದ ಉಕ್ಕು ಸೇತುವೆ ಮೇಲೆ ಬಸ್ಸು ದಡ್... ದಡ್.. ದಡ್ ಎಂದು ಸದ್ದು ಮಾಡುತ್ತಾ ಸಾಗುತ್ತಿದೆ. ಕೆಳಗೆ ಗಂಗಾನದಿ ನಗರದ ಎಲ್ಲಾ ಕಲ್ಮಶವನ್ನು ಹೊತ್ತು ಸಾಗುತ್ತಿರುವ ಒಂದು ದೊಡ್ಡ ಗಟಾರಿನಂತೆ ಕಾಣುತ್ತಿದ್ದು, ಸಾಲದ್ದಕ್ಕೆ ಎರಡು ದಡಗಳಲ್ಲೂ ಜನ ಗುಂಪು ಗುಂಪಾಗಿ ಗಟಾರಿಗೆ ಇನ್ನಷ್ಟು ತಮ್ಮ ಹೊಲಸನ್ನು ತುಂಬಿಸುತ್ತಿದ್ದಾರೆ. ಇದು ಪವಿತ್ರ ಗಂಗಾನದಿಯ ಎನ್ನುವ ಗುಮಾನಿ ಎದ್ದಿತು.

"ಇದೇನ್ರೀ ಗಂಗಾ ನದಿ ಇಷ್ಟು ಚಿಕ್ಕದಾಗಿದೆ.. ?" ಪಕ್ಕದಿಂದ ಸುಶೀಲಳ ಪ್ರಶ್ನೆ ಬೇರೆ. ಅಷ್ಟರಲ್ಲಿ ಬಸ್ಸಿನೊಳಗಿಂದ ಪುಡಿಕಾಸುಗಳು ಟಣಕ್.. ಟಣಕ್.. ಎಂದು ಉಕ್ಕು, ಸೇತುವೆಯ ಮೇಲೆ ಬೀಳುತ್ತಿದ್ದು, ಕೆಲವು ಜನ

"ಗಂಗಾಮಯಿ ಗಂಗಾಮಯಿ.." ಎನ್ನುತ್ತ ಕೆನ್ನೆಗಳಿಗೆ ಹೊಡೆದುಕೊಳ್ಳುತ್ತಿದ್ದರು. ಸುಶೀಲ ಪರ್ಸ್‌ನಲ್ಲಿ ಹುಡುಕಾಡಿ ಪುಡಿಕಾಸುಗಳನ್ನು ಎಸೆಯುವುದರೊಳಗೆ ಬಸ್ಸು ಸೇತುವೆ ದಾಟಿ ಹೊರಕ್ಕೆ ಬಂದಿತ್ತು. ಆದರೂ ಕೈಚಾಚಿ ಹಿಂದಕ್ಕೆ ಬಿಸಾಡಿದಳು.

ಗೋಧಿ, ಭತ್ತ, ಸಾಸುವೆ, ಕಬ್ಬು, ತೊಗರಿ, ಮುಂತಾದ ಬೆಳೆಗಳು ಎರಡೂ ಕಡೆಯೂ ಬಸ್ಸಿನ ಜೊತೆಯೇ ಸಾಗಿ ಬರುತ್ತಿವೆ.

"ಇನ್ನೂ ಎಷ್ಟು ದೂರಾರೀ?" ಸುಶೀಲ ಪ್ರಶ್ನಿಸಿದಳು.

"ಅರೇ ಇದೇನು ಪ್ರಶ್ನೆ .. ? ಇನ್ನೂ ಪ್ರಯಾಣ ಶುರು ಆಗಿಯೇ ಇಲ್ಲ, ಆಗಲೆ ರಾಗ ಶುರು ಮಾಡಿ ಬಿಟ್ಟೆಯಲ್ಲ...?" ಎಂದೆ.

"ನನಗೇಕೋ ಒಂದು ತರಹ ಆಗುತ್ತಿದೆ" ಎಂದಳು.?,

"ಅಂದರೆ ಭಯಾನೆ..?" ಕೇಳಿದೆ.

"ಹೌದು, ಅಲ್ಲ ಅದು ಹೇಳುವುದಕ್ಕೆ ಆಗುತ್ತಿಲ್ಲ. ಅಲ್ಲಿ ಯಾರ್‍ಯಾರಿದ್ದಾರೆ..?" ಕೇಳಿದಳು.

"ಯಾರ್‍ಯಾರಿರುತ್ತಾರೆ.. ಇಬ್ಬರು ಕೆಲಸಗಾರರಿದ್ದಾರೆ"

"ಸುತ್ತಲು ಮನೆಗಳಿವೆಯೆ..?" ಮತ್ತೆ ಕೇಳಿದಳು.

"ಇವೆ, ಸ್ವಲ್ಪ ದೂರದಲ್ಲಿ"

"ಟಿವಿ."? ಟಿವಿ ಇದೆ ಒಬ್ಬ ಡಾಕ್ಟರ್ ಮನೆಯಲ್ಲಿ,"

"ಆ ಮನೆಯಲ್ಲಿ ಹೆಂಗಸರಿದ್ದಾರೆಯೆ ?"

"ಇದ್ದಾರೆ"

"ಅವರೆಲ್ಲ ಕೆಂಪಾಗಿರುತ್ತಾರೆ, ನಾನ್ಯಾಕೆ ಇಷ್ಟು ಕಪ್ಪಾಗಿ ಹುಟ್ಟಿದೆನೋ" ವಿಷಾದವಾಗಿ ಹೇಳಿ ಸುಮ್ಮನಾದಳು.

ಕ್ರಾಂತಿ ಆ ಕಡೆ ಈ ಕಡೆ ನೋಡುತ್ತಾ ಆಡಿಕೊಳ್ಳುತ್ತಿದ್ದಾನೆ.

"ನೀನೊಂದು ಒಳ್ಳೆ ಕೆಲಸ ಮಾಡಿದ್ದೇಂದರೆ ಹೆಣ್ಣು ಮಗುವಿಗೆ ಜನ್ಮ ನೀಡದೆ ಗಂಡು ಮಗುವಿಗೆ ಜನ್ಮ ನೀಡಿದ್ದು", ಅಣಕಿಸುವಂತೆ ಹೇಳಿದೆ.

"ಅವನಗೇನ್ರಿ ಗಂಡು ಮಗು" ಎನ್ನುತ್ತಾ ತನ್ನ ಕೈಗಳ ಕಡೆಗೊಮ್ಮೆ ನೋಡುತ್ತಾ

"ನಾನು ನಿಮ್ಮಷ್ಟಾದರೂ ಬಣ್ಣ ಇರಬಾರದೆ"? ಹೋಗಲಿ ಬಿಡಿ, ಕಪ್ಪಾಗಿದ್ದರೂ

ಸುಂದರವಾಗೇ ಇದ್ದೀನಿ ತನಗೆ ತಾನೇ ಸರ್ಟಿಫಿಕೇಟ್ ಕೊಟ್ಟುಕೊಂಡಳು.

ಬಸ್ಸು ಸಣ್ಣ ಪುಟ್ಟ ಹಳ್ಳಿಗಳನ್ನು ದಾಟುತ್ತಾ ವಿಂಧ್ಯಾಚಲ ಬೆಟ್ಟಗಳ ಮಧ್ಯೆ ನುಸುಳುತ್ತ ಅಂಕುಡೊಂಕು ತಿರುವುಗಳಲ್ಲಿ ಏರಿ ಇಳಿಯುತ್ತಾ ಸಾಗುತ್ತಿದೆ. ಕೊನೆಗೆ ಎತ್ತರವಾದ ವಿಶಾಲವಾದ ದಿಬ್ಬದ ಮೇಲೆ ಸಾಗಿ ರಾಬರ್ಟ್‌ಗಂಜ್ ಟೌನ್ ದಾಟಿ, ಸೋನ್ ನದಿಯ ಬಯಲಿಗೆ ನಿಧಾನವಾಗಿ ಇಳಿಯುತ್ತಿದೆ. ಸುತ್ತಲೂ ಛಾವಣಿಯಂತೆ ಎತ್ತರವಾದ ಜಲಜ ಶಿಲೆಗಳ ತಪ್ಪಲುಗಳು. ನಡುವೆ ಜೋಗುಣಿಯಂತಹ ವಿಶಾಲವಾದ ಬಯಲು.

ಪಶ್ಚಿಮದಿಂದ ಪೂರ್ವಕ್ಕೆ ಸರಾಗವಾಗಿ ಹರಿಯುತ್ತಿರುವ ಸೋನ್ ನದಿ ಎರಡು ತಪ್ಪಲುಗಳ ನಡುವೆ ಸಣ್ಣದಾಗಿ, ಮುಂದಕ್ಕೆ ಹರಿಯುತ್ತದೆ. ಅಲ್ಲಿ ಒಂದು ಅಣೆಕಟ್ಟು ಕಟ್ಟಿದರೆ ನೂರಾರು ಎಕರೆಗಳಿಗೆ ನೀರುಣಿಸಬಹುದಾದ ಪ್ರದೇಶ ಅದಾಗಿತ್ತು.

ಅಲ್ಲಿಂದ ಕೆಳಕ್ಕೆ ಅದೊಂದು ಸೊಗಸಾದ ನೋಟ. ಬಸ್ಸು ತಪ್ಪಲುಗಳಿಂದ ಇಳಿದು ಸೋನ್ ನದಿಯ ಸೇತುವೆ ದಾಟಿ ನದಿಯ ಬಲ ದಂಡೆಯಲ್ಲಿದ್ದ ಛೋಪಾನ್‌ನ ಸಣ್ಣ ಬಸ್ ನಿಲ್ದಾಣದಲ್ಲಿ ನಿಂತುಕೊಂಡಿತು. ಬಸ್ಸು ಇಳಿದಿದ್ದೆ, ಆಟೋದಲ್ಲಿ ಕುಳಿತುಕೊಂಡು ಶಿಬಿರದ ಕಡೆಗೆ ಹೋಗುವಂತೆ ಹೇಳಿದೆ. ಮೂರೇ ನಿಮಿಷಗಳಲ್ಲಿ ಆಟೋ ನಮ್ಮ ಕ್ಯಾಂಪ್ ಮುಂದೆ ನಿಂತಿತ್ತು. ಆಟೋದವನಿಗೆ ಹಣ ಕೊಡುವುದರೊಳಗೆ ದೇವಮಣಿ ಮತ್ತು ಸಂಕಟ ಓಡಿಬಂದು

"ನಮಸ್ತೆ ಸಾಬ್, ನಮಸ್ತೆ ಮೇಮ್‌ಸಾಬ್, ಎಂದು ಕೈ ಮುಗಿದು ಸಾಮಾನಗಳನ್ನು ಒಳಕ್ಕೆ ಕೊಂಡೊಯ್ದರು.

ಸಾಯಂಕಾಲ ದಿನಸಿ ಪಟ್ಟಿಯ ಸಮೇತ ಒಂದು ದೊಡ್ಡ ಅಂಗಡಿಯ ಮುಂದೆ ಹಾಜರಾದೆವು. ಸಾಮಾನುಗಳನ್ನು ತೆಗೆದುಕೊಳ್ಳುವಾಗ ಅಂಗಡಿಯವನು ದಕ್ಷಿಣ ಭಾರತದ ಬಗ್ಗೆ ಅದೂ ಬೆಂಗಳೂರಿನ ಬಗ್ಗೆ ಕೇಳಿ ಕೇಳಿ ತಿಳಿದುಕೊಂಡ. ನಂತರ ಪಕ್ಕದಲ್ಲಿದ್ದ ಮನೆಗೆ ಆಹ್ವಾನಿಸಿದ. ನನಗೇನು ಅಭ್ಯಂತರವಿರಲಿಲ್ಲ, ಆದರೆ ಸುಶೀಲ ಮಾತ್ರ ಒಪ್ಪಲಿಲ್ಲ.

ಅವನ ಮನಸ್ಸಿಗೆ ನೋವಾಗಬಾರದು ಎಂದು,

"ನಾವು ಈ ದಿನವೆ ಬಂದಿದ್ದೇವೆ, ಇನ್ನೊಮ್ಮೆ ವಿರಾಮ ಮಾಡಿಕೊಂಡು ಖಂಡಿತ ಬರುತ್ತೇವೆ" ಎಂದು ಹೇಳಿ ತಪ್ಪಿಸಿಕೊಂಡೆವು. ಸಾಮಾನುಗಳನ್ನು ಸಂಕಟ ಜೀಪಿನಲ್ಲಿ ಇಡುತ್ತಿದ್ದಂತೆ ಅಂಗಡಿಯವನು ಒಂದು ದೊಡ್ಡ ಪ್ಲಾಸ್ಟಿಕ್ ಚೀಲವನ್ನು ತಂದು,

"ಇವು ಹೋಳಿ ಹಬ್ಬದ ಸಿಹಿತಿಂಡಿಗಳು, ತೆಗೆದುಕೊಳ್ಳಿ" ಎಂದ. ನಾವು ಬೇಡವೆಂದರೂ ಬಿಡಲಿಲ್ಲ. ತೆಗದುಕೊಂಡೆವು.

ಅಲ್ಲಿಂದ ನೇರವಾಗಿ ಕ್ಯಾಂಪಿಗೆ ಬಂದು ಸಾಮಾನುಗಳನ್ನೆಲ್ಲ ಇಳಿಸಿ ಅಡಿಗೆ ಮಾಡಿ ರಾತ್ರಿ ಎಂಟೂವರೆ ಗಂಟೆಗೆಲ್ಲ ಊಟ ಮಾಡಿ ಮಲಗಿಬಿಟ್ಟೆವು. ಎರಡು ದಿನಗಳಾದ ಮೇಲೆ ಫೀಲ್ಡ್ ಕೆಲಸ ಶುರುವಾಯಿತು.

ಸಾಯಂಕಾಲ ಏನು ಕೆಲಸವಿಲ್ಲದೆ ಬೋರ್ ಹೊಡೆಯುತ್ತಿತ್ತು. "ಛೋಪಾನ್" ಸುಮಾರು ದೊಡ್ಡ ಹಳ್ಳಿಯೇ ಆದರೂ ಒಂದು ಸಿನಿಮಾ ಟೆಂಟ್ ಕೂಡ ಇರಲಿಲ್ಲ. ಹತ್ತಿರದ "ರಾಬರ್ಟ್ ಗಂಜ್" ಮತ್ತು ಸಿಮೆಂಟ್ ಕಾರ್ಖಾನೆಗಳಿದ್ದ "ದೂದಿ" ಯಲ್ಲಿ ಒಂದೊಂದು ಸಿನಿಮಾ ಮನೆಗಳಿದ್ದವು. ದಕ್ಷಿಣದವರಿಗೆ ಹೋಲಿಸಿದರೆ ಉತ್ತರದವರು ಸಿನಿಮಾಗಳನ್ನು ಬಹಳ ಕಡಿಮೆ ನೋಡುತ್ತಾರೆ. ಅದೇ ಛೋಪಾನ್ ಅಷ್ಟು ದೊಡ್ಡ ಹಳ್ಳಿಯಾದರೆ ದಕ್ಷಿಣದಲ್ಲಿ ಕಡಿಮೆ ಎಂದರೂ ಎರಡು ಸಿನಿಮಾ ಟಾಕೀಸುಗಳಾದರೂ ಇರುತ್ತಿದ್ದವು.

ಒಂದು ದಿನ ಸಾಯಂಕಾಲ ಹತ್ತಿರವೆ ಇದ್ದ ಡಾ. ದಶರತ್‌ಸಿಂಗ್ ಅವರ ಮನೆಗೆ ಧಾಳಿ ಮಾಡಿದೆವು. ಡಾ. ಸಿಂಗ್ ಅವರು ನಮ್ಮನ್ನು ಆದರದಿಂದ ಬರಮಾಡಿಕೊಂಡಿದ್ದಲ್ಲದೆ, ಸುಶೀಲಳನ್ನು ಒಳಕ್ಕೆ ಕರೆದುಕೊಂಡು ಹೋಗಿ ಹೆಂಗಸರಿಗೆ ಪರಿಚಯಿಸಿ ಬಂದರು. ಸುಮಾರು ಹೊತ್ತು ಮಾತುಕತೆಯ ಜೊತೆಗೆ ಚಹ ತಿಂಡಿಗಳಾದ ಮೇಲೆ ಡಾ. ಸಿಂಗ್.,

"ಈ ರಾತ್ರಿ ಹತ್ತಿರದ ಜುಂಗೇಲ್ ಹಳ್ಳಿಯಲ್ಲಿ ನಸ್‌ಬಂದಿ ಕ್ಯಾಂಪಿರುವುದರಿಂದ ನಾನು ಹೋಗಬೇಕಾಗಿದೆ" ಎಂದು ಎದ್ದು ನಿಂತರು.

ಕ್ರಾಂತಿಗೆ ಅವನ ವಯಸ್ಸಿನ ಇಬ್ಬರು ಮಕ್ಕಳು ಜೊತೆ ಸಿಕ್ಕಿದ್ದರಿಂದ ಎಲ್ಲವನ್ನೂ ಮರೆತು ಅವರ ಜೊತೆ ಆಡಿಕೊಳ್ಳುತ್ತಿದ್ದ. ಬರುವಾಗ ಅಮ್‌ಚೂರ್‌ನ (ಮಾವಿನ) ಅಚಾರ್ ಮತ್ತು ಕೆಲವು ಸಿಹಿ ತಿಂಡಿಗಳನ್ನು ಕಟ್ಟಿಕೊಟ್ಟರು.

* * *

## 10 ಸಿಂಗ್ ಮತ್ತು ಶಿಲೆಗಳ ಜೊತೆ

ಒಂದು ದಿನ ಸಾಯಂಕಾಲ ಬಿಳಿ ಕಾರೊಂದು ನಮ್ಮ ಕ್ಯಾಂಪಿನ ಒಳಕ್ಕೆ ನುಗ್ಗಿ ಬಂದಿತು. ಯಾರಿರಬಹುದು . . . ? ಎಂದುಕೊಳ್ಳುವಷ್ಟರಲ್ಲಿ ಹಿರಿಯ ಭೂಶಾಸ್ತ್ರಜ್ಞರಾದ ಧೃಡಕಾಯ, ಕೆಂಪು ಕೆಂಪಾದ ಗೋಲಿ ಕಣ್ಣಿನ ಮಹೇಂದ್ರ ಸಿಂಗ್ ಅವರು ಕಾರಿನಿಂದ ಇಳಿದು ಬಂದಿದ್ದೆ ತಬ್ಬಿಕೊಂಡು, ಬೆನ್ನುತಟ್ಟಿ ಕ್ಷೇಮ ಸಮಾಚಾರ ವಿಚಾರಿಸಿದರು. ಅಷ್ಟರಲ್ಲಿ ಸಂಕಟ ಕುರ್ಚಿಗಳನ್ನು ತಂದು ಹಾಕಿದ. ಕುರ್ಚಿಗಳಲ್ಲಿ ಕುಳಿತುಕೊಂಡೆವು.

ಸುಶೀಲ ಹೊರಕ್ಕೆ ಬಂದೊಡನೆ ಎದ್ದುನಿಂತ ಮಹೇಂದ್ರಸಿಂಗ್ ಅವರು ಎರಡೂ ಕೈಗಳಿಂದ

"ನಮಸ್ತೆ ಬೇಟಿ" ಎಂದ ಮೇಲೆ, ಮತ್ತೆ

"ನಿಮ್ಮನ್ನು ಬೇಟಿ ಎಂದು ಕರೆಯಬಹುದು ತಾನೆ ?" ಸಲ್ಪ ಗಂಭೀರವಾಗಿ ಕೇಳಿದರು.

"ಓ, ಖಂಡಿತವಾಗಿ" ಸುಶೀಲ ಗ್ರೀನ್ ಸಿಗ್ನಲ್ ಕೊಟ್ಟಳು.

"ಡ್ರೈವರ್ ಅದರಲ್ಲಿ ಮಿಠಾಯಿ ಇದೆ. ತೆಗೆದುಕೊಂಡು ಬಾ" ಎಂದಿದ್ದೆ, ಡ್ರೈವರ್ ಕಾರಿನ ಬಾಗಿಲು ತೆಗೆದು ಒಂದು ಪಾಕೆಟ್ ತಂದು ಕೊಟ್ಟ. ಮಹೇಂದ್ರ ಸಿಂಗ್ ಅದನ್ನು ಸುಶೀಲಳಿಗೆ ಕೊಡಲು ಹೋದರು. ಸುಶೀಲ ತೆಗೆದುಕೊಳ್ಳಲೇ ಬೇಡವೇ ಎನ್ನುವಂತೆ ನನ್ನ ಕಡೆ ನೋಡಿದಳು.

"ಮಗಳು ಹೀಗೆ ಮಾಡುವುದೇ . . ?"

"ಇಲ್ಲ, ಇಲ್ಲ" ಎಂದ ಸುಶೀಲ ತಕ್ಷಣವೇ ತೆಗೆದುಕೊಂಡಳು.

"ಆಹ್ ! ಇದಲ್ಲವೆ ಮಾತು" ಎಂದು ಉದ್ಗರಿಸಿದ ಸಿಂಗ್‌ರವರು ಸುಶೀಲಳನ್ನು ಕುಳಿತುಕೊಳ್ಳಲು ಆಹ್ವಾನಿಸಿದರು. ಸ್ವಲ್ಪ ಹಿಂಜರಿದ ನಂತರ, ಸುಶೀಲ ಕುಳಿತುಕೊಂಡಳು. ಕ್ರಾಂತಿ ಡ್ರೈವರ್ ಜೊತೆ ಕಾರಿನಲ್ಲಿ ಆಡಿಕೊಳ್ಳುತ್ತಿದ್ದ. ಸಿಂಗ್ ಅವರು ಪ್ರವಾಸಿ ಮಂದಿರದಲ್ಲಿ ಉಳಿದುಕೊಂಡಿದ್ದು, ಎರಡು ದಿನಗಳ ಕೆಲಸದ ಪ್ರಯುಕ್ತ ಬಂದಿರುವುದಾಗಿ ತಿಳಿಸಿದರು. ಎರಡು ದಿನ ಅಲ್ಲದಿದ್ದರೆ ಒಂದು ವಾರವೇ ಇದ್ದು ನಮ್ಮ ಜೊತೆಯಲ್ಲೇ ಊಟಮಾಡಿ ಎಂದು

ಆಹ್ವಾನಿಸಿದೆವು. ಸುಮಾರು ಹೊತ್ತು ಮಾತು ಸಾಗಿತ್ತು. ಕತ್ತಲಾಗಿ ಚಳಿಗಾಳಿ ಹಗುರವಾಗಿ ಬೀಸುತ್ತಿತ್ತು.

"ಡ್ರಿಂಕ್ಸ್ ತೆಗೆದುಕೊಳ್ಳುತ್ತೀಯಾ ತಾನೆ ?" ನಿಧಾನವಾಗಿ ಕೇಳಿದರು.

"ಇಲ್ಲ, ನಾನು ತೆಗೆದುಕೊಳ್ಳುವುದಿಲ್ಲ" ಎಂದೆ.

"ಸಾಫ್ಟ್ ಡ್ರಿಂಕ್ಸ್, ಬೀರು" ನಗುತ್ತಾ ಕೇಳಿದರು. ಒಳಗೊಳಗೆ ತೆಗೆದುಕೊಳ್ಳುವ ಆಸೆ ಇದ್ದರೂ ಸುಶೀಲ ಇರುವುದರಿಂದ ಬೇಡವೆಂದೆ.

"ನಾವಿಬ್ಬರೂ ಸ್ವಲ್ಪಹೊತ್ತು ಹೊರಕ್ಕೆ ಹೋಗಿಬರೋಣ ನಡಿಯಿರಿ" ಎಂದರು. ಕಾರು ನೇರವಾಗಿ ಹೋಗಿ ಬಾರ್ ಮುಂದೆ ನಿಂತುಕೊಂಡಿತು. ಅವರಿಗೆ ಬೇಕಾದ ಬ್ರ್ಯಾಂಡ್‌ಗಳನ್ನೆಲ್ಲ ತೆಗೆದುಕೊಂಡು ಪಕ್ಕದ ಅಂಗಡಿಯಲ್ಲಿ ಬೇಡವೆಂದರೂ ಒಂದು ಡಜನ್ ಕೋಳಿಮೊಟ್ಟೆಗಳನ್ನು ಕಟ್ಟಿಸಿಕೊಂಡರು. ಕ್ರಾಂತಿಗೆ ಒಂದು ದೊಡ್ಡ ಬಾರ್ ಚಾಕೋಲೇಟ್ ತೆಗೆದುಕೊಂಡರು.

ಕ್ಯಾಂಪಿಗೆ ಬಂದಿದ್ದೆ ಕೋಳಿ ಮೊಟ್ಟೆಗಳನ್ನು ಸುಶೀಲಳ ಕೈಗೆ ಕೊಟ್ಟು,

"ಬೇಟಿ, ನಾನು ಕುಡಿಯುತ್ತೇನೆ, ನೀನೇನು ಹೆದರಬೇಡ, ನಾನು ಎಷ್ಟು ಕುಡಿಯುತ್ತೇನೋ ಅಷ್ಟೇ ಸಭ್ಯನಾಗಿಬಿಡುತ್ತೇನೆ." ಎಂದು ಹೇಳಿ ಕುಡಿಯಲು ಕುಳಿತರು. ಕುಡಿಯುತ್ತಾ ಕುಳಿತಿದ್ದಂತೆ ಮೊಟ್ಟೆ ಭುರ್ಜಿ ತಯಾರಾಗಿ ಬಂದಿತ್ತು. ಒಂದಾದ ಮೇಲೆ ಒಂದರಂತೆ ಪೆಗ್‌ಗಳು ಏರುತ್ತಲೇ ಹೋಗುತ್ತಿದ್ದವು.

ದೂರದಲ್ಲಿ ನಿಂತಿದ್ದ ಸುಶೀಲಳನ್ನು ಕರೆದು, ಸ್ವಲ್ಪ ದೂರದಲ್ಲೇ ಕುಳಿತುಕೊಳ್ಳುವಂತೆ ಹೇಳಿ ತಮ್ಮ ಹತ್ತು ಹಲವು ಫೀಲ್ಡ್ ಅನುಭವಗಳನ್ನು ಹೇಳುತ್ತಾ ಜೊತೆ ಜೊತೆಗೆ ಜೋಕ್‌ಗಳನ್ನು ಕಟ್ ಮಾಡುವ ಶೈಲಿಗೆ ನಾವು ಒಳಗೊಳಗೆ ನಗುತ್ತಿದ್ದೆವು.

ರಾತ್ರಿ ಹತ್ತು ಗಂಟೆಯಾಗುತ್ತಾ ಬಂದಿದ್ದು ಊಟ ರೆಡಿಯಾಗಿದೆ ಎಂದು ತಿಳಿಸಿದೆವು.

"ಅರೇ ನಮ್ಮ ಲಿಮಿಟ್ ನಿಮಗ್ಯಾಗೆ ಗೊತ್ತಾಯಿತು ?" ಎಂದು ನಮ್ಮನ್ನು ನಗಿಸುತ್ತಾ

"ಈಗ ಸರಿಯಾಗಿದೆ. ಇನ್ನು ಮುಂದೆ ಹೋಗಬಾರದು," ಎಂದು ಊಟದ ಮುಂದೆ ಕುಳಿತ ಸಿಂಗ್,

"ನೀವಿಬ್ಬರೂ ನನಗೆ ಪಂಜಲ್ಸ್ ಇದ್ದಾಗೆ. ನನಗೂ ಒಬ್ಬ ಮಗ ಮತ್ತು ಒಬ್ಬ ಮಗಳಿದ್ದಾಳೆ. ಇಬ್ಬರೂ ನಿಮ್ಮ ವಯಸ್ಸೇ. ಹುಡುಗಿಯನ್ನು ಮಿಲ್ಟ್ರಿ ಡಾಕ್ಟರ್‌ಗೆ ಕೊಟ್ಟಿದ್ದೇನೆ.

ಹುಡುಗ ಕೂಡ ಮಿಲ್ಟ್ರಿಯಲ್ಲಿದ್ದಾನೆ. ಈಗ ನನಗೇನು ಯೋಚನೆಯಿಲ್ಲ. ಕ್ಷಮಿಸಿ ನಿಮಗೆಲ್ಲ ಬೋರ್ ಮಾಡುತ್ತಿದ್ದೇನೆ" ಎಂದು ಹೇಳಿ ಊಟ ಮುಗಿಸಿ ಶುಭರಾತ್ರಿ ಕೋರಿ ಎದ್ದುನಿಂತರು.

ಮರುದಿನ ಬೆಳಿಗ್ಗೆ ಬಿಸಿ ಬಿಸಿ ಮಸಾಲೆ ದೋಸೆ ತಿನ್ನುತ್ತಾ ದಕ್ಷಿಣ ಭಾರತದ ತಿಂಡಿಗಳನ್ನು ಬಹಳ ಕೊಂಡಾಡಿದರು.

"ಇನ್ನೊಂದು ಮುಖ್ಯ ವಿಷಯ, ನಿಮಗೆ ಇಷ್ಟವಾದರೆ (ಶಕ್ತಿಸ್ಥಳಕ್ಕೆ ಇಂದಿರಾಗಾಂಧಿಯ ಸ್ಮಾರಕಕ್ಕಾಗಿ) ಶಿಲೆಗಳನ್ನು ಆಯ್ಕೆ ಮಾಡುವ ಕಮಿಟಿಯಲ್ಲಿ ನಿಮ್ಮ ಹೆಸರೂ ಸೇರಿಸುತ್ತೇನೆ, ನಾನು ಈಗಾಗಲೇ ಡಿ. ವೈ. ಡಿಜಿ. ಹತ್ತಿರ ನಿಮ್ಮ ಬಗ್ಗೆ ಮಾತನಾಡಿ ಬಂದಿದ್ದೇನೆ" ಎಂದರು. ನಾನು ನೇರವಾಗಿ ಒಪ್ಪಿಕೊಂಡುಬಿಟ್ಟೆ.

ಕಾರು ಭೋಪಾನ್ ದಾಟಿ ದೂದಿ ರಸ್ತೆಯಲ್ಲಿ ಸುಮಾರು ದೂರ ಸಾಗಿದ ಮೇಲೆ ನಿಂತುಕೊಂಡಿತು. ಕೆಳಕ್ಕೆ ಇಳಿದ ಸಿಂಗ್ ಅವರು ಎರಡೂ ಕಡೆ ಇದ್ದ ಹಳ್ಳ ಕೊಳ್ಳಗಳ ಕಡೆಗೆ ಕೈ ತೋರಿಸಿ,

"ಇಲ್ಲೇ ಸುತ್ತ ಮುತ್ತಲಿರುವ ಶಿಲೆಗಳಲ್ಲಿ ಕೆಲವನ್ನು ನಾವು ಆಯ್ಕೆ ಮಾಡಿಕೊಳ್ಳಬೇಕಿದೆ" ಎಂದರು.

ಮೊದಲಿಗೆ ರಸ್ತೆಯ ಎಡಕ್ಕೆ ಇರುವ ಹಳ್ಳದಲ್ಲಿ ಇಳಿದು ಸುತ್ತಲೂ ಹುಡುಕಾಡಲು ಪ್ರಾರಂಭಿಸಿದೆವು. ಅಲ್ಲಲ್ಲಿ ನೆಲದ ಬಾಹ್ಯ ರೂಪಕ್ಕೆ ಸಮವಾಗಿ ತಮ್ಮ ಅಂಗಾಂಗಗಳನ್ನು ಚೆಲ್ಲಿ ಮಲಗಿರುವ ಶಿಲೆಗಳ ರೂಪರೇಖೆಗಳನ್ನು ನೋಡುತ್ತ ಹೋಗುತ್ತಿದ್ದೆವೆ.

"ಕಲೆ ನೋಡುವವರ ಕಣ್ಣುಗಳಲ್ಲಿರುತ್ತದೆ", ಎಂದಿದ್ದಾರೆ ತಿಳಿದವರು. ಬೇರೆ ಶಿಲೆಗಳಿಗೂ ಸುಣ್ಣದ (Lime stone) ಶಿಲೆಗಳಿಗೂ ಇರುವ ವ್ಯತ್ಯಾಸವೆಂದರೆ ಬೇರೆ ಶಿಲೆಗಳು ಬೇಗನೆ ಋತುಗಳಿಗೆ ಶಿಥಿಲಗೊಳ್ಳುವುದಿಲ್ಲ, ಶಿಥಿಲಗೊಂಡರು ಒಂದಷ್ಟು ಏಕರೂಪವಾಗಿ ಸವೆಯುತ್ತವೆ. ಆದರೆ ಸುಣ್ಣದ ಶಿಲೆಗಳಲ್ಲಿ ಮೃದು ಧಾತುಗಳಿರುವುದರಿಂದ ಋತುಗಳಿಗೆ ಬೇಗನೆ ಶಿಥಿಲಗೊಂಡು ವಿಚಿತ್ರ ರೂಪರೇಖೆಗಳನ್ನು ಪಡೆಯುತ್ತವೆ. ಬೇಗ ಬೇಗನೆ ನೋಡುತ್ತಾ ಹೋದರೆ ಅವುಗಳಲ್ಲಿ ಅಡಗಿರುವ ಅಪೂರ್ವ ಕಲಾಕೃತಿಗಳು ಕಾಣದೆ ಹೋಗಿಬಿಟ್ಟರೆ ಎನ್ನುವ ಗುಮಾನಿ ಬಂದಿತು.

"ಸಿಂಗ್‌ಸಾಬ್ ನೀವು ನೋಡುತ್ತಾ ಹೋಗಿ, ನಾನು ನಿಧಾನವಾಗಿ ಪುಸ್ತಕದಲ್ಲಿ ದಾಖಲಿಸಿಕೊಳ್ಳುತ್ತೇನೆ" ಎಂದೆ.

"ಅದೂ ಒಳ್ಳೆಯ ಉಪಾಯವೆ, ನೀವು ಒಂದೊಂದಾಗಿ ಸಾಧ್ಯವಾದಷ್ಟು ಚೆನ್ನಾಗಿ ಬಿಡಿಸುತ್ತಾ ಹೋಗಿ, ಸಾಧ್ಯವಾದರೆ ತ್ರಿಕೋನಾಕೃತಿಯ ಚಿತ್ರಗಳನ್ನು ಬಿಡಿಸಿ" ಎಂದು ಹೇಳಿ ಮುಂದಕ್ಕೆ ಹೊರಟರು.

ನಾನು ಪುಸ್ತಕದಲ್ಲಿ ಒಂದೊಂದನ್ನೇ ತ್ರಿಕೋನಾಕೃತಿಯ ಆಕಾರಗಳಲ್ಲಿ ಅವುಗಳ ಹಾವ ಭಾವಗಳನ್ನು ಪ್ರಕೃತಿಯ ಇತರ ವಸ್ತು, ಪ್ರಾಣಿಗಳಿಗೆ ಹೋಲಿಸುತ್ತಾ ಯೋಚಿಸುತ್ತಿದ್ದೆ. ಯೋಚಿಸಿದಷ್ಟು ಅವು ಚಿತ್ರ ವಿಚಿತ್ರವಾಗಿ ಕಾಣಿಸುತ್ತಿದ್ದವು. ಒಂದೊಂದು ಆಕೃತಿಯೂ ಒಂದೊಂದು ಕೋನದಲ್ಲಿ ಹತ್ತಾರು ರೂಪಗಳಾಗಿ ಮಾರ್ಪಟ್ಟಿದ್ದವು. ಒಂದು ಶಿಲೆಯ ಆಕಾರವಂತೂ ನನ್ನಲ್ಲಿ ಬೆರಗು ಮೂಡಿಸಿತು.

ಅದು ಒಂದು ತಾಯಿ-ಮಗುವಿನ ಆಕೃತಿಯಂತೆ ಕಾಣಿಸುತ್ತಿತ್ತು. ತಾಯಿ ಕುಕ್ಕರುಗಾಲಿನಲ್ಲಿ ಕುಳಿತು ಒಂದು ಕಾಲನ್ನು ಸ್ವಲ್ಪ ಮುಂದಕ್ಕಿಟ್ಟು, ಮಗುವನ್ನು ಎರಡು ಕೈಗಳಲ್ಲಿ ಆಡಿಸುತ್ತಿರುವಂತೆ ಕಾಣುತ್ತದೆ. ಇನ್ನೂ ಸ್ವಲ್ಪ ಸೂಕ್ಷ್ಮವಾಗಿ ನೋಡಿದರೆ ಇಬ್ಬರೂ ಬೆತ್ತಲೆ ಮೈಯಲ್ಲಿ ಸ್ನಾನ ಮಾಡುತ್ತಿರುವಂತೆ ತೋರುತ್ತಿದೆ. ಸುಮಾರು ಹೊತ್ತು ವಿವಿಧ ನೋಟಗಳಲ್ಲಿ ಅದನ್ನು ಬಿಡಿಸಿ. ಸಿಂಗ್ ಅವರನ್ನು ಕರೆದು ತೋರಿಸಿದೆ.



ನಗ್ನೀಕರಣದಿಂದ ಸವೆದು ನಿಂತಿರುವ ಸುಣ್ಣದ ಶಿಲೆ

"ಅಬ್ಬಾ, ಏನಾಶ್ಚರ್ಯ, ಎಂಥಹ ಸೊಗಸಾದ ಶಿಲೆ" ಎಂದು ಉದ್ಗಾರ ತೆಗೆದರು. ಅದನ್ನು ಮೂಲ ಶಿಲೆಯಿಂದ ಬೇರ್ಪಡಿಸುವ ವಿಧಾನ ಮತ್ತು ಯಾವ ರೀತಿಯಲ್ಲೂ ಧಕ್ಕೆಯಾಗದೆ ಪ್ಯಾಕ್ ಮಾಡುವುದರ ಬಗ್ಗೆ ಚರ್ಚಿಸಿದೆವು. ಹಲವು ಚಿತ್ರ ವಿಚಿತ್ರ ಆಕಾರಗಳಿರುವ ಸುಮಾರು 23 ಶಿಲೆಗಳನ್ನು ಗುರ್ತಿಸಿ, ಅವುಗಳಿಗೆಲ್ಲ ಸಂಖ್ಯೆಗಳನ್ನು ಕೊಟ್ಟು ಆಗಲೇ ಅಲ್ಲೊಬ್ಬ ಕಾವಲುಗಾರನನ್ನು ನೇಮಿಸಿ ವಾಪಸ್ ಬಂದೆವು.

ಅಂದು ರಾತ್ರಿ ಮತ್ತೆ ಸಿಂಗ್ ಅವರನ್ನು ಊಟಕ್ಕೆ ಆಹ್ವಾನಿಸಿದ್ದೆವು. ಸಿಂಗ್ ಅವರು

"ಮಿಸೆಸ್ ಸ್ವಾಮಿ, ಸ್ವಾಮಿಸಾಬ್ ಬಿಯರ್ ತೆಗೆದುಕೊ ಎಂದರು ತೆಗೆದುಕೊಳ್ಳುತ್ತಿಲ್ಲ, ನೀವಿದ್ದೀರೆಂದು ನಾನು ಬಿಟ್ಟಿದ್ದೇನೆ, ಇಲ್ಲದಿದ್ದರೆ ಸ್ವಾಮಿ ಸಾಬ್‌ಗೆ ಖಂಡಿತ ಕುಡಿಸಿಬಿಡುತ್ತಿದ್ದೆ" ಎಂದರು.

"ಇಲ್ಲ, ನಾನಿರಲಿ ಇಲ್ಲದಿರಲಿ ತಾವು ಅವರಿಗೆ ಏನೂ ಕುಡಿಸಬೇಡಿ" ಸುಶೀಲ ಹೇಳಿದಳು.

"ನಾನು ಕುಡಿಸುವುದೇ ಬೇಡ, ಹೀಗೆ ಇನ್ನಷ್ಟು ದಿನ ನಾನು ನಿಮ್ಮ ಜೊತೆಯಲ್ಲೇ ಇದ್ದರೆ, ನೀವಿಬ್ಬರೂ ತಾವೇ ಕುಡಿಯಲು ಶುರುಮಾಡುತ್ತೀರ" ಎಂದರು. ಸುಶೀಲ

"ಇಲ್ಲ ಸಾಧ್ಯವೇ ಇಲ್ಲ" ಎಂದಳು. ಆದರೆ ಒಂದರೆಡು ವರ್ಷಗಳಲ್ಲಿ ಅವರ ಮಾತೇ ನಿಜವಾಗಿತ್ತು.

ಕುಡಿಯುವುದರಲ್ಲಿ ತಿನ್ನುವುದರಲ್ಲಿ ಎತ್ತಿದ ಕೈ ಆಗಿದ್ದ ಸಿಂಗ್ ಅವರ ಬಗ್ಗೆ ಅನೇಕ ಕತೆಗಳನ್ನು ಆಗಲೇ ಕೇಳಿದ್ದೆ.

"ಜುಂಗೇಲ್" ಹತ್ತಿರ ವಜ್ರ ಸಂಶೋಧನೆಯಲ್ಲಿದ್ದಾಗ ವಾರಕ್ಕೊಮ್ಮೆ ರಾತ್ರಿ ಪಾರ್ಟಿ ನಡೆಯುತ್ತಿತ್ತಂತೆ. ಸಿಂಗ್ ಅವರು ಮಘುವಾ" (ಮದು) ಕುಡಿಯುತ್ತಾ ಕೋಳಿ, ಮತ್ತು ಕುರಿಯ ತೊಡೆಗಳನ್ನು ಕಡಿಯುತ್ತಾ ಮರದ ಕೆಳಗೆ ಕುಳಿತಿದ್ದರೆ, ಸುತ್ತಲೂ ಬುಡಕಟ್ಟು ಯುವತಿಯರು ನಾಟ್ಯವಾಡುತ್ತಿದ್ದರಂತೆ; ಸ್ಥಳೀಯ ವಾದ್ಯಗಳ ಸಮೇತ. ಕುಣಿತ, ಕುಡಿತ, ಕಡಿತ ಕೆಲವೊಮ್ಮೆ ರಾತ್ರಿಯೆಲ್ಲ ನಡೆಯುತ್ತಿತ್ತಂತೆ. ಇದು ಯಾವ ಮಟ್ಟಕ್ಕೆ ತಲುಪಿತ್ತೆಂದರೆ ಒಂದು ಸಣ್ಣ ಉದಾಹರಣೆ ಕೇಳಿ.. ಒಮ್ಮೆ ನಾನು ಜುಂಗೇಲ್‌ಗೆ ಹೋಗಿದ್ದಾಗ, ಆಲೀಮಿಯ ಜೀಪಿನ ಸುತ್ತ ಮುತ್ತಿಕೊಂಡಿದ್ದ ಮಕ್ಕಳ ಚಹರೆಗಳನ್ನು ಪೋಲೀಸಿನಂತೆ ಪರೀಕ್ಷಿಸುತ್ತಾ ಹೋಗುತ್ತಿದ್ದ. ಆಶ್ಚರ್ಯಗೊಂಡು ನಾನು,

"ಅಲೀಮಿಯ ಅದೇನು ಹುಡುಕುತ್ತಿದ್ದೀಯ ?" ಎಂದೆ.

"ಕೌನ್ ಕೌನ್ ಡ್ರೈವರ್ ಹೈ, ಕೌನ್ ಕೌನ್ ಡ್ರಿಲ್ಲರ್ ಹೈ. ಪಥಾಕರ್‌ತಾ ಹೈ ಸಾಬ್" ಎಂದಿದ್ದ.

ಒಂದು,.. ಎರಡು,.. ಮೂರು.. ಹೀಗೆ ಪೆಗ್‌ಗಳು ಏರುತ್ತಲೇ ಹೋಗುತ್ತಿದ್ದು ಚಳಿ ಇನ್ನೆಷ್ಟು ಥಂಡಿಯಾಗುತ್ತಾ ಹೋಗುತ್ತಿದೆ. ಸಂಕಟ ಪಕ್ಕದಲ್ಲೇ ಕುಳಿತುಕೊಂಡು ಬೆಂಕಿ ಉರಿಸುತ್ತಿದ್ದಾನೆ. ಸಿಂಗ್ ಮಾತನಾಡುತ್ತಿದ್ದ ಶೈಲಿ, ಆಗಾಗ ಕಟ್ ಮಾಡುತ್ತಿದ್ದ ಜೋಕ್‌ಗಳಿಂದ ಸಮಯದ ಪರಿವೆಯೇ ಗೊತ್ತಾಗಲಿಲ್ಲ. ಸುಶೀಲ ಮಧ್ಯೆ ಮಧ್ಯೆ ಬಿದ್ದುಬಿದ್ದು ನಗುತ್ತಿದ್ದಳು.

ರಾತ್ರಿ ಹನ್ನೊಂದು ಗಂಟೆ ಆಗುತ್ತಾ ಬಂದಿದ್ದು, ಊಟ ಬಡಿಸಲಾಯಿತು. ಮಾಂಸದ ಸಾರಿನ ಬಗ್ಗೆ ಕೊಂಡಾಡಿದ ಸಿಂಗ್ ಅವರು ಊಟ ಮುಗಿಸಿ ಕೃತಜ್ಞತೆಗಳನ್ನು ಸಲ್ಲಿಸಿ ಪ್ರವಾಸಿ ಮಂದಿರಕ್ಕೆ ತೆರಳಿದರು.

ಮಹೇಂದ್ರಸಿಂಗ್ ಲಖನೌ ಕಡೆಗೆ ಹೊರಟಿದ್ದೆ, ಖಾನ್ ಲಖನೌದಿಂದ ಬಂದಿಳಿದರು. ಬೆಳಗಿನ ಉಪಾಹಾರಕ್ಕೆ ಆಹ್ವಾನಿಸಿದೆವು. ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡು ಉಪಾಹಾರ ಮಾಡುತ್ತಾ, ರೈಲಿನಲ್ಲಿ ಹೋದ ದಿನ ಒಂದು ಪ್ರಸಂಗ ನಡೆಯಿತು, ಎಂದು ಪೀಠಿಕೆ ಹಾಕಿದರು. ನಾವಿಬ್ಬರು ಗಂಭೀರವಾಗಿ ಕೇಳತೊಡಗಿದೆವು.

"ನಾನು ಹೋದ ದಿನ ಸರ್ವೇಯರ್ ರಸ್ತೋಗಿ ಭೋಪಾನಿನಲ್ಲಿ ಸಿಕ್ಕಿ ಬೇರೆ ಬೋಗಿಯಲ್ಲಿ ಇರುವುದಾಗಿ ತಿಳಿಸಿದರು. ಸರ್ವೇಯರ್ ಪಕ್ಕದಲ್ಲಿ ಒಬ್ಬ ಯುವಕ ಕುಳಿತಿದ್ದನಂತೆ. ಮಾತನಾಡುತ್ತಾ ಮಾತನಾಡುತ್ತಾ ಒಂದು ನಿಲ್ದಾಣದಲ್ಲಿ ಇಳಿದ ಆ ಯುವಕ ಚಹ ಕುಡಿಯುತ್ತಾ ರಸ್ತೋಗಿಗೆ ಕೂಡ ಒಂದು ಚಹ ತೆಗೆದುಕೊಟ್ಟನಂತೆ. ಚಹ ಕುಡಿದ ರಸ್ತೋಗಿ ನಿದ್ದೆ ಮಾಡಿಬಿಟ್ಟ.

ಬೆಳಿಗ್ಗೆ ಎಚ್ಚರವಾಗಿ ನೋಡುತ್ತಾನೆ. ಯುವಕ ಸಾಮಾನುಗಳ ಜೊತೆ ಪರಾರಿ. ಸಾಮಾನುಗಳು ಹೋದರೆ ಹೋಗಲಿ ಹಾಕಿಕೊಂಡಿದ್ದ, ಹಾಸಿಕೊಂಡಿದ್ದ ಬಟ್ಟೆಗಳೂ ಇರಲಿಲ್ಲ. ಬರಿ ಒಳಚಡ್ಡಿ ಬನೀನು ಮಾತ್ರ ಉಳಿದಿತ್ತು. ಪಕ್ಕದಲ್ಲಿದ್ದವರಲ್ಲಿ ಒಂದು ಪಂಚೆಯನ್ನು ಎರವಲು ಪಡೆದು ನನ್ನ ಹತ್ತಿರ ಓಡಿ ಬಂದು ವಿಷಯ ತಿಳಿಸಿದ. ಸೂಟ್‌ಕೇಸಿನಲ್ಲಿದ್ದ ಪ್ಯಾಂಟು, ಷರ್ಟ್‌ನ್ನು ತೆಗೆದುಕೊಟ್ಟು, ಆಟೋಗೆ ಹಣಕೊಟ್ಟು, ಕಳುಹಿಸಿದೆ. ಒಂದು ಸೂಟ್‌ಕೇಸು, ಬಟ್ಟೆಗಳು, ವಾಚು, ಸ್ವಲ್ಪ ಹಣ ಎಲ್ಲಾ ಸೇರಿ ಸುಮಾರು ಎರಡು ಸಾವಿರ ರೂಪಾಯಿಗಳಷ್ಟು

ಹೋಯಿತಂತೆ. ಈ ಭೋಪಾಲ್ ಗಾಡಿಯಲ್ಲಿ ಕಳ್ಳತನಗಳು ಬಹಳ ನಡೆಯುತ್ತವೆ. ಯಾರಾದರೂ ಸಿಹಿತಿಂಡಿಗಳು ಕೊಟ್ಟರೆ ತೆಗೆದುಕೊಳ್ಳಬಾರದು. ಇತ್ತೀಚೆಗೆ ಇನ್ನಷ್ಟು ಪ್ರಸಂಗಳು ನಡೆದಿವೆ. ಕೆಲವರು ದಿನ ಪತ್ರಿಕೆಯಲ್ಲಿ ಮತ್ತು ಬರಿಸುವ ದ್ರವ್ಯ ಲೇಪಿಸಿ ಪ್ರಯಾಣಿಕರ ಮುಖದ ಹತ್ತಿರವಿಟ್ಟು ಪ್ರಜ್ಞೆ ತಪ್ಪಿಸಿ ಎಲ್ಲವನ್ನೂ ದೋಚುತ್ತಾರಂತೆ" ಎಂದರು.

ಈ ಉಪಾಯ ನಮಗೆ ಹೊಸದಾಗಿ ತೋರಿ, ಸುಶೀಲ ಆಶ್ಚರ್ಯ ಮತ್ತು ಗಾಬರಿಯಿಂದ ಕಣ್ಣುಗಳನ್ನು ಅಗಲಿಸಿ,

"ಅಬ್ಬಾ ನಮಗೆ ಆ ತರಹ ಆಗಿಬಿಟ್ಟರೆ" ಒಮ್ಮೆಲೇ ಹೌಹಾರಿದಳು.

ಆಗಾಗ ಜಾನ್ ಮತ್ತು ನಾನು ಫೀಲ್ಡ್‌ನಲ್ಲಿ, ಕ್ಯಾಂಪಿನಲ್ಲಿ ಸುಮಾರು ವಿಷಯಗಳ ಬಗ್ಗೆ ಮಾತನಾಡುತ್ತಿದ್ದೆವು. ರಾಜಕೀಯ, ಸಾಮಾಜಿಕ ಮತ್ತು ವಿಜ್ಞಾನದ ಹಲವು ಮಜಲುಗಳನ್ನು ಚರ್ಚಿಸುತ್ತಿದ್ದೆವು. ಒಮ್ಮೆ ಫೀಲ್ಡ್‌ನಲ್ಲಿ ಮಾತನಾಡುತ್ತ ಹೋಗುತ್ತಿದ್ದಾಗ,

"ಸ್ವಾಮೀಜೀ ನೀನು ಯಾವ ಜಾತಿ" ಎಂದು ಕೇಳಬೇಕೆ ? ನಾನು ಹಿಂದೆ ಮುಂದೆ ನೋಡದೆ

"ಎಸ್.ಸಿ ಆದಿ ಕರ್ನಾಟಕ" ಎಂದೆ.

"ಮತ್ತೆ ಮಾತೃ ಭಾಷೆ ತೆಲುಗು ಅಂತೀಯಾ?" ಹೌದು, ನಾವಿರುವುದು ಕೋಲಾರ ಜಿಲ್ಲೆ ಆಂಧ್ರದ ಗಡಿಯಲ್ಲಿದೆ. ಆದರೆ ಓದಿದ್ದು, ಬರೆದಿದ್ದು ಇರುವುದು ಎಲ್ಲಾ ಕರ್ನಾಟಕವೆ. ಮನೆಯಲ್ಲಿ ಮಾತನಾಡುವುದು ಮಾತ್ರ ತೆಲುಗು, ನನ್ನನ್ನ ಯಾರಾವರೂ ಕೇಳಿದರೆ ಮೊದಲು ಕನ್ನಡದವನು, ಕರ್ನಾಟಕ ಎನ್ನುತ್ತೇನೆ" ಎಂದೆ.

"ಹೌದು, ಇನ್ನೊಂದು ವಿಷಯ ತಪ್ಪು ತಿಳಿಯಬೇಡ, ಈ ಷೆಡ್ಯೂಲ್‌ಕಾಸ್ಟ್‌ನವರು ಸತ್ತು ಹೋಗಿರುವ ಪ್ರಾಣಿಗಳನ್ನು ಏಕೆ ತಿನ್ನುತ್ತಾರೆ" ಎಂದು ಪ್ರಶ್ನಿಸಿದರು. ಯಾಕೋ ಈ ಪ್ರಶ್ನೆ ನನ್ನನ್ನ ರೇಗಿಸಿದಂತಿದ್ದರೂ ನಿಜವಾಗಿಯೂ ವಿಷಯ ತಿಳಿಯದೆ ಕೇಳುತ್ತಿದ್ದಾರೋ ಅಥವಾ ನನ್ನನ್ನು ರೇಗಿಸಲು ನೋಡುತ್ತಿದ್ದಾರೋ ಅರ್ಥವಾಗಲಿಲ್ಲ. ಒಟ್ಟಿನಲ್ಲಿ ಎಲ್ಲೋ ಮನಸ್ಸಿಗೆ ನಾಟಿದಂತಾಯಿತು.

"ಸಾರ್, ಜನಗಳು ಸತ್ತೋಗಿರುವ ಪ್ರಾಣಿಗಳನ್ನು ಏಕೆ ತಿನ್ನುತ್ತಾರೆ.. ? ತಿನ್ನುವುದಕ್ಕೆ ಏನೂ ಇಲ್ಲದೆ. ಬೇರೆ ಜಾತಿಯ ಜನಗಳೆಲ್ಲ ಸೇರಿ ನಮ್ಮನ್ನು ಆ ತರಹ ಮಾಡಿ ಬಿಟ್ಟಿದ್ದಾರೆ. ಶತಮಾನಗಳಿಂದ ಹೆಂಗಸರು ಏಕೆ ಸೂಳೆಯರಾಗುತ್ತಿದ್ದಾರೆ..? ಜೋರಾಮತ್ ಕಾಳಂದಿ ಜಿಲ್ಲೆಗಳಲ್ಲಿ ಜನರು ಒಂದು ಹೊತ್ತು ಕೂಳಿಗಾಗಿ ತಮ್ಮ ರಕ್ತ ಮುದ್ದೆಗಳನ್ನು ಏಕೆ

ಮಾರಿಕೊಳ್ಳುತ್ತಾರೆ...? ಒಂದು ರೀತಿಯಲ್ಲಿ ಅದಕ್ಕೆಲ್ಲಾ ಕಾರಣ ನಾವೇ ಆಗಿದ್ದೀವಿ, ಯಾರದೂ ತಪ್ಪಿಲ್ಲ, ತಪ್ಪೆಲ್ಲಾ ನಮ್ಮದೇ ಆಗಿದೆ. ಚರಿತ್ರೆಯಲ್ಲಿ ಎಷ್ಟೋ ಮಹಾ ಪುರುಷರು ಹುಟ್ಟಿದರು, ಎಷ್ಟೋ ಬಂಡಾಯಗಳಾದವು, ಆದರೆ ಸಮಾನತೆ ಎಲ್ಲರಿಗೂ ದೊರೆಯಲಿಲ್ಲ. ಎಲ್ಲಾ ಕನಸಾಗಿಯೇ ಉಳಿದು ಹೋಯಿತು"

ನಾನು ಏನೋ ಹೇಳಲು ಹೋಗಿ ಏನೋ ಮಾತನಾಡುತ್ತಿದ್ದೇನೆ ಎನ್ನಿಸಿ ಅಚಾನಕ್ ಆಗಿ ಸುಮ್ಮನಾಗಿಬಿಟ್ಟೆ. ಖಾನ್ ಯಾವ ರೀತಿ ಅರ್ಥ ಮಾಡಿಕೊಂಡರೇ ಏನೋ.. ಮತ್ತೆ ಅದರ ಬಗ್ಗೆ ಮಾತನಾಡಲಿಲ್ಲ.

ಇನ್ನೊಂದು ಸಲ ಕ್ಯಾಂಪಿನಲ್ಲಿ ಕುಳಿತಿದ್ದಾಗ ಹೀಗೆ ಮಾತುಗಳು ಮುಂದುವರೆದಂತೆ,

"ನೀನು ಯಾವ ಯಾವ ಮಾಂಸ ತಿನ್ನುತ್ತೀಯಾ" ಖಾನ್ ಕೇಳಿದರು.

"ಭೀಫ್‌ನಿಂದ ಹಿಡಿದು ಚಿಕನ್‌ವರೆಗೂ ತಿಂದಿದ್ದೇನೆ. ತಿನ್ನುತ್ತೇನೆ ಕೂಡ" ಬಹಳ ವಿನಮ್ರನಾಗಿ ಹೇಳಿ

"ಹೌದು, ಸರ್ ನೀವು ಹಂದಿಯನ್ನು ಏಕೆ ತಿನ್ನುವುದಿಲ್ಲ?" ಯಾವುದೋ ಮೂಡ್‌ನಲ್ಲಿ ಅಕಸ್ಮಾತ್ತಾಗಿ ಕೇಳಿಬಿಟ್ಟೆ.

ಖಾನ್ ಮುಖವೆಲ್ಲ ರಕ್ತ ತುಂಬಿಕೊಂಡು ಇನ್ನಷ್ಟು ಕೆಂಪಾಗಿ ರಕ್ತ ಚಿಮ್ಮಿದಂತಾಗಿ

"ಹರೆ ಬೈ ಅದರ ಮುಸಿಡಿ ನೋಡು ಅದ್ಯಾಗೆ ಅದನ್ನು ತಿನ್ನಲು ಮನಸ್ಸು ಬರುತ್ತದೆ.." ಎಂದು ಧಗಧಗಿಸಿಬಿಟ್ಟರು.

ಒಳ್ಳೆ ಕಷ್ಟದ ವಿಷಯವಾಯಿತಲ್ಲ... ಯಾಕಾದರೂ ಕೇಳಿದೆನೋ ಎನಿಸಿತು. ಆಮೇಲೆ ಸ್ವಲ್ಪ ಕೂಲಾದರು. ಇಬ್ಬರೂ ಅದ ಬಗ್ಗೆ ಮಾತನಾಡಿಕೊಳ್ಳಲಿಲ್ಲ. ಬಹುಶಃ ನಮ್ಮ ಮಧ್ಯೆ ಸ್ವಲ್ಪ ಸ್ವಲ್ಪವಾಗಿ ಕಂದಕ ಏರ್ಪಡುತ್ತಿತ್ತು ಎನ್ನುವುದಾಗಿ ನಾನು ಮಾತ್ರ ಭಾವಿಸಲಿಲ್ಲ ಇದೆಲ್ಲಾ ಮಾಮೂಲೆ ಎಂದು ಮರೆತುಬಿಟ್ಟೆ.

* * *

## ಅವಳ ಹಿಡಿಶಾಪ ನಮ್ಮೆಲ್ಲರಿಗೂ ತಗುಲಬೇಕು

ಒಂದು ದಿನ ಬೆಳಿಗ್ಗೆ ಪ್ಯಾಕ್ ಲಂಚ್ ತೆಗೆದುಕೊಂಡು ಜಿಯಾಲಜಿಕಲ್ ಟ್ರಾವರ್ಸ್ ಹೊರಟೆವು. ಭೋಪಾಲ್‌ಗೆ ಉತ್ತರ ಪೂರ್ವದ ದಿಕ್ಕಿನಲ್ಲಿ ಜೀಪು ಸುಮಾರು ಅರವತ್ತು ಕಿ.

ಮೀಟರುಗಳು ದೂರ ಚಲಿಸಿದ ಮೇಲೆ ಒಂದು ಮಣ್ಣು ರಸ್ತೆಯಲ್ಲಿ ನಿಂತುಕೊಂಡಿತು. ಅಲ್ಲಿಂದ ಮುಂದೆ ನಕ್ಷೆ ಮತ್ತು ಉತ್ತರಮುಖಿಯ ಸಹಾಯದಿಂದ ಕಾಡಿನ ಒಳಕ್ಕೆ ನಡೆಯ ತೊಡಗಿದವು. ಕಾಡೆಂದರೆ ಹೇಳಿಕೊಳ್ಳುವಂತಹ ಕಾಡಾಗಿರಲಿಲ್ಲ. ಹೆಸರಿಗೆ ಮರಗಿಡಗಳು, ಹಳ್ಳಕೊಳ್ಳಗಳು. ಕೆಲವು ಪ್ರಾಣಿಗಳೂ ಇದ್ದವೆಂದು ಕೇಳಿದ್ದೆ. ವಿಧವಿಧವಾದ ಶಿಲೆಗಳನ್ನು ಸುತ್ತಿಗೆಯಿಂದ ಹೊಡೆಯುತ್ತಾ.... ಪರೀಕ್ಷಿಸುತ್ತಾ.... ಪುಸ್ತಕದಲ್ಲಿ ದಾಖಲು ಮಾಡಿಕೊಳ್ಳುತ್ತಾ ಹೋಗುತ್ತಿದ್ದೇವೆ. ದೂರದಲ್ಲಿ ಎಲ್ಲೋ ಒಂದೇ ಸಮನೆ ಅಳುವ ಸದ್ದು ಗಾಳಿಯಲ್ಲಿ ಕೇಳಿಬರುತ್ತಿದೆ. ಇಂತಹ ಕಾಡಿನಲ್ಲಿ ಯಾರಿರಬಹುದು..? ಏನಾಗಿರಬಹುದು .. ? ಸ್ವಲ್ಪ ಆಶ್ಚರ್ಯ ಮತ್ತು ಗಾಬರಿಯಿಂದ ಜೊತೆಗಿದ್ದ ಹುಡುಗರನ್ನು ಕೇಳಿದೆ. ಸರಿಯಾದ ಉತ್ತರ ಸಿಗಲಿಲ್ಲ.

"ಖಾನ್ ಸಾಬ್ ನಡೆಯಿರಿ, ಎಲ್ಲೋ ಹತ್ತಿರದಲ್ಲೇ ಇರಬಹುದು" ಎಂದು ಸದ್ದು ಬರುವ ದಿಕ್ಕಿಗೆ ಹೊರಟೆವು.

ದೂರದಲ್ಲಿ ಪೊದೆಗಳ ಮಧ್ಯದಲ್ಲಿ ಮರಗಳ ಕೆಳಗೆ ಎರಡು ಚಿಕ್ಕ ಚಿಕ್ಕ ಗುಡಿಸಲುಗಳು ಕಾಣಿಸಿದವು. ಹತ್ತಿರ ಹತ್ತಿರ ಹೋದಂತೆ ಗುಡಿಸಲು ಮುಂದೆ ಮುದುಕಿಯೊಬ್ಬಳು ಒಂದೇ ರಾಗವಾಗಿ ಅಳುತ್ತಾ ಕುಳಿತಿದ್ದಾಳೆ. ಪಕ್ಕದಲ್ಲಿ ಒಂದು ಪುಟ್ಟ ಮಗು ಜ್ಞಾನವಿಲ್ಲದೆ ಅಂಗಾತ ಬಿದ್ದಿದ್ದರೆ, ಸ್ವಲ್ಪ ದೂರದಲ್ಲಿ ಒಂದು ಹೆಣ ಬಿದ್ದಿದೆ.

ನಾವು ಹತ್ತಿರ ಹೋಗಿ ನಿಂತಿರುವ ಪರಿವೆಯೂ ಸಹ ಇಲ್ಲದೆ, ಆ ಮುದುಕಿ ಒಂದೇ ಸಮನೆ ಅಳುತ್ತಿದ್ದಾಳೆ. ಒಂದು ಮಾಸಿದ ತುಂಡು ತುಂಡಾದ ಸೀರೆ ಅವಳನ್ನು ಅರೆಕೊರೆಯಾಗಿ ಹೆಸರಿಗೆ ಮಾತ್ರ ಸುತ್ತಿಕೊಂಡಿದೆ. ಸುಕ್ಕು ಗಟ್ಟಿದ ಅವಳ ದೇಹ ಒಣಗಿದ ಗಳಗಳ ರೆಂಬೆಯಂತೆ ಕಾಣುತ್ತಿದೆ. ತಲೆ ಕೂದಲು ಒಣಗಿದ ರೆಂಬೆಯ ಮೇಲಿನ ಮುಳ್ಳುಗಳಂತೆ ಕಾಣಿಸುತ್ತಿವೆ.

ಒಂದೆರಡು ಹರಕು ಮುರುಕು ಬೊಂತೆಗಳು ಮತ್ತು ಮಡಿಕೆಗಳನ್ನು ಬಿಟ್ಟರೆ ಗುಡಿಸಲು ಒಳಗಾಗಲಿ ಹೊರಗಾಗಲಿ ಏನೂ ಕಾಣಿಸಲಿಲ್ಲ. ಸತ್ತು ಬಿದ್ದಿರುವ ಹೆಣ ಒಂದು ಒಣಗಿದ ಮುಳ್ಳು ಕಂಪೆಯಂತೆ ಅವಳ ಮುಂದೆ ಬಿದ್ದಿದೆ. ಹೆಣ್ಣೋ ಗಂಡೋ..? ವಯಸ್ಸೆಷ್ಟೋ.. ? ಏನಾಗಿತ್ತೋ ಗೊತ್ತಾಗಲಿಲ್ಲ. ಖೋರಾಪುರ್ ಮತ್ತು ಕಾಳಂದಿಯ ಸಾವುಗಳೆಂದರೆ ಇದೇ ರೀತಿಯ ಸದ್ದಿಲ್ಲದ ಸಾವುಗಳೇ ಆಗಿರಬೇಕು.

ಸ್ವಲ್ಪ ಹೊತ್ತು ಹಾಗೆ ನೋಡಿದ ನಾವು ಏನೂ ಮಾತನಾಡದೆ ಹಿಂದಕ್ಕೆ ತಿರುಗಿಕೊಂಡೆವು. ನಮ್ಮ ಇರುವು ಆ ಮುದುಕಿಗೆ ಗೊತ್ತಾಗಿತ್ತೋ ಇಲ್ಲವೋ.. ಗೊತ್ತಿದ್ದರೂ ನಾವು ಮಾಡುವುದಾದರೂ ಏನಿತ್ತು ? ಅವಳ ಹಿಡಿಶಾಪ ಖಂಡಿತ ನಮ್ಮೆಲ್ಲರಿಗೂ ತಗುಲಬೇಕು.

ನನಗೆ ಆ ದೃಶ್ಯವನ್ನು ಮರೆಯಲಾಗಿಲ್ಲ. ಆ ಕಡೆಗೆ ಹೋಗದೆ ಇದ್ದಿದ್ದರೆ ಚೆನ್ನಾಗಿತ್ತೋ ಏನೋ..? ಹಿಂದಕ್ಕೆ ತಿರುಗಿಕೊಂಡು ಸುಮಾರು ದೂರ ನಡೆದು ಜೀಪಿನ ಹತ್ತಿರಕ್ಕೆ ಬಂದೆವು. ಅಲ್ಲಿಂದ ನೇರವಾಗಿ ಕ್ಯಾಂಪಿಗೆ ಹೋಗಲು ಮನಸ್ಸು ತುಡಿಯುತ್ತಿತ್ತು. ಖಾನ್ ಅವರು,

"ಸ್ವಾಮಿ ಇಷ್ಟುದೂರ ಬಂದಾಗಿದೆ ಇಲ್ಲಿಂದ ಇನ್ನೊಂದು ಟ್ರ್ಯಾವರ್ಸ್ ತೆಗೆದುಕೊಂಡು ಹಿಂದಕ್ಕೆ ಬಂದುಬಿಡೋಣ" ಎಂದರು.

"ಆಯಿತು" ಎಂದೆ. ಕಚ್ಚಾ ರಸ್ತೆಯಿಂದ ಕವಲಾಗಿದ್ದ ಇನ್ನೊಂದು ರಸ್ತೆಗೆ ಜೀಪನ್ನು ತಿರುಗಿಸಿದ ಅಲೀಮಿಯ ಸಣ್ಣ ಪುಟ್ಟ ಹಳ್ಳಗಳಲ್ಲಿ ಓಡಿಸುತ್ತ ಸುಮಾರು ಐದಾರು ಕಿ.ಮೀ.ಗಳ ದೂರ ಓಡಿಸಿದ ಮೇಲೆ ಒಂದು ಎತ್ತರವಾದ ಒಡ್ಡಿನ ಮೇಲೆ ಏರಿಸಿದ. ಜೀಪು ಒಡ್ಡಿನ ಮೇಲೇನೋ ಏರಿಬಿಟ್ಟಿತು, ಮತ್ತೆ ಕಿರಿದಾದ ಕಾಲುದಾರಿಯ ಕಲ್ಲುಗಳ ನಡುವೆ ಇಳಿಯಲು ಹೋಗಿ ಮುಂದಿದ್ದ ಕಲ್ಲುಗಳಿಗೆ, ಒಂದು ಗುದ್ದು ಗುದ್ದಿ ನಿಂತುಕೊಂಡಿತು.

ಇಳಿದು ಹೋಗಿ ನೋಡುತ್ತೇವೆ. ಮುಂದಿದ್ದ ಟೈ ರಾಡ್ ಒಂದು ಮುರಿದು ಹೋಗಿದೆ. ಈಗ ಏನು ಮಾಡಬೇಕು...? ಜೀಪೇನೋ ಸ್ಟಾರ್ಟ್ ಆಗುತ್ತದೆ, ಚಲಿಸುತ್ತದೆ ಕೂಡ, ಆದರೆ ಸ್ಟಿರಿಂಗ್ ತಿರುಗಿಸಿದ ಕಡೆ ಗಾಡಿ ತಿರುಗುತ್ತಿಲ್ಲ. ಗಾಡಿ ಒಂದೇ ಕಡೆ ಎಳೆದುಕೊಂಡು ಹೋಗುತ್ತಿದೆ. ಸಮಯ ಆಗಲೇ ಎರಡು ಗಂಟೆಯಾಗಿದ್ದು ನಾವಿರುವ ಸ್ಥಳಕ್ಕೂ ಕ್ಯಾಂಪಿಗೂ ಸುಮಾರು ಅರವತ್ತೈದು ಕಿ.ಮೀ.ಗಳು ದೂರವಿದೆ. ಆ ರಸ್ತೆಯಲ್ಲಿ ಒಂದು ಗಾಡಿ ಕೂಡ ಓಡುವುದಿಲ್ಲ, ಓಡಿದರೂ ನಾವಿರುವ ಸ್ಥಳಕ್ಕೂ ಗಾಡಿಗಳು ಓಡಾಡುವ ಕಚ್ಚಾ ರಸ್ತೆಗೂ ಕನಿಷ್ಠ ಹತ್ತು ಕಿ.ಮೀ.ಗಳ ದೂರವಿದೆ.

ಎಲ್ಲರೂ ಹಗ್ಗದ ತುಂಡುಗಳನ್ನು ಮತ್ತು ಕಂಬಿಗಳನ್ನು ಹುಡುಕಲು ಶುರು ಮಾಡಿದೆವು. ಗಟ್ಟಿಯಾದ ಯಾವ ವಸ್ತುವೂ ಸಿಗದೆ ಹೋಗಿ,

"ಸ್ವಾಮಿ, ನೀವು ಇಲ್ಲೇ ಇರಿ, ಹತ್ತಿರದ ಹಳ್ಳಿಗೆ ಹೋಗಿ ಟ್ರಾಕ್ಟರ್ ಸಿಗುವುದೇನೋ ಪ್ರಯತ್ನಿಸುತ್ತೇನೆ" ಎಂದ ಖಾನ್, ಒಬ್ಬ ಹುಡುಗನನ್ನು ಜೊತೆಗೆ ಕರೆದುಕೊಂಡು ಹೊರಟರು.

ಅನಂತರ ಸ್ವಲ್ಪ ಹೊತ್ತಾದ ಮೇಲೆ ಅಲೀಮಿಯ

"ಸಾಬ್ ನೀವು ಇಲ್ಲೆ ಇರಿ, ಎಲ್ಲಾದರೂ ಹಗ್ಗ ಅಥವಾ ಕಂಬಿ ಸಿಗುತ್ತದೇನೋ ಹುಡುಕಾಡಿ ಬರುತ್ತೇನೆ" ಎಂದು ಇನ್ನೊಬ್ಬ ಹುಡುಗನನ್ನು ಜೊತೆಗೆ ಕರೆದೊಯ್ದ. ಸಧ್ಯಕ್ಕೆ ಕಾಡಿನಲ್ಲಿ ನಾನೊಬ್ಬನೇ ಉಳಿದಿದ್ದೇನೆ, ಒಂದು ನರಪಿಳ್ಳೆಯೂ ಕಾಣಿಸುತ್ತಿಲ್ಲ. ಸುಮಾರು

ಹೊತ್ತು ಜೀಪಿನ ಮುಂದೆ ನಿಂತು ನಿಂತು ಕಾಲುಗಳಲ್ಲಿ ನೋವು ಕಾಣಿಸಿಕೊಂಡಿತು. ಕೊನೆಗೆ ಹಿಂದಿನ ಸೀಟಿನಲ್ಲಿ ಕುಳಿತುಕೊಂಡು ಬರುವವರಿಗಾಗಿ ಎಚ್ಚರದಿಂದ ಕಾಯತೊಡಗಿದೆ. ಮಧ್ಯೆ ಮಧ್ಯೆ ಏನೇನೋ ಯೋಚನೆಗಳು.

ಈಗ ಏನಾಗಬಹುದು..? ಇವರು ಬರುತ್ತಾರೋ ಇಲ್ಲವೊ, ಒಂದು ಪಕ್ಷ ಬರದೆ ಹೋದಲ್ಲಿ ಏನು ಮಾಡುವುದು. ? ನಾನೂ ಹೊರಟರೆ, ಅವರು ಯಾವ ಯಾವ ದಿಕ್ಕಿಗೆ ಹೋಗಿದ್ದಾರೋ ಏನೋ..? ಮತ್ತೆ ನನ್ನನ್ನು ಹುಡುಕಬೇಕಾಗುತ್ತದೆ.

ಆಯಾಸ, ದಾಹ ಯಾರೋ ಕರೆದಂತಾಗಿ ದಿಗ್ಗನೆ ಎದ್ದು ಕುಳಿತು ನೋಡುತ್ತೇನೆ.. ಅಲೀಮಿಯ ಎದುರಿಗೆ ನಿಂತಿದ್ದಾನೆ. ಕೈ ಗಡಿಯಾರ ನೋಡುತ್ತೇನೆ, ಸಮಯ ಐದೂವರೆಯಾಗಿದೆ. ನನಗೆ ಅರಿವಿಲ್ಲದೆಯೇ ನಿದ್ದೆಗೆ ವಶವಾಗಿ ಬಿಟ್ಟಿದ್ದೆ.

ಡ್ರೈವರ್ ಕೈಯಲ್ಲಿ ಕೆಲವು ತುಂಡು ತುಂಡು ಕತ್ತಾಳೆ ನಾರಿನ ಹುರಿ ಹಗ್ಗಗಳು, ಕಂಬಿಗಳು, ಹಳೆ ಬಟ್ಟೆ ಪೇಲಿಕೆಗಳಿವೆ. ಬಂದಿದ್ದೆ ಹುಡುಗನ ಸಹಾಯದಿಂದ ಮುರಿದಿದ್ದ ಟೈರಾಡಿಗೆ ಬಟ್ಟೆ ಮತ್ತು ಹಗ್ಗಗಳನ್ನು ಸುತ್ತಿ ಕಂಬಿಗಳಿಂದ ಬಿಗಿಯಾಗಿ ಕಟ್ಟಿ ನಿಧಾನವಾಗಿ ಗಾಡಿಯನ್ನು ಸ್ಟಾರ್ಟ್‌ಮಾಡಿ ಬಹಳ ಎಚ್ಚರದಿಂದ ಓಡಿಸತೊಡಗಿದ. ಗಾಡಿ ಸುಮಾರು ಇನ್ನೂರು ಮೀಟರುಗಳಷ್ಟು ದೂರ ಚಲಿಸಿದ ಮೇಲೆ ಮುರಿದುಕೊಂಡಿತು. ಮತ್ತೆ ಕಟ್ಟಿದೆವು. ಮತ್ತೆ ಚಲಿಸಿತು. ಮತ್ತೆ ನಿಂತುಕೊಂಡಿತು. ಹೀಗೆ ಹತ್ತಾರು ಸಲದ ಪ್ರಯತ್ನದಿಂದ ಕಚ್ಚಾ ರಸ್ತೆಗೆ ಬರುವ ಹೊತ್ತಿಗೆ ಸೂರ್ಯ ಮುಳುಗಿದ್ದ.

ರಸ್ತೆ ಸ್ವಲ್ಪ ಚೆನ್ನಾಗಿರುವುದರಿಂದ ಹಗ್ಗ ಮತ್ತು ಕಂಬಿಗಳನ್ನು ಈಗ ಒಮ್ಮೆ ಕಟ್ಟಿದರೆ ಗಾಡಿ ಒಂದೆರಡು ಕಿ.ಮೀಟರುಗಳಷ್ಟು ಚಲಿಸಿಬಿಡುತ್ತಿತ್ತು. ಹಾಗೂ ಹೀಗೂ ಒಂದು ಹಳ್ಳಿ ತಲುಪಿದೆವು ಹಳ್ಳಿಯ ಒಂದು ಸಣ್ಣ ಡಾಬಾ ಅಂಗಡಿಯ ಮುಂದೆ "ಖಾನ್" ಕುಳಿತಿದ್ದಾರೆ. ನಾವು ಅಲ್ಲಿಗೆ ತಲುಪಿದ್ದೇ ಚಹ ಮತ್ತು ಬನ್ನುಗಳನ್ನು ತೆಗೆದುಕೊಟ್ಟುರು.

"ಏನೇನೋ ಪ್ರಯತ್ನ ಮಾಡಿದೆ, ಆಗಲಿಲ್ಲ, ಟ್ರ್ಯಾಕ್ಟರ್ ರಾಬರ್ಟ್‌ಗಂಜ್‌ಗೆ ಹೋಗಿದೆಯಂತೆ ಅದಕ್ಕಾಗಿ ಕಾಯುತ್ತಿದ್ದೇನೆ" ಎಂದರು. ಜೊತೆಗೆ ಒಂದು ಉದ್ದವಾದ ಹಗ್ಗವನ್ನು ಕೈಯಲ್ಲಿ ಹಿಡಿದುಕೊಂಡಿದ್ದರು.

"ಆಗಿದ್ದು ಆಯಿತು, ಈಗ ನಾವು ಅದಕ್ಕಾಗಿ ಕಾಯುವುದು ಬೇಡ, ಈ ಹಗ್ಗವನ್ನು ಚೆನ್ನಾಗಿ ಬಿಗಿದುಕಟ್ಟಿ ರಾಬರ್ಟ್‌ಗಂಜ್‌ಗೆ ತಲುಪಿಬಿಡೋಣ" ಹೇಳಿದೆ. ನಾನೂ ಹಾಗೆ ಯೋಚಿಸುತ್ತಿದ್ದೇನೆ ಖಾನ್ ಹೇಳಿದರು.

ಡ್ರೈವರ್ ಅಷ್ಟರಲ್ಲಿ ಹಗ್ಗ ಕಟ್ಟಿ ಗಾಡಿಯನ್ನು ನಿಧಾನವಾಗಿ ಚಲಿಸತೊಡಗಿದ. ಹೃದಯವನ್ನು ಕೈಯಲ್ಲಿ ಹಿಡಿದುಕೊಂಡು ಜೀಪಿನ ಮೇಲೆ ಭಾರವನ್ನು ಬಿಡದೆ ಕುಳಿತಕೊಂಡಿದ್ದೇನೆ. ರಾತ್ರಿ ಎಂಟು ಗಂಟೆಗೆ ಜೀಪು ರಾಬರ್ಟ್‌ಗಂಜ್ ತಲುಪಿತು.

ಸುಶೀಲ ಏನು ಯೋಚಿಸುತ್ತಿದ್ದಾಳೋ ಏನೋ.. ? ಸ್ವಲ್ಪ ಗಾಬರಿಯಾದರೂ ಇನ್ನೇನು ಅರ್ಧ ಗಂಟೆ ಅಥವಾ ಒಂದು ಗಂಟೆಯ ಒಳಗೆ ರಿಪೇರಿ ಆಗಿಬಿಡುತ್ತದೆ. ಆಮೇಲೆ ರಾಬರ್ಟ್‌ಗಂಜ್‌ನಿಂದ ಛೋಪಾನ್‌ಗೆ ಅರ್ಧಗಂಟೆ ದಾರಿ. ರಾತ್ರಿ ಹತ್ತೂವರೆ ಗಂಟೆಗೆಲ್ಲ ಛೋಪಾನ್ ತಲುಪಿಬಿಡಬಹುದು ಎಂದುಕೊಂಡೆ. ಆದರೆ ಸಮಯ ರಾತ್ರಿ ಹನ್ನೊಂದು ಗಂಟೆಯಾದರೂ ರಿಪೇರಿ ಮಾಡುತ್ತಲೇ ಇದ್ದಾರೆ. ಸ್ವಲ್ಪ ಮುಂದಾಲೋಚನೆ ಮಾಡಿ, ಬಂದ ತಕ್ಷಣವೆ, ಖಾನ್‌ಗೆ ಹೇಳಿ ಬಸ್ಸಿಡಿದು ಛೋಪಾನ್‌ಗೆ ಹೊರಟು ಬಿಡಬೇಕಾಗಿತ್ತು. ಬಸ್ಸುಗಳ ಓಡಾಟ ಪೂರ್ತಿ ನಿಂತಿದೆ. ಲಾರಿಯಲ್ಲಿ ಒಬ್ಬನೇ ಹೋಗಿ ಏನಾದರೂ ತೊಂದರೆಗೆ ಸಿಲುಕಿಕೊಂಡರೆ...? ಆಗಿದ್ದು ಆಗಿಹೋಯಿತು. ಒಂದೇ ಸಲ ಜೀಪಿನಲ್ಲೇ ಹೋಗೋಣವೆಂದು ಸುಮ್ಮನೆ ಕುಳಿತಿದ್ದೇವೆ.

ಗಾಡಿ ರಿಪೇರಿಯಾಗುವುದರೊಳಗೆ ಗಂಟೆ ಹನ್ನೊಂದೂವರೆಯಾಗಿತ್ತು. ಅಲ್ಲೊಬ್ಬರು ಇಲ್ಲೊಬ್ಬರು ಓಡಾಡುವುದು ಬಿಟ್ಟರೆ ಪಟ್ಟಣ ಪೂರ್ತಿ ವಿಶ್ರಾಂತಿಯಲ್ಲಿ ಮುಳುಗಿದೆ. ನಾವಿದ್ದ ಜೀಪು ನಿಶ್ಶಬ್ದತೆಯನ್ನು ಸೀಳಿಕೊಂಡು ಶಬ್ದಮಾಡುತ್ತಾ ಅಮಾವಾಸ್ಯೆ ಕತ್ತಲಲ್ಲಿ ಮಿಣುಕು ಹುಳುವಿನಂತೆ ಬೆಳಕು ಚೆಲ್ಲುತ್ತಾ ಹೋಗುತ್ತಿದೆ. ಗಾಳಿ ಥಂಡಿಯಾಗಿ ಮುಖಕ್ಕೆ ರಾಚುತ್ತಿದೆ. ಅಂತೂ ಮಧ್ಯೆರಾತ್ರಿ ಹನ್ನೆರಡೂ ಕಾಲಿಗೆ ಕ್ಯಾಂಪ್ ತಲುಪಿದಾಗ ಸುಶೀಲ ಓಡಿ ಬಂದಳು.

"ಖಾನ್ ಸಾಬ್ ಗುಡ್‌ನೈಟ್" ಎಂದು ಹೇಳಿ ಕೊಠಡಿ ಸೇರಿಕೊಂಡೆವು. ವಾಖಿಲೂ ಖಾಲಿ ಮಾಡಿದ ಕೊಠಡಿಯಲ್ಲಿ ಈಗ ನಾವಿದ್ದೆವು.

ಕ್ರಾಂತಿ ಈಗೀಗ ಮಾತುಗಳನ್ನು ಬಹಳ ಸ್ವಚ್ಛವಾಗಿ, ಸ್ಪಷ್ಟವಾಗಿ ಮುದ್ದಾಗಿ ಮಾತನಾಡುತ್ತಿದ್ದ ತೆಲುಗು ಮತ್ತು ಕನ್ನಡಕ್ಕಿಂತ ಹಿಂದಿಯಲ್ಲಿ ಸ್ವಚ್ಛವಾಗಿ ಮಾತನಾಡುತ್ತಿದ್ದ. ಒಂದು ದಿನ ಸಾಯಂಕಾಲ ಶ್ರೀಮತಿ ದಶರತ್‌ಸಿಂಗ್ ನಮ್ಮ ಕ್ಯಾಂಪಿನಲ್ಲಿ ಕುಳಿತು ಆಕಾಶದ ಕಡೆಗೆ ಕೈ ತೋರಿಸಿ,

"ಏಯ್ ಕ್ರಾಂತಿ ಓ ಕ್ಯಾ ಹೈ ?" ಎಂದಳು. ಆಗಲೇ ಪೂರ್ವದಲ್ಲಿ ಹುಣ್ಣಿಮೆ ಚಂದ್ರ ಮೋಡಗಳ ಮಧ್ಯೆದಿಂದ ಹೊರಕ್ಕೆ ಬರಲು ಹೆಣಗಾಡುತ್ತಿದ್ದ. ಗುಂಜಾ ಮತ್ತು ಮುನ್ನಾ ಜೊತೆ ಆಟವಾಡುತ್ತಿದ್ದ ಕ್ರಾಂತಿ.

"ಆಂಟಿ ಚಂದಮಾಮಾ ಬಾದ್‌ಲಮೆ ಗುಸ್‌ಗಯಾ" ಎಂದು ಹೇಳಿ ಅವರ ಜೊತೆ ಮತ್ತೆ ಆಟವಾಡತೊಡಗಿದ. ನಾವೆಲ್ಲರೂ ಜೋರಾಗಿ ನಗ ತೊಡಗಿದೆವು. ಈ ಗುಸ್‌ಗಯಾ ಎಂಬ ಪದ ಅದುವರೆಗೂ ನನಗೂ ಗೊತ್ತಿರಲಿಲ್ಲ. ಒಂದೆರಡು ಸಲ ಸುಶೀಲ,

"ನೋಡಿ ಇವನು ಬಹಳ ತಲೆಹರಟೆ ಆಗಿಬಿಟ್ಟಿದ್ದಾನೆ, ನನಗೆ ಗೊತ್ತಿಲ್ಲದೆ ಮರೆಯಲ್ಲಿ ನಿಂತುಕೊಂಡು ಬಳಪ ತಿನ್ನುತ್ತಾನೆ" ಎಂದು ಅವನ ಎದುರಿಗೆ ಹೇಳಿದ್ದಳು.

ಒಂದು ದಿನ ಫೀಲ್ಡ್‌ನಿಂದ ಬಂದಿದ್ದೇ ತಡ ಕ್ರಾಂತಿ ಹತ್ತಿರ ಬಂದು,

"ಡ್ಯಾಡಿ ಒಂದು ವಿಷಯ" ಎಂದು ಮೆತ್ತಗೆ ಕಿವಿಯ ಹತ್ತಿರಕ್ಕೆ ಬಂದ. ಏನೋ ಎಂದು ಆಶ್ಚರ್ಯದಿಂದ ಕಿವಿಕೊಟ್ಟು ಕೇಳಿದೆ.

"ಡ್ಯಾಡಿ, ಮಮ್ಮಿ ಇವೊತ್ತು ಬಾಗಿಲ ಹತ್ತಿರ ನಿಂತುಕೊಂಡು ಬಳಪ ತಿನ್ನುತ್ತಿದ್ದಳು" ಎಂದ. ಅಷ್ಟರಲ್ಲಿ ಸುಶೀಲ ಬಂದು ಅದೇ ದೂರನ್ನು ಹೇಳಿದಳು. ಅವನ ದೂರು ಚೋರ್ ಕೊತವಾಲ್ ಮೇಲೆ ಹೇಳಿದಂತಿದೆ. ನನಗೆ ನಗು ತಡೆಯಲಾಗಲಿಲ್ಲ.

ಇನ್ನೊಂದು ಸಲ ಖಾನ್ ಅವರನ್ನು ನೋಡಲು ಇನ್ನೊಬ್ಬ ಖಾನ್ ನಮ್ಮ ಕ್ಯಾಂಪಿಗೆ ಬಂದಿದ್ದಾಗ ಡೇರೆಯ ಒಳಕ್ಕೆ ಇಣಕಿ ನೋಡಿ,

"ಹರೆ ಸ್ವಾಮಿ, ಸಾಬ್ ಇತನಾ ಚೋಟಾ ಖಟಿಯಾಮೇ ತೀನೋ ಲೋಗ್ ಕೈಸೆ ಸೋಯೇಂಗೆ" (ಇಷ್ಟು ಚಿಕ್ಕ ಮಂಚದ ಮೇಲೆ ಮೂವರು ಹೇಗೆ ಮಲಗುತ್ತೀರಿ) ಎಂದು ಕೇಳಿದ ಪ್ರಶ್ನೆಗೆ ಕ್ರಾಂತಿ ಈ ತರಹ ಉತ್ತರ ನೀಡಿ ನಮ್ಮನ್ನ ನಗೆ ಪಾಟಲು ಮಾಡಿಬಿಟ್ಟಿದ್ದ.

"ಅಂಕಲ್, ಮಮ್ಮಿ ಖಟಿಯಾಕ್ ಉಪ್ಪರ್, ಡ್ಯಾಡಿ ಮಮ್ಮಿಕಾ ಉಪ್ಪರ್, ಹಮ್ ಪಾಪಾಕ ಉಪ್ಪರ್ ಸೋತಾ ಹೈ (ಅಂಕಲ್, ಮಮ್ಮಿ ಮಂಚದ ಮೇಲೆ, ಡ್ಯಾಡಿ ಮಮ್ಮಿ ಮೇಲೆ, ನಾನು ಡ್ಯಾಡಿ ಮೇಲೆ ನಿದ್ದೆ ಮಾಡುತ್ತೇನೆ) ಎಂದು ಹೇಳಿದ್ದ.

"ಹರೆ ಹೈಸಾಬಿ ಹೋತಾ ಹೈ ಕ್ಯಾ" ಎಂದಿದ್ದೆ ಇಬ್ಬರು ನಗಾಡಿದ್ದೆ ನಗಾಡಿದ್ದು. ಕ್ರಾಂತಿ ಆಗಾಗ ನನ್ನ ಬೆನ್ನು ಮೇಲೆ ಸವಾರಿ ಮಾಡುತ್ತಿದ್ದುದ್ದೆ ಇದಕ್ಕೆ ಕಾರಣ.

ದಿನಗಳು ಉರುಳುತ್ತಿದ್ದಂತೆ ಶ್ರೀಮತಿ ಸಿಂಗ್ ಮತ್ತು ಅವರ ಮನೆಯವರು ಸುಶೀಲಳಿಗೆ ಬಹಳ ಹತ್ತಿರವಾಗಿಬಿಟ್ಟಿದ್ದರು. ಚಳಿಗಾಲ ನಿಧಾನವಾಗಿ ಮಾಯವಾಗಿ ಬಿಸಿಲು ಶುರುವಾಗುತ್ತಿತ್ತು. ಬೆಳಗ್ಗೆ ಒಂದು ಲೀಟರ್ ಹಾಲು, ಮಧ್ಯಾಹ್ನ ಒಂದು ಲೀಟರಷ್ಟು ಲಸ್ಸಿ ಕ್ಯಾಂಪಿಗೆ ಬಂದು ಬಿಡುತ್ತಿತ್ತು. ಹಾಲಿಗೆ ಹಣ ಕೊಡಲು ಹೋಗಿ ಶ್ರೀಮತಿ ಸಿಂಗ್ ನಮ್ಮ

ಜೊತೆ ಕೋಪಿಸಿಕೊಂಡು ಎರಡು ದಿನ ಮಾತೇ ಬಿಟ್ಟುಬಿಟ್ಟಿದ್ದರು.

ಅವರ ಮನೆಯ ಹತ್ತಿರ ಖಾಲಿ ಇದ್ದ ಒಂದು ಮನೆಗೆ ಟ್ಯೂಬ್‌ಲೈಟುಗಳು, ಸೀಲಿಂಗ್ ಫ್ಯಾನು ಮತ್ತು ಮಂಚವನ್ನು ತಂದು ಹಾಕಿ ರೆಡಿಮಾಡಿಕೊಟ್ಟರು. ಎರಡು ಮೂರು ದಿನಗಳಿಗೊಮ್ಮೆ ಗಲಾಟೆಮಾಡಿ ಊಟಕ್ಕೆ ಕರೆದೊಯ್ಯುತ್ತಿದ್ದರು. ವಾರಕ್ಕೆ ಒಮ್ಮೆ ಅವರೇ ಸುಶೀಲಳನ್ನು ಕರೆದುಕೊಂಡು ಹೋಗಿ ಮಾಂಸದ ಸಾರು ಮಾಡಿಸಿಕೊಳ್ಳುತ್ತಿದ್ದರು. ಹಾಗೆ ಅವರು ಸುಶೀಲಳ ಕೈಯಿಂದ ಇಡ್ಲಿ, ದೋಸೆ, ಪಂಗಣಗಳು ಮಾಡುವುದನ್ನು ಸಹ ಕಲಿತುಕೊಂಡಿದ್ದರು.

ಉತ್ತರ ಪ್ರದೇಶದಲ್ಲಿ ಗೋಧಿ ಹಿಟ್ಟಿನಲ್ಲಿ ವಿಧವಿಧವಾದ ತಿಂಡಿಗಳನ್ನು ಮಾಡುತ್ತಾರೆ. ಪರೋಟ, ಸೂಕ್ಕಾರೋಟಿ, ತಂಡೂರಿ, ಬಟೂರಾ, ಪೂರಿ, ಕಚೋರಿ, ಪಾನ್‌ಪೂರಿ ಹೀಗೆ ಹೆಸರುಗಳು ಬೆಳೆಯುತ್ತಾ ಹೋಗುತ್ತವೆ. ಒಮ್ಮೆ ಡಾಕ್ಟರ್ ಅವರ ಮನೆಯಲ್ಲಿ ನಮಗೆ ಅವರ ಸ್ಥಳೀಯ ವಿಶೇಷ ತಿಂಡಿಯನ್ನು ತಿನಿಸುವುದಾಗಿ ಹೇಳಿ ಕರೆದುಕೊಂಡು ಹೋದರು. ಅದರ ಹೆಸರು ಬಟೂರಾ ಮತ್ತು ಬೈಗನ್ ಬರ್ತಾ, (ಬೆರಣಿಯಲ್ಲಿ ಸುಟ್ಟ ಆಲೂಗೆಡ್ಡೆ ಆಕಾರದ ಗೋಧಿ ಉಂಡೆಗಳ ಮಧ್ಯದಲ್ಲಿ ಒಂದು ರೀತಿಯ ಮಸಾಲೆ ಮತ್ತು ಬದನೆಕಾಯಿಯಲ್ಲಿ ಮಾಡಿದ ಗೊಜ್ಜು) ತಟ್ಟೆಯ ತುಂಬಾ ತಂದು ಮುಂದಿಟ್ಟರು. ಸಿಂಗ್ ಅವರು ಮೊದಲಿಗೆ ಆಲೂಗೆಡ್ಡೆಗಳಂತೆ ಕಾಣುತ್ತಿದ್ದ ಗೋಧಿಉಂಡೆಗಳ ಜೊತೆಗೆ ಬೈಗನ್ ಭರ್ತಾ ತಟ್ಟೆಯಲ್ಲಿ ಹಾಕಿಕೊಟ್ಟರು. ಮುರಿದರೆ ಬಿಸಿ ಬಿಸಿಯಾಗಿ ಹೊಗೆಯಾಡುತ್ತಿವೆ. ಬಟೂರಾ ಮುರಿದು ಭರ್ತಾದಲ್ಲಿ ಅದ್ದಿಕೊಂಡು ತಿನ್ನುವ ವಿಧಾನ ತೋರಿಸಿದರು. ಸುಶೀಲ ಹಿಂದೆ ಮುಂದೆ ನೋಡುತ್ತಿದ್ದಂತೆ ನಾನು ಶುರು ಮಾಡಿಯೇ ಬಿಟ್ಟೆ. ಬಟೂರಾ ಮಧ್ಯದಲ್ಲಿ ತುಂಬಿರುವ ಮಸಾಲಾ ಒಂದು ವಿಚಿತ್ರ ರುಚಿಯಾಗಿದೆ. ಅಮ್ ಚೂರ್‌ನ (ಮಾವಿನ ಕಾಯಿ ಮಸಾಲೆ) ಜೊತೆಯಲ್ಲಿ ಶುಂಠಿ, ಇಂಗು, ಉಪ್ಪು ಕಾರ ಇನ್ನೂ ಏನೇನೋ ಸೇರಿಕೊಂಡಿದೆ.

ಜಾಸ್ತಿ ಕಾರ ಇರುವ ತಿಂಡಿಗಳು ಏನೇ ಆಗಲಿ ತಿಂದಷ್ಟು ತಿನ್ನುತ್ತಲೇ ಇರಬೇಕೆನಿಸುತ್ತದೆ. ಮುಖದಲ್ಲಿ ಬೆವರು ಇಳಿದು ಬರುತ್ತಿದ್ದಂತೆ, ನನ್ನ ಹೋರಾಟವನ್ನು ಒಂದಕ್ಕೆ ತೆಗೆದುಕೊಂಡುಬಿಟ್ಟೆ. ಡಾಕ್ಟರ್ ಮಾತ್ರ ತಿನ್ನುತ್ತಾ ಹಿಂದೆ ಬಿದ್ದ ಯೋಧನನ್ನು ಹುರಿದುಂಬಿಸುವಂತೆ ಏನೇನೋ ಹೇಳಿ ನೋಡಿದರು. ನಾನು ಮಾತ್ರ ಜಪ್ಪಯ್ಯ ಅನ್ನಲಿಲ್ಲ.

ಸುಶೀಲ ಆಮೇಲೆ ತಿನ್ನುತ್ತೇನೆಂದು ಸ್ವಲ್ಪ ಕಟ್ಟಿಸಿಕೊಂಡು ಬಿಟ್ಟಳು. ಸುಶೀಲಳಿಗೆ ಇದ್ದ ಒಳ್ಳೆ ಗುಣಗಳಲ್ಲಿ ಇದೂ ಒಂದು. ಜನಗಳ ಎದುರಲ್ಲಿ ತಿನ್ನುವುದಕ್ಕಿಂತ ಮರೆಯಲ್ಲಿ ತಿನ್ನುವುದೇ ಜಾಸ್ತಿ.

* * *

## 11 ಸೋನಾ, ಬೇಲನ್ ದಡಗಳಲ್ಲಿ

ಖಾನ್ ಮತ್ತು ನಾನು, ಇಬ್ಬರು ಕೆಲಸಗಾರರ ಜೊತೆ ಸೋನ್ ಉಪನದಿ ಬೇಲನ್ ನದಿಯ ದಡಗಳಲ್ಲಿ ಪುರಾತನ ಗುಹೆಗಳಲ್ಲಿ ಶಿಲಾಯುಗದ ಜನರು ಉಪಯೋಗಿಸುತ್ತಿದ್ದ ಉಪಕರಣಗಳು ಮತ್ತು ಅವರು ಬಿಡಿಸಿದ್ದ ಚಿತ್ರಕಲೆಯನ್ನು ಹುಡುಕುತ್ತಿದ್ದೆವು.

ವಿಶಾಲವಾಗಿ ಸಸ್ಯಶಾಮಲೆಗಳ ಮಧ್ಯೆ ಹಾಯಾಗಿ ಹರಿಯುತ್ತಿದ್ದ ಬೇಲನ್ ನದಿ ಒಮ್ಮೆಲೆ ಆಳವಾದ ಕೊರಕಲನ್ನು ಸೃಷ್ಟಿಸಿ ಎತ್ತರದ ದಿಬ್ಬದಿಂದ ಘರ್ಜಿಸಿ ಕೆಳಕ್ಕೆ ದುಮುಕುತ್ತಿದೆ. ಮರಗಳ ಮಧ್ಯದಿಂದ ಆ ದಿಬ್ಬದ ಖಾಲಿ ಕಲ್ಲು ಬಂಡೆಗಳ ಮೇಲೆ ನಡೆದು ಬರುತ್ತಿದ್ದಂತೆ ಎದುರಿಗೆ ಒಂದು ಸಣ್ಣ ಗುಡಿ, ಗುಡಿಯ ಮುಂದೆ ಮೂವರು ನಿಂತಿದ್ದಾರೆ. ಅದರಲ್ಲಿ ಸುಮಾರು ಏಳೆಂಟು ವರ್ಷಗಳ ಹುಡುಗನು ಇದ್ದಾನೆ. ಅಲ್ಲಿಯವರೆಗೂ ನಮ್ಮನ್ನು ಗಮನಿಸಿದ ಆ ಹುಡುಗ ನಾವು ಬರುವ ಸಪ್ಪಳ ಕೇಳಿ ನಮ್ಮ ಕಡೆಗೆ ತಿರುಗಿ ನೋಡಿದ, ಅಷ್ಟೇ.. ? ಒಮ್ಮೆಲೆ ಅಯ್ಯ..ಯ್ಯೋ.. ಹ್ಹಾ..ಹ್ಹಾ.. ಎಂದು ಕಿರುಚುತ್ತಾ ನದಿ ಧುಮುಕುತ್ತಿದ್ದ ಕಡೆಗೆ ಎದ್ದುಬಿದ್ದು ಮೈಮೇಲೆ ಸ್ವಲ್ಪವೂ ಜ್ಞಾನ ಇಲ್ಲದವನಂತೆ ಓಡತೊಡಗಿದ. ಏನಾಗುತ್ತಿದೆ ಎಂದುಕೊಳ್ಳುವಷ್ಟರಲ್ಲಿ ಹುಡುಗ ನದಿ ಧುಮುಕುತ್ತಿರುವ ಸ್ಥಳಕ್ಕೆ ಹತ್ತಿರ ಹತ್ತಿರ ಓಡಿಬಿಟ್ಟಿದ್ದ. ನದಿಯ ಎರಡೂ ಕಡೆಯೂ ಕೋಟೆಯ ಗೋಡೆಗಳಂತೆ ಮುರಿದು ನಿಂತಿರುವ ಕಲ್ಲುಬಂಡೆಗಳು. ಒಂದು ಕಡೆ ನಾವು, ಇನ್ನೊಂದು ಕಡೆ ನದಿ.

ನಿಂತಿದ್ದವರು ಬಹುಶಃ ಹುಡುಗನ ತಂದೆ ತಾಯಿ ಇರಬಹುದು.

"ಏನು ನೋಡ್ತಿ ಯಾ ಆ ಹುಡುಗನನ್ನು ಹಿಡಿದುಕೋ ಓಡು" ಖಾನ್ ಕೂಗಿದರು. ಆಗಲೆ ಪ್ರಜ್ಞೆ ಬಂದವನಂತೆ ಆ ಗಂಡಸು, ಹುಡುಗನ ಹಿಂದೆ ಓಡಿದ. ಅಷ್ಟರಲ್ಲಿ ಆ ಹುಡುಗ ಒಂದು ಕಲ್ಲಿನ್ನು ಎಡವಿ, ರಪ್ಪನೆ ಬಿದ್ದುಬಿಟ್ಟ. ಗಂಡಸು ಹುಡುಗನನ್ನು ಕಂಕುಳಲ್ಲಿ ಎತ್ತಿಕೊಂಡು ನಮ್ಮ ಹತ್ತಿರಕ್ಕೆ ನಿಧಾನವಾಗಿ ನಡೆದು ಬಂದ. ಹುಡುಗ ಇನ್ನೂ ಸರಿಯಾಗಿ ಉಸಿರಾಡಲಾಗದೆ ತೊಂದರೆ ಪಡುತ್ತಿದ್ದ.

ಎದುರಿಗೆ ಇದ್ದ ಸಣ್ಣ ಗುಡಿಯಲ್ಲಿ ಒಂದು ಕಲ್ಲು ವಿಗ್ರಹದ ಸುತ್ತಲು ಅರಶಿನ, ಕುಂಕುಮ, ತೆಂಗಿನಕಾಯಿ, ನಿಂಬೆಹಣ್ಣು ಇನ್ನೂ ಕೆಲವು ಪೂಜೆ ಸಾಮಾನುಗಳು ಹರಡಿ ಕೊಂಡಿವೆ. ಒಂದು ಕೋಳಿಯನ್ನು ಕತ್ತರಿಸಿ ರಕ್ತವನ್ನು ಆಗಲೇ ಚುಮುಕಿಸಿದ್ದಾರೆ. ರುಂಡ ಕಳೆದುಕೊಂಡ ಕೋಳಿ ಕಲ್ಲು ಬಂಡೆ ಮೇಲೆ ಇನ್ನೂ ಪಟಪಟನೆ ಹೊರಳಾಡುತ್ತಿದೆ.

ಅಗರಬತ್ತಿಯ ಹೊಗೆ ಒಂದೇ ಸಮನೆ ಗಾಳಿಯಲ್ಲಿ ತೇಲಿಹೋಗುತ್ತಿದ್ದು ವಿಗ್ರಹದ ಎದುರಿಗೆ ಒಬ್ಬ ಮಾಯಲು ಮರಾಠಿಯಂತಹ ಮಂತ್ರವಾದಿ ಕುಳಿತು ಯಾವುದೋ ಮಂತ್ರವನ್ನು ಪಠಿಸುತ್ತಿದ್ದಾನೆ. ವಿಗ್ರಹದ ಎಡಕ್ಕೆ ಸುಮಾರು ಇಪ್ಪತ್ತು ವರ್ಷಗಳ ಒಂದು ಹೆಣ್ಣು ಒದ್ದೆಯಾದ ಕೆಂಪು ಸೀರೆಯನ್ನುಟ್ಟು ಕೂದಲು ಹರಡಿಕೊಂಡು ಕುಳಿತಿದ್ದಾಳೆ. ಮುಖವೆಲ್ಲ ಸೊರಗಿದ್ದು ಹಣೆಯಲ್ಲಿ ದೊಡ್ಡ ಕುಂಕುಮ ಬೊಟ್ಟಿದೆ. ಯಾವುದೋ ಸೊಪ್ಪು; ಕಾಳುಗಳನ್ನು ತನ್ನ ಅಂಗೈಗಳ ತುಂಬಾ ತುಂಬಿಕೊಂಡಿದ್ದಾಳೆ. ಒಟ್ಟಿನಲ್ಲಿ ಅವಳನ್ನು ಅಧೀನಪಡಿಸಿಕೊಂಡಿರುವ ಯಾವುದೋ ಕ್ಷುದ್ರ ದೇವತೆಯನ್ನು ಆ ಮಂತ್ರವಾದಿ ಓಡಿಸಲು ಪ್ರಯತ್ನ ನಡೆಸಿದಂತಿದೆ. ಮಂತ್ರವಾದಿ ಮಾತ್ರ ತನ್ನ ಪಾಡಿಗೆ ತಾನು ನಮ್ಮ ಕಡೆಗೆ ಬೆನ್ನು ತಿರುಗಿಸಿ ತನ್ನ ಕಾರ್ಯದಲ್ಲಿ ಮಗ್ನನಾಗಿದ್ದಾನೆ.

ನಮಗೆ ಅಲ್ಲೇನು ಕೆಲಸವಿಲ್ಲದ ಕಾರಣ ಜಾಸ್ತಿ ಮಾತನಾಡದೆ ಮುಂದಕ್ಕೆ ಹೊರಟೆವು. ಸಧ್ಯಕ್ಕೆ ಆ ಹುಡುಗ ಜಲಪಾತಕ್ಕೆ ಬೀಳದೆ ಪ್ರಾಣದಿಂದ ಪಾರಾದ ವಿಷಯ ಸಮಾಧಾನವನ್ನು ತಂದಿತ್ತು. ಇಷ್ಟಕ್ಕೂ ಆ ಹುಡುಗ ಓಡಿದ್ದರ ಕಾರಣವಾದರೂ ಏನೋ..? ನಾವು ಧರಿಸಿದ್ದ ಹ್ಯಾಟು, ಬೂಟು ಕನ್ನಡಕಗಳನ್ನು ನೋಡಿ ಹೆದರಿರಬೇಕು.

ನಮಗೆ ಮುಂಚೆ ಅನೇಕ ಭೂವಿಜ್ಞಾನಿಗಳು ಜೇಲನ್ ನದಿಯ ದಡಗಳಲ್ಲಿ ಪ್ರಾಚೀನ ಕಾಲದ ಜನ ಜೀವಿಸುತ್ತಿದ್ದ ಹತ್ತಾರು ಸ್ಥಳಗಳನ್ನು ಗುರುತಿಸಿ. ಅವರು ಉಪಯೋಗಿಸುತ್ತಿದ್ದ ಅನೇಕ ಉಪಕರಣಗಳನ್ನು, ಸಹ ಸಂಗ್ರಹ ಮಾಡಿದ್ದರು. ನಾವು ಕೆಲವು ಮಾಹಿತಿಗಳ ಸಹಾಯದಿಂದ ನೂತನ ಶಿಲಾಯುಗದ ಜನ ಗುಹೆಗಳ ಒಳಗೆ ಬಿಡಿಸಿದ್ದ ಚಿತ್ರ ಕಲೆಯನ್ನು ಹುಡುಕುತ್ತಿದ್ದೆವು. ನದಿ ಧುಮುಕುತ್ತಿದ್ದ ಸ್ಥಳ ಪ್ರಪಾತದಂತೆ ಕಾಣಿಸುತ್ತಿದ್ದು, ಎರಡು ಕಡೆಯೂ ದೊಡ್ಡ ದೊಡ್ಡ ಉಸುಗು ಕಲ್ಲು ಬಂಡೆಗಳು ಮೆಟ್ಟಿಲುಗಳಂತೆ ಕಡಿದುಕೊಂಡು, ನದಿ ಇನ್ನೂ ಆಳವಾಗಿ ಹರಿಯುವುದಕ್ಕೆ ಸಹಾಯವಾಗಿ ನಿಂತಿವೆ.

ಸುಮಾರು ದೂರ ಸುತ್ತಿಕೊಂಡು ಬಂದ ನಾವು ಕೆಳಕ್ಕೆ ಇಳಿಯಲು ಅನುಕೂಲವಾದ ಮತ್ತು ಇಕ್ಕಟ್ಟಾದ ದಾರಿಯ ಮುಖಾಂತರ ನದಿ ಹರಿಯುತ್ತಿದ್ದ ಮಟ್ಟಕ್ಕೆ ಇಳಿದು, ಸಾಧ್ಯವಾದಷ್ಟು ಕಲ್ಲು ಬಂಡೆಗಳನ್ನು ನೋಡುತ್ತಾ ನೋಡುತ್ತಾ ಮುಂದೆ ಸಾಗುತ್ತಿದ್ದೇವೆ. ಹರಿಯುವ ನೀರು, ಬಿಸುವ ಗಾಳಿ ಒಂದನ್ನೊಂದು ಬೆಸೆದುಕೊಂಡು ದಿಗಿಲು ಹುಟ್ಟಿಸುವಂತಹ ವಾತಾವರಣ ಸೃಷ್ಟಿಯಾಗಿದೆ. ಒಬ್ಬ ಕೆಲಸಗಾರ ಮುಂದೆ ಇನ್ನೊಬ್ಬ ಹಿಂದೆ, ಮಧ್ಯೆ ನಾವಿಬ್ಬರು.

ಒಂದು ಕಡೆ ಚಾವಣಿಯಂತೆ ಎತ್ತರವಾಗಿ ಎದ್ದು ನಿಂತಿರುವ ಬಂಡೆಗಳು. ಅದರ ಕೆಳಗೆ 8x15 ಅಡಿಗಳ ವಿಶಾಲವಾದ ಪರದೆಯ ತರಹ ಕಡಿದುಕೊಂಡ ಬಂಡೆ. ಅದರ ಮೇಲೆ ಹೊರಕ್ಕೆ ಚಾವಣಿಯಂತೆ ಚಾಚಿ ನಿಂತಿರುವ ಮತ್ತೊಂದು ಬಂಡೆ. ಆ 8x15 ಅಡಿಗಳ

ವಿಶಾಲವಾದ ಪರದೆಯ ಮೇಲೆ ಚಿತ್ರವಿಚಿತ್ರವಾಗಿ ರಚಿಸಿರುವ ಚಿತ್ರ ಕಲೆಯನ್ನು ನೋಡಿದ್ದೆ ಬೆಕ್ಕಸಬೆರಗಾಗಿ ಏನೂ ಮಾತನಾಡದೆ ಮೂಕರಾಗಿಬಿಟ್ಟೆವು.

ಅನಂತರ ಆ ಚಿತ್ರ ಕಲೆಯ ಬಗ್ಗೆ ನಮ್ಮ ಅಭಿಪ್ರಾಯಗಳನ್ನು ವಿನಿಮಯ ಮಾಡಿಕೊಂಡೆವು. ಕಾಡುಗಳಲ್ಲಿ ಜೀವಿಸುತ್ತಿದ್ದ ಆದಿ ಮಾನವ ತಿಳುವಳಿಕೆ ಹೆಚ್ಚಾದಂತೆ ಮರಗಳಿಂದ ಗುಹೆಗಳನ್ನು ಸೇರಿ, ಗುಹೆಗಳಿಂದ ಬಯಲಿಗೆ ಬರುವ ಸನ್ನಾಹದ[illegible]ಾಗ ಚಿತ್ರಕಲೆಯನ್ನು ರೂಡಿಸಿಕೊಂಡಿದ್ದ. ಸುತ್ತಮುತ್ತಲು ಸಿಗುವ ಪ್ರಾಣಿಗಳನ್ನು ಬೇಟೆಯಾಡಿ ಗುಹೆಗಳಲ್ಲಿ ವಿಶ್ರಾಂತಿ ಪಡೆಯುವ ಸಮಯದಲ್ಲಿ ಈ ಚಿತ್ರಗಳನ್ನು ಬಿಡಿಸಿರುವನು. ಆ ಚಿತ್ರಗಳಲ್ಲಿ ಹೆಚ್ಚೆಚ್ಚಾಗಿ ಅವನಿಗೆ ಸಿಗುತ್ತಿದ್ದ ಪ್ರಾಣಿಗಳು, ಅವುಗಳನ್ನು ಬೇಟೆಯಾಡುತ್ತಿದ್ದ ರೀತಿ ಮತ್ತು ಸಾಕು ಪ್ರಾಣಿಗಳ ಚಿತ್ರಗಳನ್ನು ಬಿಡಿಸಿಕೊಂಡಿದ್ದಾನೆ. ಮಧ್ಯೆ ಮಧ್ಯೆ ಸೂರ್ಯನ ಚಿತ್ರದ ಜೊತೆಗೆ ಇನ್ನೂ ಕೆಲವು ಚಿನ್ಹೆಗಳನ್ನು ಬಿಡಿಸಲಾಗಿದೆ. ಅವರು ಬಿಡಿಸಿದ್ದ ಪ್ರಾಣಿಗಳೆಂದರೆ ಆನೆ, ಕಾಡು ಹಂದಿ, ಕರಡಿ, [illegible]ಲ, ಜಿಂಕೆ ಮೀನು ಮತ್ತು ಒಂದು ಉದ್ದ ಗೋಣಿನ ಜಿರಾಫೆಯಂತಹ ಪ್ರಾಣಿ. ಜಿರಾಫೆ ಸಮಾನ್ಯವಾಗಿ ಭಾರತದ ಉಪಖಂಡದಲ್ಲಿ ಆಗ ಇರಲಿಲ್ಲವೆನ್ನುವ ಅಭಿಪ್ರಾಯವಿದೆ.

ಚಿತ್ರಗಳ ಬಣ್ಣ ಅಂಗೈಗಳ ಮೇಲೆ ಮೆಹಂಧಿ ಬಣ್ಣದಂತೆ ಕಾಣುತ್ತಿದ್ದು, ಆ ಬಣ್ಣಗಳನ್ನು ಯಾವ ರಾಸಾಯನಿಕಗಳಿಂದ ತಯಾರಿಸುತ್ತಿದ್ದರೋ ಏನೋ..? ಹಳದಿ ಓಕರ್ ಕಲ್ಲುಗಳ ಜೊತೆ ಕೆಲವು ಗಿಡಮೂಲಿಕೆಗಳು ಮತ್ತು ಪ್ರಾಣಿಗಳ ಕೊಬ್ಬಿನಿಂದ ತಯಾರಿಸಿದ ಬಣ್ಣವಿರಬೇಕು ಎನ್ನುವ ಅಭಿಪ್ರಾಯವಿದೆ. ಎಲ್ಲಾ ಚಿತ್ರಗಳನ್ನೂ [illegible]ಲ್ಲಿ ಚಿತ್ರಿಸಿಕೊಂಡು ನಾಲ್ಕಾರು ಫೋಟೋಗಳನ್ನು ಕ್ಯಾಮರಾದಲ್ಲಿ ಸೆರೆ ಹಿಡಿದುಕೊಂಡು ಹಿಂದಕ್ಕೆ ಬಂದೆವು. ಆ ಚಿತ್ರಗಳನ್ನು ಬಿಡಿಸಿದ ಜನ, ಅವರ ಜೀವನ ಶೈಲಿ [illegible]ರಬಹುದು..? ಎಷ್ಟು ವರ್ಷಗಳ ಹಿಂದಿನ ಕತೆಗಳಿರಬಹುದು..? ಯೋಚಿಸುತ್ತಾ ಯಾ[illegible]ಚಿಸುತ್ತಾ ಅಂದಿನ ಕೆಲಸ ಮುಗಿಸಿದೆವು.

* * *

ಅಲೀಮಿಯ ಅಬಿಸ[illegible]ಂದ ಬಂದ ಕೆಲವೇ ದಿನಗಳಲ್ಲಿ ಹತ್ತಾರು ಸಣ್ಣಸಣ್ಣ ಕೋಳಿ ಪಿಳ್ಳೆಗಳನ್ನು ಕೊಂಡು ತಂದು ಶಿಬಿರದ[illegible] ಸಾಕತೊಡಗಿದ. ಆ ಮರಿಗಳು ಕೋಳಿಗಳಾಗಿ ಕೊಬ್ಬಿರೆ ಒಂದು ಕೆ.ಜಿ.ಯಿಂದ ಎರಡು ಕೆ.ಜಿ. ಯವರೆಗೂ ಮಾಂಸ ಬೀಳುವಷ್ಟು ಪುಷ್ಠಿಯಾಗಿ ಬೆಳೆದು ನಿಂತಿದ್ದವು. ಅವುಗಳ ಜೊತೆಯೆ ಖಾನ್ ಕೂಡ ಇನ್ನೊಂದಷ್ಟು ಕೋಳಿಪಿಳ್ಳೆಗಳನ್ನು ತಂದುಬಿಟ್ಟಿದ್ದರು. ಅವು ಕೂಡ ಹಾಗೇ ಬೆಳೆದು ನಿಂತಿದ್ದವು.

ಇದರ ಮಧ್ಯೆದಲ್ಲಿ ಅಲೀಮಿಯ ಒಂದು ವಾರ ರಜಾಹಾಕಿ ಲಖನೌಗೆ ಹೋಗಿದ್ದ. ಡಾಕ್ಟರ್ ನಮಗೆ ಕ್ವಾರ್ಟರ್ಸ್ ಕೊಟ್ಟಿದ್ದರಿಂದ ನಾವು ಡೇರೆಗಳ ಶಿಬಿರದಲ್ಲಿರಲಿಲ್ಲ. ಶಿಬಿರದಲ್ಲಿ ಖಾನ್ ಜೊತೆಗೆ ಇಬ್ಬರು ಕೆಲಸಗಾರರು ಮಾತ್ರ ಉಳಿದಿದ್ದರು. ಸಂಕಟ ರಾತ್ರಿಯ ಕಾವಲುಗಾರನಾದರೆ, ಇನ್ನೊಬ್ಬ ದೇವಮಣಿ ಅಡಿಗೆ ಭಟ್ಟನಾಗಿದ್ದ.

ಅಲೀಮಿಯ ರಜಾ ಮುಗಿಸಿಕೊಂಡು ಭೋಪಾನ್‌ಗೆ ಬಂದಿಳಿದ. ಖಾನ್ ಮತ್ತು ಅಲೀಮಿಯ ಸಾಕಿದ್ದ ಹದಿನೈದು ಕೋಳಿಗಳಲ್ಲಿ ಖಾನ್ ಸಾಕಿದ್ದ ಆರು ಕೋಳಿಗಳು ಉಳಿದಿದ್ದರೆ, ಅಲೀಮಿಯ ಸಾಕಿದ್ದ ಒಂದು ಕೋಳಿಯೂ ಉಳಿದಿರಲಿಲ್ಲ. ಈ ವಿದ್ರಾವಕ ನೋವಿನ ಸಂಗತಿ ತಿಳಿದಿದ್ದೆ ಧಗಧಗಿಸಿಹೋದ ಅಲೀಮಿಯ ಬೆಳಿಗ್ಗೆಯೇ ನಾವಿದ್ದ ಮನೆಗೆ ಬಂದು "ದಬದಬ" ಬಾಗಿಲು ಬಡಿದ. ಕಣ್ಣುಜ್ಜಿಕೊಂಡು ಹೊರಕ್ಕೆ ಬಂದಿದ್ದೆ,

"ಸಲಾಮ್ [illegible]" ಎಂದು ಒಂದು ಸೆಲ್ಯೂಟ್ ಹೊಡೆದು,

" ನೀವು ಇಲ್ಲಿಗೆ ಬಂದು ನನಗೆ ಬಹಳ ನಷ್ಟ ಮಾಡಿಬಿಟ್ರಿ ಸಾರ್" ಎಂದ ನನಗೆ ಏನೂ ಅರ್ಥವಾಗಲಿಲ್ಲ. ಒಂದೆರಡು ಕ್ಷಣಗಳಾದ ಮೇಲೆ,

"ನಾನು ಇಲ್ಲಿಗೆ ಬಂದಿದ್ದು. ನಿನಗೆ ನಷ್ಟ ಆಗಿದ್ದು.. ಅಲೀಮಿಯ ಅದೇನೋ ಅರ್ಥವಾಗಲಿಲ್ಲ ಬಿಡಿಸು" ಎಂದೆ. (ಅಲ್ಲಿಯವರೆಗೂ ನನಗೂ ಗೊತ್ತಿರಲಿಲ್ಲ.)

"ಹರೆ ಸಾಬ್ ನಾನು ಏನು ಹೇಳಲಿ..? ನನ್ನದು ಎಂಟು ಕೋಳಿಗಳಿದ್ದುವು. ಖಾನ್ ಸಾಬ್‌ರದು ಏಳು ಕೋಳಿಗಳಿದ್ದವು. ಲಖನೌಗೆ ಹೋಗಿ ಬರುವಷ್ಟರಲ್ಲಿ ಅವರದು ಆರು ಕೋಳಿಗಳಿದ್ದರೆ, ನನ್ನವು ಎಲ್ಲಾ ಖಾಲಿ, ಒಂದೂ ಇಲ್ಲ, ನೀವು ನೋಡಿದಾಗ ಎಷ್ಟು ಕೋಳಿಗಳಿದ್ದವು ?" ಪ್ರಶ್ನಿಸಿದ. ಪರಿಸ್ಥಿತಿ ತೀರ ಗಂಭೀರವಾಗಿದೆ ಎಂದುಕೊಂಡು,

"ಬರುವುದಕ್ಕಿಂತ ಮುಂದೆ ಎಲ್ಲಾ ಕೋಳಿಗಳು ಇದ್ದವೆನಿಸುತ್ತದೆ. ಅವುಗಳ ಬಗ್ಗೆ ನನಗೆ ಯಾರೂ ಏನೂ ತಿಳಿಸಲಿಲ್ಲ. ಅವುಗಳ ಲೆಕ್ಕವು ನನಗೆ ಗೊತ್ತಿಲ್ಲ" ಎಂದೆ.

"ನೋಡಿ ಸಾರ್ ಲಖನೌಗೆ ಹೋಗಿ ಬರುವುದರಲ್ಲಿ ನನ್ನ ಕೋಳಿಗಳೇ ಮಾಯವಾಗಲು ಕಾರಣವೇನು ? ಆ ಇಬ್ಬರು ಸಾಲಾಗಳು ಕಾಡು ಬೆಕ್ಕು ಎತ್ತಿಕೊಂಡು ಹೋಗಿದೆ ಎಂದು ಹೇಳುತ್ತಾರೆ. ಬೆಕ್ಕು ಅಲಿ ಅಹ್ಮದ್ ಕೋಳಿಗಳನ್ನೇ ಆಯ್ದುಕೊಳ್ಳಬೇಕೆ..? ನೀವು ಈ ಕಡೆ ಬಂದಿದ್ದೆ ಒಂದೊಂದೆ ಕೊಯ್ದು ತಿಂದುಬಿಟ್ಟಿದ್ದಾರೆ. ಅದೂ ಹೋಗಲಿ ಸಾರ್, ಒಂದು ದಿನ ಒಂದು ಕೋಳಿಯನ್ನು ಕಾಡು ಬೆಕ್ಕು ತಿಂದಿದೆ ಎಂದು ಕೊಳ್ಳೋಣ. ಮರು ದಿನದಿಂದಾದರೂ ಕೋಳಿಗಳನ್ನು ಸರಿಯಾಗಿ ಗೂಡಿನಲ್ಲಿ ಹಾಕಿ ಮುಚ್ಚಿಡಬೇಕಿತ್ತಲ್ಲವೇ.. ? ಅದೆಲ್ಲಾ ಹಾಳಾಗಿ

ಹೋಗಲಿ ಕಾಡು ಬೆಕ್ಕು ನನ್ನ ಕೋಳಿಗಳನ್ನೇ ಏಕೆ ತಿನ್ನಬೇಕು, ಅದೇನು ನನಗೆ ವೈರಿಯೆ ? ನಾನು ಬಿಡುವುದಿಲ್ಲ" ಎಂದಿದ್ದೆ, ತಾನು ಒಂದು ಕೋಳಿಯಂತೆ ಎಗರುತ್ತಾ ಎಗರುತ್ತಾ ಹೊರಟು ಹೋದ. ಬಟ್ಟೆ ಹಾಕಿಕೊಂಡು ನಾನು ಹಿಂದೆಯೇ ಹೋದೆ. ಖಾನ್ ಮತ್ತು ಅಲೀಮಿಯನ ನಡುವೆ ಮಾತಿನ ಚಕಮಕಿ ನಡೆಯುತ್ತಿತ್ತು. ಸ್ವಲ್ಪ ದೂರವೇ ನಿಂತು ಕೇಳಿಸಿಕೊಂಡೆ. ಸುಮಾರು ಹೊತ್ತು ಮಳೆ ಸುರಿದು ನಿಂತು ಹೋದಂತೆ ಆಯಿತು. ನಾನು ಮತ್ತೆ ಹಿಂದಕ್ಕೆ ಹೊರಟು ಬಂದೆ. ನಿಜ ನನಗೂ ಗೊತ್ತಿರಲಿಲ್ಲ. ಅನಂತರವೂ ತಿಳಿಯಲಿಲ್ಲ. ವಿಷಯ ಕೊನೆಗೂ ನಿಗೂಢವಾಗಿಯೇ ಉಳಿಯಿತು.

**ಮಹುವಾ (ಮಘುವಾ) :** ಮಾರ್ಚ್ ತಿಂಗಳು ಮುಗಿದು ಏಪ್ರಿಲ್ ತಿಂಗಳು ಶುರುವಾದಂತೆ ಶಿಬಿರದ ಮಧ್ಯದಲ್ಲಿದ್ದ ಎರಡು ದೊಡ್ಡ ದೊಡ್ಡ ಮರಗಳಿಂದ ಬಿದ್ದ "ಮಹುವಾ" ಮೊಗ್ಗುಗಳು ಮರದ ಕೆಳಗೆಲ್ಲಾ ಮುತ್ತುಗಳಂತೆ ಹರಡಿಕೊಂಡು ಬಿಡುತ್ತಿದ್ದವು. ತಿಳಿ ಹಳದಿ ಬಣ್ಣದ ಈ ಹೂವುಗಳು ದಪ್ಪವಾದ ಎಸಳುಗಳ ಜೊತೆಗೆ ಪುಟ್ಟದಾದ ಕಾಂಡವನ್ನು ಹೊಂದಿದ್ದು. ಒಂದು ಸಣ್ಣ ಗೆಜ್ಜೆಕಾಯಿಯಷ್ಟು ದಪ್ಪ ಇರುತ್ತಿದ್ದವು.

ಎಸಳುಗಳು ದಪ್ಪವಾಗಿದ್ದು. ಒಂದು ರೀತಿಯ ಸುಗಂಧ ದ್ರವ್ಯವನ್ನು ತುಂಬಿಕೊಂಡಿದ್ದು "ಪಥ್.. ಪಥ್.." ಎಂದು ಕೆಳಕ್ಕೆ ಬಿದ್ದು, ಬಿದ್ದ ರಭಸಕ್ಕೆ ಸಣ್ಣದಾಗಿ ಬಾಯಿ ತೆರೆದುಕೊಳ್ಳುತ್ತಿದ್ದವು. ಮರದ ಸುತ್ತಮುತ್ತಲು ವಾತಾವರಣದಲ್ಲಿ ಒಂದು ರೀತಿಯ ಮತ್ತು ಬರಿಸುವ ವಾಸನೆ ತುಂಬಿಕೊಳ್ಳುತ್ತಿತ್ತು. ಹೂವನ್ನು ಮೂಗಿನ ಹತ್ತಿರ ಹಿಡಿದುಕೊಂಡರೆ ಸ್ವಲ್ಪ ಕಟುವಾದ ವಾಸನೆ ಬರುತ್ತಿತ್ತು. ತಿಂದರೂ ಅಷ್ಟೇ ಸ್ವಲ್ಪ ಸಿಹಿಯ ಜೊತೆಗೆ ಒಗುರಾದ ರುಚಿ ಇರುತಿತ್ತು.

ಈ ಪ್ರದೇಶದಲ್ಲಿ ಬೆಳಕು ಮೂಡುವುದೇ ತಡ. ಮಕ್ಕಳೂ ಮರಿಯೆನ್ನದೆ ಎಲ್ಲರೂ "ಮಹುವಾ" ಹೂವುಗಳನ್ನು ಬುಟ್ಟಿಗಳಲ್ಲಿ ತುಂಬಿಕೊಂಡು ಮನೆಗಳ ಕಡೆಗೆ ನಡೆಯುತ್ತಿದ್ದರು. ರಾತ್ರಿಯಲ್ಲ ಹೂವುಗಳನ್ನು ಉದುರಿಸಿದ ಮರಗಳು ದಿನವೆಲ್ಲಾ ನಿಂತು ವಿಶ್ರಾಂತಿ ಪಡೆಯುವಂತೆ ಕಾಣುತ್ತಿದ್ದವು. ಈ ರೀತಿಯ ಮರಗಳು ಉತ್ತರ ಪ್ರದೇಶ, ಮಧ್ಯಪ್ರದೇಶ, ಬಿಹಾರ್ ಮತ್ತು ಒರಿಸ್ಸಾ ರಾಜ್ಯಗಳಲ್ಲಿ ಹೇರಳವಾಗಿವೆ. ಹೂವುಗಳು ಬಿಡುವ ಕಾಲದಲ್ಲಿ ಸಾಧ್ಯವಾದಷ್ಟು ಸಂಗ್ರಹಿಸಿ ಬಿಸಿಲಿನಲ್ಲಿ ಒಣಗಿಸಿ ಮನೆಯಲ್ಲಿ ರಾಶಿ ಮಾಡಿಕೊಳ್ಳುತ್ತಾರೆ. ಈ ಪ್ರದೇಶಗಳಲ್ಲಿ ಜೀವನ ನಡೆಸುವ ಬುಡಕಟ್ಟು ಜನ ಮತ್ತು ಬಡಜನ, ಒಣಗಿದ ಹೂವುಗಳಿಂದ ರೊಟ್ಟಿ, ಲಡ್ಡು (ಬೆಲ್ಲ ಬೆರಸಿ) ಇನ್ನೂ ಹಲವು ರೀತಿಯ ತಿಂಡಿಗಳನ್ನು ಮಾಡಿಕೊಳ್ಳುತ್ತಾರೆ. ಜೊತೆಗೆ

ಬಹಳ ಆರೋಗ್ಯಕರವಾದ ಮಧು ತಯಾರಿಸಿ ಕುಡಿದು ಪರಮಾತ್ಮನನ್ನು ಕಂಡುಕೊಳ್ಳುವುದು ಉಂಟು. ಒಟ್ಟಿನಲ್ಲಿ ಬುಡಕಟ್ಟು ಜನಾಂಗಕ್ಕೆ "ಮಹುವಾ" ಮರಗಳು ಒಂದು ವರದಾನವೇ ಸರಿ.

ಭೋಜಪುರಿ : ತುಳಸಿ ರಾಮಾಯಣದ, ಭಾರಿ ಪ್ರಭಾವವಿರುವ ಈ ಪ್ರದೇಶದಲ್ಲಿ ಭೋಜಪುರಿ ಎಂಬ ಸ್ಥಳೀಯ ಭಾಷೆ ಒಂದು ರೀತಿಯಲ್ಲಿ ತನ್ನ ಸ್ಥಳೀಯ ಸೊಗಡನ್ನು ಪಸರಿಸಿಕೊಂಡಿದೆ. ಎಲ್ಲಾ ಜನರೂ ಹಿಂದಿ ಭಾಷೆಯನ್ನೇ ಮಾತನಾಡಿದಂತೆ ತೋರಿದರು ಅದು ಭೋಜಪುರಿ ಭಾಷೆ, ಹಿಂದಿ ಮತ್ತು ಭೋಜಪುರಿ ಹೆಚ್ಚೂ ಕಡಿಮೆ ಒಂದೇ ರೀತಿಯ ಭಾಷೆಗಳಾದರು ಭೋಜಪುರಿಯ ಉಚ್ಚಾರಣೆ (accent) ತುಂಬಿರುವ ಹಿಂದಿ ಭಾಷೆ ಕೇಳಲು ಒಂದು ರೀತಿಯಲ್ಲಿ ಮೃದುವಾಗಿ ಮತ್ತು ಅಪ್ಯಾಯಮಾನವಾಗಿರುತ್ತದೆ. ಶುದ್ಧ ಭೋಜಪುರಿ, ಭಾಷೆ ಇನ್ನಷ್ಟು ಸೊಗಸಾಗಿರುತ್ತದೋ ಏನೋ..? ಅದನ್ನು ಕೇಳಿ ಅರ್ಥಮಾಡಿಕೊಂಡು ಭಾಷೆಯ ಸವಿಯನ್ನು ಸವಿಯುವರೆ ಅದೃಷ್ಟಶಾಲಿಗಳು. ಭೋಜಪುರಿ ಉಚ್ಚಾರಣೆ ತುಂಬಿರುವ ಹಿಂದಿಯನ್ನು ಹೊಸದಾಗಿ ಕೇಳುವವರಿಗೆ ಕೇವಲ ಕೆಲವು ದಿನಗಳು ಮಾತ್ರ ಸ್ವಲ್ಪ ತೊಂದರೆಯಾಗಬಹುದು, ನಂತರ ಇದೇ ಹಿಂದಿ ಎಂದುಕೊಂಡು ಬಿಡುವಷ್ಟು ಸರಾಗವಾಗಿ ಅರ್ಥವಾಗಿಬಿಡುತ್ತದೆ.

ಒಮ್ಮೆ ಬನಾರಸ್‌ನಲ್ಲಿ ಒಬ್ಬ ವಯಸ್ಸಾದ ನ್ಯಾಯವಾದಿಯ ಮನೆಗೆ ಭೇಟಿಕೊಟ್ಟಾಗ ಪಕ್ಕದಲ್ಲೆ ಕುಳಿತಿದ್ದ, ತಮ್ಮ ವಯಸ್ಸಾದ ಪತ್ನಿಯನ್ನು ಪರಿಚಯಿಸಿದರು. ಮುಗುಳು ನಕ್ಕ ಅವರು ಸೆರಗನ್ನು ಸರಿಪಡಿಸಿಕೊಂಡು ನಾಚಿಕೆ ವ್ಯಕ್ತಪಡಿಸಿದ್ದನ್ನು ನೋಡಿದ ನ್ಯಾಯವಾದಿಗಳು,

"ನೋಡಿದಿರಾ, ಇದೇ ಪಕ್ಕಾ ಭೋಜಪುರಿ ಸೊಗಡು" ಎಂದು ತಮಾಷೆ ಮಾಡಿದರು.

ಈ ಪ್ರದೇಶದಲ್ಲಿ ಹಳ್ಳಿಗಳಲ್ಲಾಗಲಿ ಪಟ್ಟಣಗಳಲ್ಲಾಗಲಿ ಜನ ಒಬ್ಬರನ್ನೊಬ್ಬರು ಎದುರುಗೊಂಡಾಗ ಎರಡೂ ಕೈ ಗಳನ್ನು ಜೋಡಿಸಿ ಅಪ್ಯಾಯಮಾನವಾಗಿ ಜೈ ರಾಮ್‌ಜೀಕೀ, ಸಿಯಾರಾಮ್‌ಜೀಕೀ.. ಜೈ ಭಜರಂಗಬಲಿ.. ಜೈ ರಾಧೇಶ್ಯಾಮ್.. ಎಂದು ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾರೆ. ಸಂಬಂಧಿಗಳಾದರೆ ಅಥವಾ ಒಂದೇ ಮನೆಯವರಾದರೆ ತಾಯಿ, ತಂದೆ, ಅಣ್ಣ, ಅತ್ತಿಗೆ, ಸೋದರಿ ಯಾರೇ ಆಗಿದ್ದರು ಸರಿ, ವಯಸ್ಸಿನಲ್ಲಿ ತಮಗಿಂತ ಕೇವಲ ಒಂದೆರಡು ತಿಂಗಳು ದೊಡ್ಡವರಾಗಿದ್ದರೂ ಕಾಲುಮುಟ್ಟಿ ಆಶೀರ್ವಾದ ಪಡೆದುಕೊಳ್ಳುತ್ತಾರೆ. ಅದು ಮನೆಯಾಗಿರಬಹುದು, ಬಸ್ಸೋ ರೈಲೋ ನಿಲ್ದಾಣ ವಾಗಿರಬಹುದು. ಮಾತನಾಡುವಾಗಲೂ ಅಷ್ಟೆ ಏಕವಚನವಂತೂ ಸಾಧ್ಯವೇ ಇಲ್ಲ. ಸಣ್ಣ ಮಕ್ಕಳಾಗಲಿ ದೊಡ್ಡವರಾಗಲಿ

ಬಹುವಚನದಲ್ಲೇ ಮಾತನಾಡುತ್ತಾರೆ. ಈ ಮೇಲಿನ ವಿಷಯಗಳು ಪಶ್ಚಿಮ ಭಾರತಕ್ಕೂ ಅನ್ವಯಿಸುತ್ತದೆ. ಆದರೆ ನಮ್ಮ ದಕ್ಷಿಣ ಭಾರತದಲ್ಲಿ ಅಕ್ಕ, ತಂಗಿ, ತಾಯಿ ಯಾರೇ ಆಗಲಿ ಒಟ್ಟಿಗೆ ಬಾರೆ, ಹೋಗೆ ಎಂದೇ ಸಂಬೋಧಿಸುತ್ತಾರೆ. ಅದು ಪ್ರೀತಿಯಿಂದ ಎಂದು ಕೆಲವರು ವಾದಿಸಬಹುದು. ತಾಯಿಯನ್ನು ಬಾರೆ ಹೋಗೆ ಎಂದು ಸಂಬೋಧಿಸುವುದು ಯಾವ ಪ್ರೀತಿಯೋ ಗೊತ್ತಿಲ್ಲ..? ಗಂಡ ಹೆಂಡತಿಯನ್ನಂತೂ ಲೇ, ಏಮೇ, ರಾವೇ, ಪೋವೇ, ತೆಲುಗಿನಲ್ಲಿ ವಾಡಿ, ಪೋಡಿ, ಎನ್ನಡಿ, ವಾಮೇ, ಪೋಮೇ ತಮಿಳಿನಲ್ಲಿ. ಏನೇ, ಬಾರೇ, ಹೋಗೇ, ಲೇ ಕನ್ನಡದಲ್ಲಿ ಪ್ರಾಣಿಗಳನ್ನು ಕರೆಯುವಂತೆ ಕರೆಯುತ್ತಾರೆ.

ಉತ್ತರ ಭಾರತದಲ್ಲಿ ಸಾಮಾನ್ಯವಾಗಿ ಪತ್ನಿಯನ್ನು ಕೆಲವರು ಹೆಸರು ಹಿಡಿದು ಕರೆದರೆ ಮತ್ತೆ ಕೆಲವರು ಕಮಲಾಕೀ ಮಾ, ಸುರೇಶ್ ಕೀ ಮಾ ಎಂದೇ ಕರೆಯುತ್ತಾರೆ.

ಮೇಲಿನ ವಿಷಯಗಳನ್ನು ಓದಿದವರಿಗೆ ಹೇಗನ್ನಿಸುತ್ತದೋ ಏನೋ ಸ್ವಲ್ಪ ವಿಶಾಲ ಮನೋಭಾವದಿಂದ ಯೋಚಿಸಿ ನೋಡಿದರೆ ಗಂಡು ಜನಾಂಗದ ದಬ್ಬಾಳಿಕೆ ಇಲ್ಲಿ ಮಿತಿ ಮೀರಿದೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

ಹೊಸದಾಗಿ ಲಖನೌಗೆ ಹೋಗಿದ್ದಾಗ ನಾನು ಮತ್ತು ಧರ್ಮನ್ ಆಟೋದಲ್ಲಿ ಕುಳಿತು ಪ್ರಯಾಣ ಮಾಡುತ್ತಿದ್ದೆವು. ಆಗ ನನಗೆ ಹಿಂದಿ ಏನೇನೂ ಗೊತ್ತಿರಲಿಲ್ಲ. ಮೂವರು ಕುಳಿತುಕೊಳ್ಳಬಹುದಾಗಿದ್ದ ಆಸನದಲ್ಲಿ ಇಬ್ಬರೆ ವಿಶ್ರಾಮವಾಗಿ ಕುಳಿತುಕೊಂಡಿದ್ದೆವು. ಹತ್ತಿರಕ್ಕೆ ಬಂದ ಒಬ್ಬ ವ್ಯಕ್ತಿ "ಬೇಟಾ ತೋಡಾ ಆಗೇ ಬೈಟೋ" ಎಂದರು. ಕೇವಲ ನನಗಿಂತ ಒಂದೈದು ವರ್ಷಗಳಷ್ಟು ಹೆಚ್ಚು ವಯಸ್ಸಾಗಿದ್ದ ಆ ಮನುಷ್ಯ ನನ್ನನ್ನು ಮಗನೇ ಎಂದು ಬಿಟ್ಟನಲ್ಲ ಎಂದು ಬಹಳ ಬೇಜಾರಾಯಿತು. ಎಷ್ಟೇ ಮರೆಯಲು ಪ್ರಯತ್ನಿಸಿದರೂ ಮರೆಯಲಾಗಲಿಲ್ಲ. ಆ ಮೇಲೆ ಧರ್ಮನ್ ಹತ್ತಿರ ಈ ವಿಷಯವನ್ನು ತೋಡಿಕೊಂಡೆ. ಅವನು ಆಗಲೇ ಬಿದ್ದು ಬಿದ್ದು ನಗುವುದನ್ನು ಕಲಿತುಕೊಂಡಿದ್ದು, ನನ್ನ ಮಾತು ಕೇಳಿ ಮತ್ತಷ್ಟು ಬಿದ್ದು ಬಿದ್ದು ನಕ್ಕಿದ್ದ. ಆಮೇಲೆ "ಬೇಟ, ಅಂದರೆ ಪ್ರೀತಿಯಿಂದ ಮಗು ಅನ್ನುವುದು. ನೀನು ಅದನ್ನು ಮಗನೇ ಅಂಥ ತಿಳಿದುಕೊಂಡಿದ್ದೀಯಲ್ಲ" ಎಂದಿದ್ದ, ಈ ವಿಷಯವನ್ನೂ ಲಖನೌ ಎಲ್ಲಾ ಪ್ರಸಾರ ಮಾಡಿಬಿಟ್ಟ.

ಒಂದು ದಿನ ಫೀಲ್ಡ್‌ನಲ್ಲಿ ಬಹಳ ಬಾಯಾರಿಕೆ ಆಗಿ ಗಂಟಲು ಒಣಗಿಹೋಗಿತ್ತು. ಕೆಲಸಗಾರರ ಜೊತೆಗೆ ಸುಮಾರು ದೂರ ನಡೆದು ನಡೆದು ಸುಸ್ತಾಗಿ ಕಾಲುಗಳನ್ನು ಒತ್ತಾಯದಿಂದ ಎತ್ತಿ ಎತ್ತಿ ಇಡುತ್ತಿದ್ದೆ. ಸ್ವಲ್ಪ ದೂರದಲ್ಲಿ ಒಂದು ಸಣ್ಣ ಗುಡಿಸಲು ಕಾಣಿಸಿಕೊಂಡಿದ್ದೆ, ಎಲ್ಲಿಲ್ಲದ ಶಕ್ತಿಯನ್ನು ತಂದುಕೊಂಡು ಹತ್ತಿರಹೋಗಿ ನೀರು ಕೇಳಿದೆ. ನಮ್ಮನ್ನು ಹೊರಗಡೆ ನೋಡಿದ್ದೆ ಆತುರಾತುರದಲ್ಲಿ ನೀರನ್ನು ತಂದು ಕೊಟ್ಟ ಒಬ್ಬ ಮನುಷ್ಯ, ನೀರನ್ನು ಕುಡಿಯದಿರಿ

ಎಂದು ಆಜ್ಞೆ ಮಾಡಿ ಮತ್ತೆ ಒಳಕ್ಕೆ ಹೋದ. ಇವನೆಂತಹ ಮನುಷ್ಯ ಎಂದುಕೊಂಡು ಗುಡಿಸಲ ಹೊರಗಡೆ ಕಾಯತೊಡಗಿದೆವು. ಆ ಸಣ್ಣ ಗುಡಿಸಲ ಒಳಗೆ ಸುಮಾರು ಹೊತ್ತು ಮಡಿಕೆಗಳು ಡೀಡಿಕ್ಕಿ ಹೊಡೆದುಕೊಂಡ ಮೇಲೆ ಆ ಮನುಷ್ಯ ಸರಕ್ಕನೆ ಹೊರಗೆ ಬಂದ. ಕೈಯಲ್ಲಿ ಒಂದು ಸಣ್ಣ ಅಲ್ಯೂಮಿನಿಯಮ್ ತಟ್ಟೆ, ತಟ್ಟೆಯಲ್ಲಿ ಬೆಲ್ಲದ ಚೂರುಗಳು.

"ಬೆಲ್ಲದ ಚೂರುಗಳನ್ನು ಮೊದಲು ಬಾಯಿಗೆ ಹಾಕಿಕೊಂಡು ಆಮೇಲೆ ನೀರು ಕುಡಿಯಿರಿ" ಎಂದ ನಗುನಗುತ್ತ. ಬೆಲ್ಲದ ಜೊತೆಗೆ ನೀರು ಕುಡಿದ ಮೇಲೆ ನನ್ನ ಮನದಲ್ಲಿ ಒಂದು ವಿಚಿತ್ರವಾದ ತೊಯ್ದಾಟ ಶುರುವಾಗಿತ್ತು. ಈ ಮನಷ್ಯ ಒಂದೆರಡು ನಿಮಿಷಗಳಲ್ಲಿ ನನ್ನನ್ನು ಎಲ್ಲಿಗೋ ಕರೆದುಕೊಂಡು ಹೋಗಿಬಿಟ್ಟಿದ್ದ.

ನೀರು ಕುಡಿದ ನಾವು ಓಂದಕ್ಕೆ ಬರುತ್ತಿದ್ದಂತೆ ಆ ಮನುಷ್ಯ ತನ್ನ ಪುಟ್ಟ ಗುಡಿಸಲ ಮುಂದೆ ನಿಂತು ನಮ್ಮ ಕಡೆಯೇ ನೋಡುತ್ತಿದ್ದ. ನಾನು ಓಂದಕ್ಕೆ ತಿರುಗಿ ನೋಡುತ್ತ ನೋಡುತ್ತಾ ಮುಂದೆ ಸಾಗಿದೆ.

ಶ್ರೀಮತಿ ಸಿಂಗ್ ಮತ್ತು ಸುಶೀಲಳ ಸ್ನೇಹ ಗಾಢವಾದಷ್ಟೇ ವೇಗವಾಗಿ ನಮ್ಮ ಫೀಲ್ಡ್ ಕೆಲಸ ಮುಗಿದು ಹೋಗಿತ್ತು. ಕೆಲವೇ ದಿನಗಳಲ್ಲಿ ನಾವು ಭೋಪಾಲ್ ಬಿಡಬೇಕಾಗಿದ್ದು, ಕೊನೆಯ ಭೇಟಿ ಎಂಬಂತೆ ನಮ್ಮನ್ನು ಮನೆಗೆ ಕರೆದು ಆತಿಥ್ಯವನ್ನು ನೀಡಿ ನಮ್ಮ ಅಗಲಿಕೆಯ ಬಗ್ಗೆ ಬೇಜಾರುಪಟ್ಟರು. ಸುಮಾರು ಐದು ತಿಂಗಳು ಕಾಲ ನಮಗೆ ಹಾಲು ಮೊಸರು ಕೊನೆಗೆ ಮನೆ ಕೂಡ ಕೊಟ್ಟಿದ್ದಾರೆ, ನಾನು ಅವರಿಗೆ ಏನಾದರು ಉಡುಗೊರೆ ಕೊಡಲೇಬೇಕೆಂದು ಸುಶೀಲ ಒತ್ತಾಯ ಮಾಡಿ ಒಂದು ಸೀರೆ ತೆಗೆದುಕೊಂಡು ಬಂದು ಶ್ರೀಮತಿ ಸಿಂಗ್ ತೆಗೆದುಕೊಳ್ಳದಿದ್ದರೂ ಅವರ ಮನೆಯಲ್ಲೇ ಇಟ್ಟುಬಂದೆವು.

ಅದೊಂದು ಬೆಳಗ್ಗೆ ಎಲ್ಲಾ ತಯಾರಿ ಮಾಡಿಕೊಂಡು ಜೀಪಿನ ಹಿಂದೆ ಟ್ರೇಲರ್ ಕಟ್ಟಿಕೊಂಡು ಡ್ರೈವರ್ ಅಲೀಮಿಯ ತನ್ನ ಆಸನದಲ್ಲಿ ತಯಾರಾಗಿ ಕುಳಿತಿದ್ದಾನೆ. ಸುಶೀಲಳನ್ನು ಬೀಳ್ಕೊಡಲು ಶ್ರೀಮತಿ ಸಿಂಗ್, ಮಕ್ಕಳು ಮತ್ತು ಅವರ ಪಕ್ಕದ ಮನೆಯವರೊಬ್ಬರು ಜೀಪಿನ ಹತ್ತಿರದಲ್ಲಿ ನಿಂತಿದ್ದಾರೆ. ನಾನು ಮಾತ್ರ ಮಾಮೂಲಿಯಾಗಿ ನಮಸ್ಕರಿಸಿ ಕ್ರಾಂತಿಯ ಜೊತೆ ಜೀಪಿನಲ್ಲಿ ಕುಳಿತುಬಿಟ್ಟೆ. ಕ್ರಾಂತಿ ಈಗಾಗಲೇ ಗುಂಜಾ ಮತ್ತು ಮುನ್ನನಿಗೆ ಹಲವಾರು ಸಲ ಟಾಟ ಹೇಳಿ ಆಗಿದೆ. ಆದರೆ ಸುಶೀಲ ಮಾತ್ರ ಹೆಂಗಸರೆಂದರೆ ನಿಧಾನ ಎನ್ನುವಂತೆ ಸ್ವಲ್ಪ ದುರ್ಬಲಗೊಂಡವಳಂತೆ ಏನೇನೋ ಬಡಬಡಿಸುತ್ತಿದ್ದಾಳೆ. ಮಧ್ಯೆ ಒಂದೆರಡು ಸಲ ನಾನು ಕರೆದಾಗ "ಇದೋ ಬಂದೆ" ಎಂದು ಮತ್ತೆ ಮಾತಿಗೆ ಶುರುಮಾಡುತ್ತಾಳೆ.

ಕೊನೆಯ ದೃಶ್ಯ ಈಗಲೇ ಆರಂಭಗೊಂಡಂತೆ ಸುಶೀಲ ಶ್ರೀಮತಿ ಸಿಂಗ್ ಅವರನ್ನು ಭಜರಂಗಬಲಿ ಶ್ರೀ ರಾಮನನ್ನು ತಬ್ಬಿಕೊಂಡಂತೆ ತಬ್ಬಿಕೊಂಡಳು. ಆ ದೃಶ್ಯ ನನಗೂ ಮನ ತಟ್ಟಿದಂತಾಯಿತು. ಅಗಲಿದ ಇಬ್ಬರೂ ಕಣ್ಣುಗಳನ್ನು ಒರಸಿಕೊಂಡರು. ಸುಶೀಲ ನಿಧಾನವಾಗಿ ಬಂದು ಜೀಪಿನ ಒಳಗೆ ಕುಳಿತುಕೊಂಡಳು. ಜೀಪು ಸ್ಟಾರ್ಟ್ ಆಗಿ ಮುಂದೆ ಚಲಿಸುತ್ತಾ ವೇಗವನ್ನು ಹೆಚ್ಚಿಸಿಕೊಳ್ಳುತ್ತಿತ್ತು. ಒಬ್ಬರಿಗೊಬ್ಬರು ಕೈಗಳನ್ನು ಗಾಳಿಯಲ್ಲಿ ಬೀಸುತ್ತಿದರು.

ಖಾನ್, ನಾನು ರೈಲಿನಲ್ಲಿ ಹೋಗುತ್ತೇನೆಂದು ಒಂದು ದಿನ ಮುಂಚಿತವಾಗಿಯೇ ಲಖನೌ ಕಡೆ ಪ್ರಯಾಣ ಬೆಳೆಸಿದರು. ಬೆಳಗ್ಗೆಯೇ ಭೋಪಾಲ್ ಬಿಟ್ಟು ನಾವು ಸಾಯಂಕಾಲದ ಒಳಗೆ ಇಲಹಬಾದ್ ಮುಖಾಂತರ ಲಖನೌಗೆ ಸೇರಿಕೊಂಡಿದ್ದೆವು.

ಅನಂತರ ಒಂದಷ್ಟು ದಿನ ಲಖನೌದಲ್ಲಿದ್ದು, ಅಲ್ಲಿಂದ ಕೆಜಿಎಫ್‌ಗೆ ಹೋಗುವಾಗ ಮದ್ರಾಸಿನಲ್ಲಿ ಇಳಿದು ಕೊಂಡು ಎರಡು ದಿನ ಮದ್ರಾಸೆಲ್ಲಾ ಸುತ್ತಾಡಿ ಕೆಜಿಎಫ್ ಸೇರಿಕೊಂಡೆವು. ಕೆಜಿಎಫ್‌ನಿಂದ ಮತ್ತೆ ಲಖನೌಗೆ ಬಂದಾಗ ಧರ್ಮನ್ ಕೂಡ ಮದುವೆಯಾಗಿ ತನ್ನ ಪತ್ನಿಯನ್ನು ಲಖನೌಗೆ ಕರೆದುಕೊಂಡು ಬಂದಿದ್ದ.

* * *

## 12 ಲಖನೌ, ಹಿಂದಿ - ಉರ್ದು ಇತ್ಯಾದಿ

ರಾಮಾಯಣದ ಲಕ್ಷ್ಮಣನ ಕೈಯಲ್ಲಿ ಅಡಿಪಾಯ ಹಾಕಿಸಿಕೊಂಡ ಲಕ್ಷ್ಮಣಪುರ ಮುಂದಿನ ದಿನಗಳಲ್ಲಿ ಲಖನೌ ಆಗಿ ಬೆಳೆದಿದ್ದು ಹಳೆಯ ಕತೆ. ನಂತರ ಭಾರತಕ್ಕೆ ಲಗ್ಗೆ ಇಟ್ಟ ಹೊರಗಿನವರಿಂದ ಹಲವು ಬದಲಾವಣೆಗಳು ಬಂದವು. ಸುಮಾರು ಮುನ್ನೂರ ವರ್ಷಗಳಷ್ಟು ದೀರ್ಘಕಾಲ ಮೊಘಲರ ಆಳ್ವಿಕೆಯನ್ನು ಕಂಡಿದ್ದ ಭಾರತದ ಮೇಲೆ ಅವರ ಪ್ರಭಾವ ಅಗಾಧವಾಗಿಯೇ ಬೀರಿತ್ತು. ಈ ಮೊಘಲರ ಕಾಲದಲ್ಲಿ ಲಖನೌ ಹಲವು ವಿಷಯಗಳ ಕೇಂದ್ರ ಬಿಂದುವಾಗಿದ್ದು, ಗೋಮತಿ ನದಿಯ ದಡಗಳಲ್ಲಿ ಅನೇಕ ಸುಂದರ ಶೈಲಿಗಳುಳ್ಳ ಅರಮನೆಗಳು ಎದ್ದು ನಿಂತವು. ಅವುಗಳಲ್ಲಿ ಬೂಲ್ ಬುಲಯ್ಯ, ಛೋಟಾ ಇಮಾಮ್ ಬಳಾ, ಬಡಾ ಇಮಾಮ್ ಬಳಾ, ಈಗಿನ ರೈಲ್ವೆ ನಿಲ್ದಾಣ, ತಾಂತ್ರಿಕ ಕಾಲೇಜು, ಡಿ.ಸಿ. ಕಛೇರಿ ಮುಂತಾದವು.

ಪ್ರಪಂಚದ ಭಾಷೆಗಳಲ್ಲಿ ಉರ್ದುಭಾಷೆ ಒಂದು ಸೊಗಸಾದ ಭಾಷೆ. ಉರ್ದು ಭಾಷೆಯ ಸೌಂದರ್ಯವನ್ನು, ಐಶ್ವರ್ಯವನ್ನು ಕೇಳಬೇಕಾದರೆ ಲಖನೌಗೆ ಹೋಗಬೇಕೆನ್ನುವುದು ಒಂದು ಹಳೆಯ ಮಾತು. ಉರ್ದು ಭಾಷೆಯ ಬಗ್ಗೆಯಾಗಲಿ, ಹಿಂದಿ ಭಾಷೆಯ ಬಗ್ಗೆಯಾಗಲಿ ನನಗೆ ಏನೇನೂ ಗೊತ್ತಿಲ್ಲವಾದರೂ ಕೇಳುವ ಕಿವಿಗಳಿಗೆ ಇಂಪೆನಿಸುತ್ತಿತ್ತು. ಇಲ್ಲಿ ಲಖನೌದಲ್ಲಿ ಮಾತನಾಡುವ ಭಾಷೆ ಪೂರ್ತಿ ಹಿಂದಿಯೂ ಅಲ್ಲ, ಪೂರ್ತಿ ಉರ್ದುವೂ ಅಲ್ಲ. ಎರಡೂ ಭಾಷೆಯಲ್ಲಿನ ಕೆನೆ ಒಂದಾಗಿ ಏಕಕವಾಗಿರುವ ಭಾಷೆಯೇ ಲಖನೌದಲ್ಲಿ ಮಾತನಾಡುವ 'ಲಖನೌವಿ' ಎನ್ನುತ್ತಾರೆ ತಿಳಿದವರು.

ಲಖನೌದಲ್ಲಿ ಇಬ್ಬರು ಗೋಡಾವಾಲಗಳು ಒಬ್ಬರಿಗೊಬ್ಬರು ಉರ್ದುವಿನಲ್ಲಿ ಬೈಯ್ದು ಕೊಳ್ಳುತ್ತಿರಲು, ಅದನ್ನು ಕೇಳುತ್ತಿದ್ದ ಒಬ್ಬ ಇನ್ನೊಬ್ಬನಿಗೆ "ಈ ರೀತಿ ಬೈಯ್ದರೆ ಬೈಸಿಕೊಳ್ಳಲು ನಾನು ಸಿದ್ಧ "ಎಂದಿದ್ದನಂತೆ. ಲಖನೌ ಸುತ್ತಮುತ್ತಲಿನ ಜನ ಯಾರೇ ಸಿಗಲಿ ಅವರು ಮಾತನಾಡುವುದರ ಜೊತೆಗೆ ಒಂದೆರಡು ಶಾಯಿರಿಗಳನ್ನು ಪ್ರಯೋಗಿಸಿಯೇ ಬಿಡುತ್ತಾರೆ. ಒಟ್ಟಿನಲ್ಲಿ ಲಖನೌ ಶಾಯಿರಿ ಮತ್ತು ಗಜಲ್‌ಗಳ ಉಸಿರು ತುಂಬಿಕೊಂಡಿರುವ ಸುಂದರ ನಗರ.

ದಿನಗಳು ಮಾಮೂಲಿಯಾಗಿ ಉರುಳುತ್ತಿದ್ದವು. ಮತ್ತೊಮ್ಮೆ ಫೀಲ್ಡ್ ಸಂಶೋಧನೆ ಶುರುವಾಗಿದ್ದು ನನ್ನನ್ನ ಮತ್ತೆ ಅದೇ ಪ್ರದೇಶಕ್ಕೆ ಆಯ್ಕೆ ಮಾಡಿದ್ದರು. ಜೊತೆಗೆ ಖಾನ್ ಅದೇ ಅಲೀಮಿಯ. ಅದೇ ಸಂಕಟ. ಆದರೆ ದೇವಮಣಿಯ ಸ್ಥಳದಲ್ಲಿ ಕಟ್ಟಾ ಹುಡುಗನೊಬ್ಬ ಅಡಿಗೆಭಟ್ಟನಾಗಿದ್ದ.

ಈ ಸಲ ಭೋಪಾನ್‌ಗೆ ಐವತ್ತು ಕಿ.ಮೀ.ಗಳ ದೂರದಲ್ಲಿರುವ ಗೋರಾವಲ್ ಎಂಬ ಹಳ್ಳಿಯ ಪಕ್ಕದಲ್ಲಿರುವ ಒಂದು ಹಳೆ ಬಂಗಲೆಯಲ್ಲಿ ಉಳಿದುಕೊಂಡೆವು.

ವಿಶಾಲವಾದ ಬ್ರಿಟಿಷರ ಕಾಲದ ಹಳೆ ಹೆಂಚಿನ ಬಂಗಲೆ. ಬಂಗಲೆ ಸುತ್ತಲು ಇದ್ದ ಕಂಬಗಳನ್ನು ಬಳಸಿ ಹಬ್ಬಿಕೊಂಡಿರುವ ಚಮೇಲಿ ಮತ್ತು ಮಲ್ಲಿಗೆ ಹೂಬಳ್ಳಿಗಳು. ಮುಂದೆ ದೊಡ್ಡ ಹಜಾರ, ಸುತ್ತಲು ದೊಡ್ಡ ದೊಡ್ಡ ಮರಗಳು. ಎದುರಿಗೆ ದೂರದಲ್ಲಿ ಕಾವಲುಗಾರನ ಮನೆ.

ಆ ಬಂಗಲೆ ರಾಬರ್ಟ್‌ಗಂಜ್‌ನಿಂದ ಸುಮಾರು 20 ಕಿ.ಮೀ.ಗಳ ದೂರದ ಒಳ ಪ್ರದೇಶದಲ್ಲಿದ್ದು ಅಲ್ಲಿಗೆ ಯಾವ ಅಧಿಕಾರಿಗಳಾಗಲಿ, ಶಾಸಕರಾಗಲಿ ಬರುತ್ತಿಲ್ಲವಾದ್ದರಿಂದ ನಮಗೆ ಯಾವ ರೀತಿಯ ತೊಂದರೆಯೂ ಇರುತ್ತಿರಲಿಲ್ಲ.

ಬಂಗಲೆಯ ಒಂದು ಕೊಠಡಿಯಲ್ಲಿ ನಾವಿದ್ದರೆ ಇನ್ನೊಂದು ಕೊಠಡಿಯಲ್ಲಿ ಖಾನ್ ಉಳಿದುಕೊಂಡಿದ್ದರು. ಅಲೀಮಿಯ ಹೊರಗೆ ಗುಡಾರದಲ್ಲಿದ್ದ. ನಾವು ಬಂಗಲೆಯಲ್ಲೇ ಒಂದು ಕೋಣೆಯಲ್ಲಿ ಅಡಿಗೆ ಮಾಡಿಕೊಳ್ಳುತ್ತಿದ್ದರೆ, ಖಾನ್ ಅಡಿಗೆ ಭಟ್ಟನಿಗೆ ಹೊರಗೆ ಒಂದು ಡೇರೆ ಹಾಕಿಕೊಟ್ಟಿದ್ದರು. ಅಲೀಮಿಯ ಈ ಸಲವು ಬಂದಿದ್ದೆ ಕೋಳಿ ಮರಿಗಳನ್ನು ತಂದುಬಿಟ್ಟಿದ್ದ. ಖಾನ್ ಏಕೋ ಹಿಂದೇಟಾಕಿದ್ದರು.

ಸುಶೀಲ ದಿನಾಗಲೂ ಮಲ್ಲಿಗೆ ಹೂವುಗಳನ್ನು ಬಿಡಿಸಿ ಉದ್ದುದ್ದವಾದ ಹಾರಗಳನ್ನು ಕಟ್ಟಿ ತಲೆ ತುಂಬ ಮುಡಿದುಕೊಳ್ಳುತ್ತಿದ್ದಳು. ಅಲ್ಲಿನ ಹೆಂಗಸರು ಯಾರೂ ತಲೆಗೆ ಹೂವುಗಳನ್ನು ಮುಡಿದುಕೊಳ್ಳುತ್ತಿರಲಿಲ್ಲ. ಅಲ್ಲೇ ಅಲ್ಲ, ನಾನು ನೋಡಿದ ಉತ್ತರ ಭಾರತದ ಬಹಳಷ್ಟು ಸ್ಥಳಗಳಲ್ಲಿ ಹೆಂಗಸರು ಹೂವುಗಳನ್ನು ತಲೆಯಲ್ಲಿ ಮುಡಿದುಕೊಳ್ಳುತ್ತಿರಲಿಲ್ಲ.

ಒಂದು ದಿನ ಭಾನುವಾರ ಬೆಳಿಗ್ಗೆ ಅಲೀಮಿಯನನ್ನು ಕರೆದುಕೊಂಡು ನೇರವಾಗಿ ಶ್ರೀಮತಿ ದಶರತ್‌ಸಿಂಗ್‌ರನ್ನು ನೋಡಲು ಭೋಪಾನ್ ತಲುಪಿದೆವು. ಸುಶೀಲ ಮತ್ತು ಶ್ರೀಮತಿ ಸಿಂಗ್ ಅವರು ಬಹಳ ಸಂಭ್ರಮದಿಂದ ಒಬ್ಬರನ್ನೊಬ್ಬರು ತಬ್ಬಿಕೊಂಡು ತಮ್ಮ ಕ್ಷೇಮ ಸಮಾಚಾರಗಳನ್ನು ಹಂಚಿಕೊಂಡರು.

ನಾನು ಕ್ರಾಂತಿಯನ್ನು ಕರೆದುಕೊಂಡು ಒಂದಷ್ಟು ಸುತ್ತಾಡಲು ಹೊರಕ್ಕೆ ಬಂದೆ. ಅದೇ ಸಮಯಕ್ಕೆ ಎದುರಿಗೆ ಬರುತ್ತಿದ್ದವರಲ್ಲಿ ಒಬ್ಬನು,

"ಜೀಪು ಹೊಸದಾಗಿ ಇದೆಯಲ್ಲ, ಯಾರದು...?" ಕೇಳಿದ. ಇನ್ನೊಬ್ಬ

"ಅದೇಹೋದ ವರ್ಷ ಇಲ್ಲೇ ಇದ್ದರಲ್ಲ ಮದ್ರಾಸಿ ಶ್ರೀದೇವಿ ತರಹ" ಎನ್ನಬೇಕೆ.

ಅಷ್ಟರಲ್ಲಿ ನನ್ನನ್ನ ನೋಡಿ ಸುಮ್ಮನಾದರು. ನಾನು ಕೇಳಿಯೂ ಕೇಳದವನಂತೆ ಮುಂದಕ್ಕೆ ಹೋಗಿಬಿಟ್ಟೆ.

ಉತ್ತರ ಭಾರತದಲ್ಲಿ ಎಲ್ಲಾ ದಕ್ಷಿಣ ಭಾರತದವರನ್ನೂ ಸಾಮಾನ್ಯವಾಗಿ ಮೊದಲು "ಮದ್ರಾಸಿ" ಎಂದು ಬಿಡುತ್ತಾರೆ. ಆಮೇಲೆ ಯಾರೋ ಗೊತ್ತಾದವರು "ಮಲೆಯಾಳಿ, ಬೆಂಗಳೂರುವಾಲಾ, ಕರ್ನಾಟಕ್ ವಾಲಾ, ಆಂಧ್ರಾವಾಲಾ" ಎನ್ನುತ್ತಾರೆ.

ಮಧ್ಯಾಹ್ನದ ಊಟ, ಸಾಯಂಕಾಲದ ಊಟ, ತಿಂಡಿ ಎಲ್ಲವನ್ನೂ ಮುಗಿಸಿಕೊಂಡು ಡಾಕ್ಟರ್ ದಶರತ್‌ಸಿಂಗ್‌ರವರನ್ನು ಸಂಧಿಸಿ ಸಾಯಂಕಾಲ ವಾಪಸ್‌ಬಂದು ಬಿಟ್ಟೆವು. ಚಳಿಗಾಲ ಮುಗಿಯುತ್ತಾ ಬಂದಿದ್ದು, ಬಿಸಿಲು ಕಾಲ ತನ್ನ ಹಿಡಿತವನ್ನು ಹೆಚ್ಚಿಸಿ ಕೊಳ್ಳುತ್ತಿತ್ತು. ಗೋರಾವಲ್ ಸುತ್ತಮುತ್ತ ಕೆಲಸ ಮುಗಿದಿದ್ದು, ಅಲ್ಲಿಂದ ಸೋನ್ ನದಿಯ ದಕ್ಷಿಣಕ್ಕೆ ಸ್ವಲ್ಪ ಕೆಲಸ ಮಾಡುವುದಿತ್ತು. ಗೋರಾವಲಿಂದ ಸೋನ್ ನದಿ ಬಹಳ ದೂರವಿದ್ದು ಶಿಬಿರವನ್ನು ಆ ಕಡೆಗೆ ಸ್ಥಳಾಂತರಿಸಿ ಕೆಲಸವನ್ನು ಒಂದೇ ಸಲಕ್ಕೆ ಮುಗಿಸಿಕೊಂಡು ಲಖನೌಗೆ ಹೋಗುವುದಾಗಿ ತೀರ್ಮಾನಿಸಿಕೊಂಡೆವು. ಆದರೆ ಆ ಕಡೆ ಎಲ್ಲಿಯೂ ಬಂಗಲೆಯಾಗಲಿ, ಮನೆಗಳಾಗಲಿ ಇಲ್ಲದ ಕಾರಣ ಹತ್ತು ದಿನಗಳು ಡೇರೆಗಳಲ್ಲಿ ಉಳಿದುಕೊಳ್ಳಲು ತೀರ್ಮಾನಿಸಿದೆವು.

ಹೊಸದಾಗಿ ಬಂದಿದ್ದ ಬುಡಕಟ್ಟು ಕಚ್ಚೂಭಟ್ಟ ಒಂದಷ್ಟು ಬುದ್ದು ಅಲ್ಲದೆ ಕೊಳಕು ಕೂಡ. ಖಾನ್‌ಗೆ ಕೋಪ ಯಾವಾಗಲೂ ಮೂಗಿನ ಮೇಲೆಯೇ ಇರುತ್ತಿತ್ತು. ಆದರೂ ವಿಧಿ ಇಲ್ಲದೆ ಅವನಿಂದಲೇ ಅಡಿಗೆ ಮಾಡಿಸಿಕೊಳ್ಳುತ್ತಿದ್ದರು. ಒಂದು ದಿನ ಬೆಳಿಗ್ಗೆ ನಿಧಾನವಾಗಿ ಏಳುಗಂಟೆಗೆ ಎದ್ದು ಮುಖ ತೊಳೆದುಕೊಂಡು ವರಾಂಡದಲ್ಲಿ ಕುಳಿತುಕೊಳ್ಳಲು ಹೊರಕ್ಕೆ ಬಂದೆ. ಕಚ್ಚೂಭಟ್ಟ ಡೇರೆಗಿಂತ ಸ್ವಲ್ಪ ದೂರದಲ್ಲಿ ನಿಂತು ಒಂದೇ ಸಮನೆ ಸಣ್ಣ ಮಗುವಿನಂತೆ ಅಳುತ್ತಿದ್ದಾನೆ. ಸಂಕಟ ದೂರದಲ್ಲಿ ಕುಳಿತಿದ್ದಾನೆ. ಅಲೀಮಿಯ ಹೊರಗೆ ಯಾವುದೋ ಕೆಲಸದಲ್ಲಿ ಮಗ್ನನಾಗಿದ್ದಾನೆ. ಆಶ್ಚರ್ಯಗೊಂಡ ನಾನು ಕಚ್ಚೂ ಭಟ್ಟನ ಹತ್ತಿರಹೋಗಿ ನಿಂತುಕೊಂಡೆ.

"ಏಕೋ ಅಳುತ್ತಿದ್ದೀಯ ?" ಕೇಳಿದೆ.

"ದೇಖೋ ಸಾಬ್.. ನಮ್ಮ ತಂದೆ ತಾಯಿ ಯಾರೂ ಇದುವರೆಗೆ ನನ್ನನ್ನ ಹೊಡೆದಿಲ್ಲ. ಈ ಖಾನ್ ಸಹೇಬರು ನನ್ನನ್ನ ಚೆನ್ನಾಗಿ ಹೊಡೆದಿದ್ದಲ್ಲದೆ ಚಪ್ಪಲಿ ಕಾಲಲ್ಲೆ ಒದ್ದರು" ಎನ್ನುತ್ತಾ ಇನ್ನಷ್ಟು ಅಳುವುದನ್ನು ಜೋರು ಮಾಡಿದ.

"ಬಹುತ್ ಘೀಟಾಸಾಬ್... ಆ ತರಹ ಹೊಡೆಯಬಾರದಿತ್ತು.. ಇಷ್ಟವಿಲ್ಲದಿದ್ದರೆ ವಾಪಸ್ ಕಳುಹಿಸಿಬಿಡಬೇಕಾಗಿತ್ತು... ಈ ತರಹ ಹೊಡೆಯುವುದಕ್ಕೆ ಏನು ಅಧಿಕಾರವಿದೆ ಇವರಿಗೆ ?" ಅಲೀಮಿಯ ಪ್ರಶ್ನಿಸಿದ.

"ಇಷ್ಟಕ್ಕೂ ಅವನು ಮಾಡಿದ ತಪ್ಪಾದರೂ ಏನು.?" ಕೇಳಿದೆ.

"ಇವನೂ ಸರಿ ಇಲ್ಲ ಸಾರ್, ಬೆಳಗ್ಗೆ ಹಾಲಿನವನು ಹಾಲು ಕೊಟ್ಟು ಹೋದ ಮೇಲೆ ಅದನ್ನು ಸರಿಯಾಗಿ ಮುಚ್ಚಿಡದೆ ಪಕ್ಕದಲ್ಲಿಟ್ಟುಕೊಂಡು ಹಾಗೆ ಮಲಗಿಬಿಟ್ಟಿದ್ದಾನೆ ಚಳಿಗೆ, ನಾಯಿ ಬಂದು ಅದನ್ನು ನೆಕ್ಕುತ್ತಿದ್ದಾಗ ಖಾನ್ ಸಾಹೇಬರು ನೋಡಿಬಿಟ್ಟಿದ್ದಾರೆ" ಎಂದ.

"ನನ್ನ ಸಂಬಳ ಕೊಡಿ ಎಂದರೂ ಕೊಡುತ್ತಿಲ್ಲ ಸಾಬ್, ನನ್ನ ಸಂಬಳ ಕೊಟ್ಟು ಬಿಟ್ಟರೆ ನಾನು ಹೋಗಿಬಿಡುತ್ತೇನೆ" ಕಚ್ಚಾ ಛಟ್ಟ ಹೇಳಿದ. ನಾನು ಏನೂ ಮಾತನಾಡಲಿಲ್ಲ. ಅನಂತರ ಯಾವಾಗಲೋ ಖಾನ್ ಅವನಿಗೆ ಹಣಕೊಟ್ಟು ಕಳುಹಿಸಿಬಿಟ್ಟಿದ್ದರು.

ಮರುದಿನ ನಾನು ಮತ್ತು ಖಾನ್ ಹೊರಗಡೆ ಕುಳಿತು ನಕ್ಷೆಯ ಮೇಲೆ ಫೀಲ್ಡ್ ಮಾಹಿತಿಯನ್ನು ತುಂಬುತ್ತಿದ್ದೇವೆ. ನೆನ್ನೆಯ ಪ್ರಸಂಗ ಆಗಾಗ ನನ್ನಲ್ಲಿ ಕೊರೆಯುತ್ತಲೇ ಇತ್ತು. ಆ ವಿಷಯವನ್ನು ಖಾನ್ ಜೊತೆ ಚರ್ಚಿಸುವುದೇ ಬೇಡವೆಂದುಕೊಂಡರೂ ನನ್ನಿಂದ ತಡೆದುಕೊಳ್ಳಲಾಗಲಿಲ್ಲ.

"ನೆನ್ನೆ ನೀವು ಮಾಡಿದ ಕೆಲಸ ಸರಿ ಇಲ್ಲ ಸಾರ್, ಎಷ್ಟಾದರೂ ಹಳ್ಳಿಯ ಹುಡುಗ, ಅವನು ನಿಮಗೆ ಹಿಡಿಸಲಿಲ್ಲಅಂದರೆ ಅವನನ್ನು ವಾಪಸ್ ಕಳುಹಿಸಿಬಿಡಬೇಕಾಗಿತ್ತೇ ಹೊರತು ಹೊಡೆಯಬಾರದಿತ್ತು" ಎಂದೆ.

"ಹ ಭೈ, ನಾನೇನು ಮಾಡಲಿ, ನನಗೆ ಕೋಪ ತಡೆದುಕೊಳ್ಳಲು ಬರುವುದಿಲ್ಲ, ಆ ತರಹ ನಾನು ಹೊಡೆಯಬಾರದಿತ್ತು" ಎಂದು ಒಂದು ದೀರ್ಘಶ್ವಾಸ ಎಳೆದುಕೊಂಡರು.

ಅಷ್ಟರಲ್ಲಿ ಆಗಾಗ ನಮ್ಮಲ್ಲಿಗೆ ಬರುತ್ತಿದ್ದ ಪಂಡಿತ್ ಜೀ ಒಬ್ಬರು,

"ನಮಸ್ಕಾರ ಸಾಬ್" ಎಂದಿದ್ದೆ ಹತ್ತಿರ ಬಂದರು.

"ಏಯ್ ಸಂಕಟ ಕುರ್ಚಿಲಾವ್" ಎಂದಿದ್ದೆ, ಸಂಕಟ ಕುರ್ಚಿ ತಂದು ಹಾಕಿದ.

ಕುಳಿತುಕೊಂಡ ಪಂಡಿತ್‌ಜೀ ಸ್ವಲ್ಪ ಹೊತ್ತಾದ ಮೇಲೆ ಸುತ್ತಲು ಒಮ್ಮೆ ನೋಡಿ, ಸ್ವಲ್ಪ ಮೃದು ಧ್ವನಿಯಲ್ಲಿ ಹೇಳತೊಡಗಿದರು.

"ಸಾಬ್ ನಾನೊಂದು ಮಾತು ಹೇಳುತ್ತೇನೆ, ನೀವೇನೂ ತಪ್ಪು ತಿಳಿಯಬಾರದು" ಎಂದರು. ನಾವಿಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡೆವು.

"ಪರವಾಗಿಲ್ಲ ಹೇಳಿ" ಖಾನ್ ಹೇಳಿದರು.

"ಆ ನಿಮ್ಮ ಡ್ರೈವರ್ ಇದ್ದಾನಲ್ಲ, ಅವನಿಗೆ ಈಗಾಗಲೇ ಹೊಡೆತ ಬೀಳಬೇಕಾಗಿತ್ತು, ನಾನೇ ಊರಿನವರಿಗೆಲ್ಲ ಸಮಾಧಾನ ಹೇಳಿ ತಡೆ ಹಿಡಿದಿದ್ದೇನೆ" ಎನ್ನುವಷ್ಟರಲ್ಲಿ,

"ಅದೇನು ವಿವರಿಸಿ ಹೇಳಿ" ಖಾನ್ ಹೇಳಿದರು.

"ಅಲ್ಲಿ ಕಾಣಿಸುತ್ತಿದೆಯಲ್ಲ ಒಂಟಿ ಮನೆ. ಅಲ್ಲೊಬ್ಬಳು ಬ್ಯಾಹಾ (ಬಾಲ್ಯ ವಿವಾಹ) ಆಗಿರುವ ಹುಡುಗಿ ಇದ್ದಾಳೆ. ಇತ್ತೀಚೆಗೆ ಫಲವತಿಯೂ ಆಗಿದ್ದಾಳೆ. ಈ ಅಷಾಢ ಮುಗಿದ ಮೇಲೆ ಅವರ ತಂದೆ ತಾಯಿ ಡೋಲು ಮಾಡಿ ಅವಳ ಗಂಡನ ಮನೆಗೆ ಕಳುಹಿಸಿಕೊಡಲಿದ್ದಾರೆ. ಈ ಡ್ರೈವರ್ ಹೇಗೋ ಅವಳನ್ನು ತನ್ನ ಬುಟ್ಟಿಗೆ ಹಾಕಿಕೊಂಡು ರಾತ್ರಿಯೆಲ್ಲಾ ಓಡಾಡುತ್ತಿರುತ್ತಾನೆ. ಇದು ಊರಿನವರಿಗೆಲ್ಲ ಗೊತ್ತಾಗಿ ಮೊನ್ನೆ ಎಲ್ಲರೂ ಹೊಡೆಯುವುದಕ್ಕೆ ತಯಾರಾಗಿದ್ದರು, ನಾನೇ ನಿಲ್ಲಿಸಿ, ಯಾವುದಕ್ಕೂ ಅವರ ಸಾಬರಿಗೆ ಒಂದು ಮಾತು ಹೇಳಿ ಬರುತ್ತೇನೆಂದು ಬಂದೆ" ಎಂದರು.

"ಸಾಲಾ ಹರಾಮಿ, ಮನೆಯಲ್ಲಿ ವಯಸ್ಸಿಗೆ ಬಂದ ಹೆಣ್ಣು ಮಕ್ಕಳಿದ್ದಾರೆ, ಅವರಿಗೆ ಮದುವೆ ಮಾಡದೆ ಈ ತರಹ ಹಲ್ಕಾ ಕೆಲಸ ಮಾಡುತ್ತಿದ್ದಾನೆ ಇವನು" ಎಂದು ಧಗಧಗಿಸಿದ ಖಾನ್‌ಸಾಬರು

"ಪಂಡಿತ್‌ಜೀ ನಾನಂತೂ ಅವನಿಗೆ ಏನೂ ಹೇಳಲಾಗುವುದಿಲ್ಲ, ಇನ್ನೆರಡು ದಿನಗಳಲ್ಲಿ ನಮ್ಮ ಶಿಬಿರವನ್ನೇ ಖಾಲಿ ಮಾಡಿಬಿಡುತ್ತೇವೆ, ಆಗ ಈ ಹಲ್ಕಾ ಕೆಲಸ ತನಗೆ ತಾನೇ ಮುಗಿಯುತ್ತದೆ" ಎಂದರು.

ಸ್ವಲ್ಪ ಸಮಾಧಾನಗೊಂಡ ಪಂಡಿತ್‌ಜೀ "ಹೌದೆ. ಒಳ್ಳೆಯ ಕೆಲಸವೇ ಆಯಿತು. ಹಾಗಾದರೆ ನಾನು ಹೋಗಿ ಬರುತ್ತೇನೆ" ಎಂದೇಳಿದ ಪಂಡಿತ್‌ಜೀ ಎದ್ದು ನಿಂತರು.

**ಅಲೀಮಿಯನನ್ನು ಹಾರಿಸಿಕೊಂಡೋದ ಬಿರುಗಾಳಿ ಮಳೆ :**

ಒಂದು ದಿನ ಫೀಲ್ಡ್ ಕೆಲಸ ಮುಗಿಸಿಕೊಂಡು ಬರುವುದರೊಳಗೆ ಗಾಢವಾದ ಮೋಡಗಳು ನಾವಿದ್ದ ಸ್ಥಳವನ್ನು ಸುತ್ತುವರೆದವು. ಬೆಳ್ಳಂಬೆಳಕಾಗಿದ್ದ ದಿನ ನೋಡು

ನೋಡುತ್ತಿದ್ದಂತೆ ಅಮಾವಾಸ್ಯೆಯ ಕತ್ತಲಂತೆ ಮಾರ್ಪಟ್ಟಿತು. ಬಿರುಗಾಳಿ ಒಂದೇ ಸಮನೆ ಬೀಸತೊಡಗಿ ಮರಗಳೆಲ್ಲ ಬರುವ ಯಾವುದೋ ಕೆಟ್ಟ ಕ್ಷಣಗಳನ್ನು ಎದುರುಗೊಳ್ಳುವಂತೆ ಸದ್ದು ಮಾಡುತ್ತಿದ್ದವು. ನಾವು ರೂಮಿನ ಒಳಕ್ಕೆ ಸೇರಿಕೊಂಡು ಕಿಟಕಿಯಿಂದ ಹೊರಕ್ಕೆ ಇಣಿಕಿ ನೋಡುತ್ತಿದ್ದಂತೆ ಬಿರುಗಾಳಿ ಮಳೆ ಒಟ್ಟಾಗಿ ಕೈ ಕೈ ಹೆಣೆದುಕೊಂಡು ದಾಳಿ ಮಾಡಲು ಪ್ರಾರಂಭಿಸಿಯೇ ಬಿಟ್ಟಿತು.

ಹಾಲ್‌ನಲ್ಲಿ ಒಂದು ಕಿಟಕಿಯ ಗಾಜು ಒಡೆದು ಹೋಗಿದ್ದರಿಂದ ಗಾಳಿ ಒಂದೇ ಸಮನೆ ಒಳಕ್ಕೆ ನುಗ್ಗಿ ಬರುತ್ತಿದ್ದು ನೋಡು ನೋಡುತ್ತಿದ್ದಂತೆ ಇನ್ನೆರಡು ಕಿಟಕಿ ಗಾಜುಗಳು ಫಳ್ ಫಳಾರನೆ ನೆಲಕ್ಕೆ ಬಿದ್ದು ಒಡೆದು ಹೋದವು. ನಾವು ನೋಡುತ್ತಿದ್ದ ಕಿಟಕಿ ಮುಚ್ಚಿ ದೂರ ನಿಂತುಕೊಂಡೆವು. ಸುಶೀಲ "ರೀ ನನಗ್ಯಾಕೋ ಭಯಾ ಆಗುತ್ತೆ" ಎಂದು ಮೂಲೆಗೆ ಸೇರಿಕೊಂಡಳು. ಕ್ರಾಂತಿ "ಡ್ಯಾಡಿ ಈ ಮನೆ ಬಿದ್ದೋದರೆ" ಎಂದು ಆಲೋಚಿಸತೊಡಗಿದ. ಗಾಳಿ ಪಶ್ಚಿಮದಿಂದ ಪೂರ್ವಕ್ಕೆ ಬೀಸುತ್ತಿದ್ದಂತೆ ಪೂರ್ವದ ಬಾಗಿಲನ್ನು ತೆಗೆದು ಹೊರಕ್ಕೆ ನೋಡುತ್ತಿದ್ದೇವೆ. ಸಂಕಟ ಆಗಲೇ ಬಂಗಲೆ ಸೇರಿಕೊಂಡಿದ್ದಾನೆ. ಅಲೀಮಿಯ ಮಾತ್ರ ತನ್ನ ಡೇರೆಯ ಮಧ್ಯದ  ಬಿದಿರು ಕಂಭವನ್ನು ಗಟ್ಟಿಯಾಗಿ ಹಿಡಿದುಕೊಂಡು ನಿಂತಿದ್ದಾನೆ. ಬಿಟ್ಟರೆ ಪೂರ್ತಿ ಡೇರೆ ಹಾರಿ ಹೋಗಲಿದೆ. ಬರಿ ಡೇರೆ ಹಾರಿದರೆ ಪರವಾಗಿಲ್ಲ, ಅದರಲ್ಲಿರುವ ಅಲೀಮಿಯನ ಹಾಸಿಗೆ, ಅಡಿಗೆ ಪಡಿಗೆ ಸಾಮಾನುಗಳು ಕೂಡ ಡೇರೆ ಜೊತೆಗೆ ಹಾರಿಹೋಗಲು ತಯಾರಾಗಿ ನಿಂತಿವೆ.

ಚಂಡ ಮಾರುತ ಇನ್ನಷ್ಟು ಜೋರಾಗಿ, ಮರದ ಕೊಂಬೆಗಳೆಲ್ಲ ಲಟಲಟನೆ ಮುರಿದು ಬೀಳುತ್ತಿವೆ. ಡೇರೆಯ ಜೊತೆ ಇನ್ನೇನು ಅಲೀಮಿಯ ಕೂಡ ಹಾರಬೇಕು. ಅಷ್ಟರಲ್ಲಿ ಅಲೀಮಿಯ ತನಗೆ ಮುಂದೆ ಬರಲಿರುವ ತೊಂದರೆಯನ್ನು ಅರಿತುಕೊಂಡು ಡೇರೆಯ ಮಧ್ಯದ ಆಧಾರಸ್ಥಂಭವನ್ನು ಬಿಟ್ಟು ಒಂದೇ ಓಟಕ್ಕೆ ಬಂಗಲೆ ಕಡೆಗೆ ಓಡತೊಡಗಿದ. ಮೊದಲೇ 45 ಕೆಜಿ ತೂಕವಿದ್ದ ಅಲೀಮಿಯನನ್ನು ಬಿರುಗಾಳಿ ಸಲೀಸಾಗಿ ಒಂದಷ್ಟು ಮೇಲಕ್ಕೆ ಹಾರಿಸಿಕೊಂಡು ಹೋಗಿ ನೆಲಕ್ಕೆ ಒಗೆಯಿತು. ಅಲೀಮಿಯ ಎದ್ದು ಬಿದ್ದು ಬಂಗಲೆ ಕಡೆಗೆ ಬರಲು ಪ್ರಯತ್ನಿಸಿದರೆ ಗಾಳಿ ಇನ್ನೊಂದು ಕಡೆಗೆ ಹಾರಿಸಿಕೊಂಡು ಹೋಗುತ್ತಿತ್ತು. ಅಂತೂ ಇಂತೂ ಕೊನೆಗೂ ಬಂಗಲೆ ಸೇರಿಧ. ಖಾನ್ ಸಾಬರ ಅಡಿಗೆ ಡೇರೆ ಆಗಲೇ ತನ್ನ ಸ್ಥಳ ಬಿಟ್ಟು, ದೂರ ಹಾರಿ ಹೋಗಿತ್ತು. ಈಗ ನೋಡು ನೋಡುತ್ತಿದ್ದಂತೆ ಅಲೀಮಿಯನ ಡೇರೆ ಹಗ್ಗಗಳ ಸಮೇತ ಗಾಳಿಯಲ್ಲಿ ಹಾರಿ ದೂರ ದೂರ ಹೋಗುತ್ತಿತ್ತು. ಅಡಿಗೆ ಸಾಮಾನುಗಳು ಉರುಳುತ್ತಾ ಶಬ್ದ ಮಾಡುತ್ತಾ ಹಾರಾಡತೊಡಗಿದವು. ಮರಗಳು ಲಟಲಟನೆ ಬೇರುಗಳ ಸಮೇತ ತಲೆಕೆಳಗಾದವು.

ಸುಮಾರು ಒಂದೂವರೆ ಗಂಟೆ ಆದ ಮೇಲೆ ಪರಿಸ್ಥಿತಿ ಮತ್ತೆ

ಉಸಿರಾಡುವಂತಾಯಿತು. ಮಳೆ ಗಾಳಿ ಒಮ್ಮೆಲೆ ನಿಂತು ಹೋಯಿತು. ಸಂಕಟ, ಅಲೀಮಿಯಾ ಟಾರ್ಚ್ ತೆಗೆದುಕೊಂಡು ಸಾಮಾನುಗಳನ್ನು ಹೊಲಗಳೆಲ್ಲೆಲ್ಲಾ ಹುಡುಕತೊಡಗಿದರು. ಕೆಲವು ಸಾಮಾನುಗಳು ಮಾತ್ರ ಸಿಕ್ಕಿದ್ದವು. ಅಂದು ರಾತ್ರಿ ಖಾನ್, ಸಂಕಟ ಮತ್ತು ಅಲೀಮಿಯನಿಗೆ ನಾವೇ ಊಟ ಹಾಕಿ ಸುಧಾರಿಸಿದೆವು. ಅಲೀಮಿಯ ಮತ್ತು ಸಂಕಟ ಬಂಗಲೆಯ ಹಾಲಿನಲ್ಲಿ ಮಲಗಿಕೊಂಡರು.

ರಾತ್ರಿಯೆಲ್ಲಾ ಡೇರೆ, ಹಾಸಿಗೆ ಮತ್ತು ತನ್ನ ಸಾಮಾನುಗಳ ಬಗ್ಗೆ ತಲೆ ಕೆಡಿಸಿಕೊಂಡಿದ್ದ ಅಲೀಮಿಯ ತನ್ನ ಕೋಳಿಗಳ ಬಗ್ಗೆ ಪೂರ್ತಿ ಮರೆತೇ ಹೋಗಿದ್ದ ಎನಿಸುತ್ತದೆ. ಬೆಳಗ್ಗೆ ಎದ್ದೊಡನೆ, ಜ್ಞಾಪಿಸಿಕೊಂಡು ಹುಡುಕಲು ಪ್ರಾರಂಭಮಾಡಿದ. ಎಷ್ಟೇ ಹುಡುಕಿದರೂ ಒಂದೇ ಒಂದು ಕೋಳಿಪಿಳ್ಳೆಯೂ ಕಾಣಿಸಲಿಲ್ಲ. ಸ್ವಲ್ಪ ಅನುಮಾನವಾಗಿ ದಿನಾ ಸಾಯಂಕಾಲ ಮುಚ್ಚಿಡುತ್ತಿದ್ದ ನೆಲದ ಗೂಡೂಗಳಲ್ಲಿ ಹೋಗಿ ನೋಡುತ್ತಾನೆ, ಗೂಡುಗಳಲ್ಲಿ ಎಲ್ಲಾ ಕೋಳಿಗಳು ಮುದುರಿಕೊಂಡಿದ್ದು, ಹಿಟ್ಲರ್‌ನ ಸಾವು ಕೂಪಗಳಾಗಿ ಮಾರ್ಪಟ್ಟಿವೆ.

* * *

ನಮ್ಮಲ್ಲಿದ್ದ ದೊಡ್ಡ ದೊಡ್ಡ ಡೇರೆಗಳು ಮತ್ತು ಪ್ರಯೋಜನವಿಲ್ಲದ ಸಾಮಾನುಗಳನ್ನು ಗೋರಾವೆಲ್ ಬಂಗಲೆಯಲ್ಲಿ ಬಿಟ್ಟು ಹತ್ತು ದಿನಗಳಾದ ಮೇಲೆ ಮತ್ತೆ ಗೋರಾವಲ್‌ಗೆ ಬಂದು ಒಂದೆರಡು ದಿನಗಳು ವಿಶ್ರಾಂತಿ ಪಡೆದುಕೊಂಡು ಲಖನೌಗೆ ಹೋಗುವುದಾಗಿ ತೀರ್ಮಾನಿಸಿದೆವು. ಈಗ ಎಷ್ಟು ಬೇಕೋ ಅಷ್ಟು ಸಾಮಾನುಗಳನ್ನು ಟ್ರೇಲರ್‌ನಲ್ಲಿ ತುಂಬಿಕೊಂಡು ಸೋನ್ ನದಿಯ ದಕ್ಷಿಣಕ್ಕೆ ಪ್ರಯಾಣ ಮಾಡಿದೆವು. ವಿಶಾಲವಾಗಿ ಹರಿಯುತ್ತಿದ್ದ ಸೋನ್ ನದಿಯನ್ನು ಸುತ್ತಿ ಬಳಸಿ ದೊಡ್ಡ ದೊಡ್ಡ ಮರಗಳು, ಸಣ್ಣಪುಟ್ಟ ಗುಡ್ಡಗಳು, ಕಡಿದಾದ ಇಕ್ಕಾಟದ ತಿರುವುಗಳ ನಡುವೆ ಜೀಪು ಹೋಗುತ್ತಿದ್ದರೆ ಯಾವುದೋ ದಿಕ್ಕುದೆಸೆ, ಗೊತ್ತು ಗುರಿ ಇಲ್ಲದ ಕಾಡೊಳಗೆ ಹೋಗುತ್ತಿರುವ ಅನುಭವವಾಗುತ್ತಿದೆ. ಸುಶೀಲ ಆಗಾಗ ನನ್ನ ಕಡೆಗೆ ನೋಡಿ ಒಳಗೊಳಗೆ ಗುಟುರು ಹಾಕುತ್ತಿದ್ದಾಳೆ. ಜೀಪು ನಾವು ಸೇರಬೇಕಾದ ಸ್ಥಳವನ್ನು ತಲುಪಿ ನಿಂತುಕೊಂಡಿತು. ಅಷ್ಟೊತ್ತು ಸುಮ್ಮನಿದ್ದ ಸುಶೀಲ ಮಾವಿನ ಮರಗಳ ತೋಪಿನ ಕೆಳಗೆ ಇಳಿದಿದ್ದೇ ಹ್ಯಾಪ್ ಮೊರೆ ಹಾಕಿಕೊಂಡು ಕುಸಿದು ಕುಳಿತುಕೊಂಡಳು.

ಆ ಮರಗಳ ಕೆಳಗೆ ಎಲ್ಲಾದರೂ ಒಂದೆರಡು ಕಲ್ಲುಗಳನ್ನು ನಿಲ್ಲಿಸಿದ್ದರೆ ತೇಟ್ ಮಸಣವೇ ಆಗಿಬಿಡುತ್ತಿತ್ತು. ಧೈರ್ಯದ ವಿಷಯವೆಂದರೆ ನಮಗಿಂತ ಒಂದು ದಿನ ಮುಂಚಿತವಾಗಿಯೇ ಅಲೀಮಿಯ, ಖಾನ್ ಅವರನ್ನು ಆ ಸ್ಥಳದಲ್ಲಿ ಬಿಟ್ಟು ಬಂದಿದ್ದು, ಜೊತೆಗೆ ಇನ್ನೊಬ್ಬ ಖಾನ್ ಕೂಡ ತನ್ನ ಪತ್ನಿ ಮತ್ತು ಮೂವರು ಮಕ್ಕಳ ಸಮೇತ ಅಲ್ಲಿಗೆ ಆಗಲೇ ತಲುಪಿದ್ದ. ಮೂವರಲ್ಲಿ ಕೊನೆಯ ಮಗು ಕೇವಲ ಐದು ತಿಂಗಳ ಹೆಣ್ಣು ಮಗು.

ನಾನು ಆ ಸ್ಥಳವನ್ನು ಮುಂಚಿತವಾಗಿಯೇ ನೋಡಿ ಬಂದಿದ್ದರೂ ಅದರ ವಿವರವನ್ನು ಸುಶೀಲಳಿಗೆ ಹೇಳಿರಲಿಲ್ಲ. ಕಾರಣ ಅದೊಂದು ನಿರ್ಗಮಪ್ರದೇಶವೆಂದೇ ಹೇಳಬೇಕು. ದೂರ ದೂರದಲ್ಲಿ ಸಣ್ಣ ಪುಟ್ಟ ಅತಿ ಹಿಂದುಳಿದ ಬುಡಕಟ್ಟು ಜನಾಂಗದವರು ಮಾತ್ರ ವಾಸಿಸುತ್ತಿದ್ದ ಗುಡಿಸಲುಗಳಿದ್ದವು. ನಮಗೆ ಉಳಿದುಕೊಳ್ಳಲು ಯಾವ ಆಧಾರವೂ ಕಾಣದಿದ್ದಾಗ ಅಲ್ಲೇ ಸೋನ್ ನದಿಯ ದಡದಲ್ಲೇ ಒಂದು ಮಾವಿನ ತೋಪನ್ನೇ ನಮ್ಮ ಶಿಬಿರಕ್ಕೆ ಆಯ್ಕೆ ಮಾಡಿಕೊಂಡಿದ್ದೆವು.

ಎತ್ತರಕ್ಕೆ ಬೆಳೆದು ವಿಶಾಲವಾಗಿ ಹರಡಿಕೊಂಡಿರುವ ಮಾವಿನ ಮರಗಳು. ಮರಗಳ ತುಂಬಾ ತುಂಬಿ ತುಳುಕಾಡುತ್ತಿರುವ ಮಾವಿನ ಕಾಯಿಗಳು, ಅವುಗಳ ಗಮಗಮ ವಾಸನೆ, ಸುತ್ತಲು ಗೋಧಿ, ಸಾಸುವೆ, ತೊಗರಿ ಹೊಲಗಳು. ಶಿಬಿರದ ಹಿಂದೆಯೇ ಉಸುಗು ತುಂಬಿ ಹರಿಯುತ್ತಿರುವ ವಿಶಾಲ ಸೋನ್ ನದಿ.

ಮೊದಲಿಗೆ ಶಿಬಿರವನ್ನು ನೋಡಿ ಹೌಹಾರಿದ್ದ ಸುಶೀಲ ಸುಮಾರು ಹೊತ್ತಾದ ಮೇಲೆ ಸುಧಾರಿಸಿಕೊಂಡಿದ್ದಳು. ಅನಂತರ ಖಾನ್ ಪರಿವಾರ ಅಲ್ಲಿ ಹಾಜರಾಗಿದ್ದರಿಂದ ಹತ್ತು ದಿನಗಳು ತಾನೆ ಎಂದು ಸ್ವಲ್ಪ ನೆಮ್ಮದಿ ಪಡೆದವಳಂತೆ ಉಸಿರಾಡತೊಡಗಿದಳು. ಬಿಸಿಲು ಜಳ ಬೆಳಗ್ಗೆ ಹತ್ತು ಗಂಟೆಗೆಲ್ಲಾ ಶುರುವಾಗಿ ಬೆವರು ಒಂದೇ ಸಮನೆ ಸುರಿಯುತ್ತಿದ್ದು, ರಾತ್ರಿ ಹನ್ನೊಂದು ಗಂಟೆಯಾದರೂ ಸೆಕೆ ಕಡಿಮೆ ಆಗುತ್ತಿರಲಿಲ್ಲ.

ಡೇರೆಯ ಒಳಗೆ ಮಲಗಿಕೊಳ್ಳುವುದಕ್ಕೆ ಸಾಧ್ಯವೇ ಇರಲಿಲ್ಲ. ಕ್ರಾಂತಿ ಮತ್ತು ಸುಶೀಲಳನ್ನು ಡೇರೆಯ ಬಾಗಿಲಲ್ಲಿ ಮಂಚ ಹಾಕಿ ಮಲಗಿಸಿ, ನಾನು ಅವರ ತಲೆಯ ಹತ್ತಿರ ಇನ್ನೊಂದು ಮಂಚದಲ್ಲಿ ಮಲಗಿಕೊಳ್ಳುತ್ತಿದ್ದೆ. ಗಾಢವಾದ ಕತ್ತಲಲ್ಲಿ ಕಂದೀಲು ಬೆಳಕು ಮಿಣುಕು ಹುಳುವಿನಂತೆ ಹೊಳೆಯುತ್ತಿತ್ತು. ಇಬ್ಬರು ಕಾವಲುಗಾರರಿಗೆ ಎರಡು ದೊಣ್ಣೆಗಳನ್ನು ಕೊಟ್ಟು, ರಾತ್ರಿಯೆಲ್ಲ ನಿದ್ದೆ ಮಾಡದೆ ಡೇರೆಗಳ ಸುತ್ತಲು ಗಸ್ತು ಹೊಡೆಯುವಂತೆ ಆಜ್ಞೆ ಮಾಡಿದ್ದೆವು. ಗಾಳಿ ಬೀಸಿದರೆ ಮಾವಿನ ಕಾಯಿಗಳು ಡೇರೆಗಳ ಮೇಲೆ ಪಟಪಟ ಎಂದು ಬಿದ್ದು ಭಯವನ್ನುಂಟುಮಾಡುತ್ತಿದ್ದವು.

ಬೆಳಗ್ಗೆ ಆರು ಗಂಟೆಗೆಲ್ಲ ಫೀಲ್ಡ್‌ಗೆ ಹೋಗಿ ಹನ್ನೊಂದು ಗಂಟೆಗೆಲ್ಲ ವಾಪಸ್ ಬಂದು ಬಿಡುತ್ತಿದ್ದೆವು. ಬಂದಿದ್ದೇ ಊಟ ಮಾಡಿ ಇನ್ನೊಂದು ಡೇರೆಯ ಒಳಗೆ ಒಂದೆರಡು ಬಕೆಟ್ ನೀರು ಸುರಿದು ಮೂವರೂ ಮಂಚದ ಮೇಲೆ ಕುಳಿತುಕೊಂಡುಬಿಡುತ್ತಿದ್ದೆವು. ಜೊತೆಗೆ ಆಗಾಗ ಡೇರೆಯ ಮೇಲೆ ನೀರು ಚೆಲ್ಲಿಸುತ್ತಿದ್ದು, ಹವಾನಿಯಂತ್ರಣ ಕೊಠಡಿಯಲ್ಲಿ ಕುಳಿತಿರುವಂತೆ ಭಾಸವಾಗುತ್ತಿತ್ತು.

ಐದು ಗಂಟೆಯಾಗಿ ಬಿಸಿಲಿನ ತಾಪ ಕಡಿಮೆಯಾದಾಗ ಮಾತ್ರ ಹೊರಕ್ಕೆ ಬರುತ್ತಿದ್ದೆವು. ಇದರ ಮಧ್ಯೆ ಕ್ರಾಂತಿ ಸ್ನಾನ ಮಾಡುವ ನೆಪದಲ್ಲಿ ನೀರಿನ ಬಕೆಟ್‌ನಲ್ಲಿ ಕುಳಿತುಬಿಟ್ಟರೆ ಏಳುತ್ತಲೇ ಇರಲಿಲ್ಲ. ಸ್ನಾನವಾದ ಮೇಲೆ ನೈಸಿಲ್ ಪೌಡರನ್ನು ಮೈಗೆ ಹಾಕಿ ಉಷ್ಣದ ಗುಳ್ಳೆಗಳನ್ನು ಬರದಂತೆ ನೋಡಿಕೊಳ್ಳುತ್ತಿದ್ದೆವು.

ಸಾಯಂಕಾಲವಾಗಿದ್ದ್ರೆ ನದಿಯ ತೀರಕ್ಕೆ ಹೋಗಿ ಮರಳಲ್ಲಿ ಕುಳಿತುಬಿಟ್ಟರೆ ತಣ್ಣಗೆ ಗಾಳಿ ಮೈ ನವಿರೇಳಿಸುವಂತೆ ಬೀಸುತ್ತಿತ್ತು. ಕ್ರಾಂತಿ ಮಕ್ಕಳ ಜೊತೆ ನದಿಯ ನೀರಿನಲ್ಲಿ, ಮರಳು ದಂಡೆಯಲ್ಲಿ ಸಂತೋಷದಿಂದ ಆಡಿಕೊಳ್ಳುತ್ತಿದ್ದ. ನದಿ ಆಳವಾಗಿಲ್ಲದ ಕಾರಣ ನಾವೂ ಮಕ್ಕಳನ್ನು ಸ್ವತಂತ್ರವಾಗಿ ಬಿಟ್ಟುಬಿಡುತ್ತಿದ್ದೆವು.

ಅದಕ್ಕಿನ್ನು ಮಿಗಿಲಾಗಿ ಡೇರೆಯ ಮುಂದೆಯೇ ಮಾವಿನ ಕೊಂಬೆಗೆ ಉಯ್ಯಾಲೆ ಕಟ್ಟಿಕೊಟ್ಟಿದ್ದರಿಂದ ಮಕ್ಕಳೆಲ್ಲ ಇನ್ನಷ್ಟು ಖುಷಿಯಿಂದ ಆಡಿಕೊಳ್ಳುತ್ತಿದ್ದರು. ಎಳೆ ಮಾವಿನ ಕಾಯಿಗಳನ್ನೇ ಕ್ರಿಕೆಟ್ ಬಾಲ್ ಮಾಡಿಕೊಂಡು ಕ್ರಿಕೆಟ್ ಆಡುತ್ತಿದ್ದರು. ಹತ್ತು ದಿನಗಳು ಹಾಗೇ ಕಳೆದು ಹೋಗಿದ್ದವು.

**ಕಾಶಿಯಲ್ಲಿ :**

ಒಂದು ದಿನ ನಾವು, ಖಾನ್ ಇನ್ನೊಬ್ಬ ಮತ್ತು ಖಾನ್ ಕುಟುಂಬವನ್ನು ಸೇಮಿಯಾದಲ್ಲೆ ಬಿಟ್ಟು ಭೋಪಾನ್ ಮುಖಾಂತರ ರೈಲು ಹತ್ತಿ ಕಾಶಿಯ ಕಡೆಗೆ ಪ್ರಯಾಣ ಮಾಡಿದೆವು. ಕೊನೆಯದಾಗಿ ಮತ್ತೊಮ್ಮೆ ಶ್ರೀಮತಿ ಸಿಂಗ್ ಅವರನ್ನು ಸಂಧಿಸಲು ಮರೆಯಲಿಲ್ಲ. ಖಾನ್ ಮಾತ್ರ ಬರುವಾಗ ಗೋರಾವಲ್‌ಗೆ ಹೋಗಿ ಅಲ್ಲಿರುವ ಡೇರೆ ಮತ್ತು ಸಾಮಾನುಗಳನ್ನು ಹಾಕಿಕೊಂಡು ಲಖನೌಗೆ ಬರಬೇಕಾಗಿತ್ತು. ರಾತ್ರಿ ಭೋಪಾನ್ ಬಿಟ್ಟು ಬೆಳಗ್ಗೆ ಬನಾರಸ್ ತಲುಪಿದೆವು.

ರಾತ್ರಿ ರೈಲಿನಲ್ಲಿ ಮಲಗಿದ್ದಂತೆ, ಅಲೀಮಿಯ ಕತೆ ಯಾಕೋ ಯೋಚಿಸಿದಷ್ಟು "ಅಲೀಫ್ ಲೈಲಾ" ತರಹ ಉದ್ದುವಾಗುತ್ತಾ ಮುಕ್ತಾಯವಿಲ್ಲದೆ ರೈಲಿನ ಗಾಲಿಗಳ ಮೇಲೆ ಸಾಗುತ್ತಲೇ ಇತ್ತು. ಈ ಅಲೀಮಿಯ ಕತೆ ನನಗೆ ಪಂಡಿತ್‌ಜೀ ಹೇಳುವುದಕ್ಕಿಂತ ಮುಂಚೆಯೇ ಅಲ್ಪ ಸ್ವಲ್ಪ ಗೊತ್ತಿತ್ತು.

ಒಂದು ದಿನ ನಾನೊಬ್ಬನೆ ಅಲೀಮಿಯನ ಜೊತೆ ಟೂರ್‌ಗೆ ಹೋಗುವ ಪ್ರಸಂಗ ಬಂದಿತ್ತು. ಜೀಪನ್ನು ಒಂದು ಕಡೆ ನಿಲ್ಲಿಸಿ.

"ನೀನು ಇಲ್ಲೇ ಇರು, ನಾನು ಬರುತ್ತೇನೆಂದು" ಒಂದು ದಿಬ್ಬವನ್ನು ಇಳಿಯಲು ಹೋದೆ. ಅಷ್ಟರಲ್ಲಿ ಹಿಂದೆಯೇ ಬಂದ ಅಲೀಮಿಯ,

"ಸಾಬ್" ಎಂದ. ಏಕೆ ಎನ್ನುವಂತೆ ಹಿಂದಕ್ಕೆ ತಿರುಗಿ ನೋಡಿದೆ.

"ಸಾಬ್, ನಿಮ್ಮ ಹತ್ತಿರ ಸ್ವಲ್ಪ ಮಾತನಾಡಬೇಕು" ಹೇಳಿದ.

"ಹರೆ, ನನ್ನ ಹತ್ತಿರ ಅಂತಹ ವಿಷಯವಾದರೂ ಏನು ?" ಕೇಳಿದೆ.

"ಆಪ್ ತೊ ಹಮಸೇ ಛೋಟಾ ಹೈ, ಲೇಕಿನ್ ಪಢೆಲಿಖೆ ಜಾದಾ ಹೈನಾ ಇಸ್‌ಲಿಯೇ ಏಕ್ ಬಾತ್ ಪೂಛೇಂಗೆ. ಆಪ್ ಗಲತ್ ಮತ್ ಸಂಜಿಯೇ" (ನೀವು ವಯಸ್ಸಿನಲ್ಲಿ ನನಗಿಂತ ಚಿಕ್ಕವರು, ಆದರೆ ಓದು ಬರಹದಲ್ಲಿ ದೊಡ್ಡವರು,ಆದ್ದರಿಂದ ಒಂದು ಮಾತು ಕೇಳುತ್ತೇನೆ, ನೀವು ತಪ್ಪು ತಿಳಿಯಬಾರದು) ಎಂದು ಪೀಠಿಕೆ ಹಾಕಿದ.

ಆ ಐವತ್ತು ವರ್ಷಗಳ ಬುಡ್ಡಾ ನವ್ ಜವಾನ್ ಶುರುಮಾಡಿದಾಗಲೇ ನನಗೆ ಅರ್ಥ ಆಗಿದ್ದರೂ,

"ಹೇಳು ಮಿಯ ಅದರಲ್ಲೇನಿದೆ" ಎಂದೆ.

"ಉದಾಹರಣೆಗೆ ನನಗೆ ಮದುವೆ ಆಗಿದೆ, ಅಂದುಕೊಳ್ಳೋಣ, ಮಕ್ಕಳಿದ್ದಾರೆ, ಹೆಂಡತಿ ಇದ್ದಾಳೆ, ಆದರೂ ಇನ್ನೊಬ್ಬಳನ್ನು ಕರೆದುಕೊಂಡು ಹೋಗಿಬಿಟ್ರೆ, ಏನಾಗುತ್ತದೆ?" ಎಂದು ನನ್ನನ್ನೆ ನೋಡಿದ.

"ಕರೆದುಕೊಂಡು ಹೋದವಳಿಗೆ ಮದುವೆ ಆಗಿದೆಯೋ ? ಇಲ್ಲವೋ ?" ಕೇಳಿದೆ.

"ಆಗಿದೆ ಎಂದು ಕೊಳ್ಳೋಣ" ಎಂದ.

ನನಗ್ಯಾಕೋ ಈ ತಿಪ್ಪೆ ಪ್ರಶ್ನೆಗಳಿಗೆ ಉತ್ತರ ಕೊಡಲು ಇಚ್ಛೆ ಇಲ್ಲದೆ

"ನೋಡು ಅಲೀಮಿಯ ಈ ಅಷ್ಟು ಕತೆಗಳೆಲ್ಲ ಬೇಡ, ನೀನು ಏನು ಮಾಡುತ್ತಿದ್ದೀಯೋ ಅದು ಸರಿಯಲ್ಲ. ನಿನಗೆ ಮದುವೆ ಆಗಿ ಮಕ್ಕಳಿದ್ದಾರೆ. ಒಳ್ಳೆ ಹೆಂಡತಿ ಇದ್ದಾಳೆ. ಇದುವರೆಗೂ ಏನಾಯಿತೋ ಅದನ್ನೆಲ್ಲಾ ಮರೆತುಬಿಟ್ಟು ಲಖನೌ ಸೇರಿಕೊಳ್ಳುವುದು ನೋಡಿಕೋ.. ನಿನ್ನ ವಯಸ್ಸಿಗೆ ನೀನು ನನಗೆ ಬುದ್ಧಿ ಹೇಳಬೇಕಾಗಿತ್ತು, ಆದರೆ ನಾನು ನಿನಗೆ ಹೇಳುತ್ತಿದ್ದೇನೆ" ಎಂದೆ.

ನನ್ನ ಮಾತುಗಳಿಗೆ ಸ್ವಲ್ಪ ತಬ್ಬಿಬ್ಬಾದ ಅಲೀಮಿಯ ಮೀಸೆ ಮಣ್ಣಾಗಲಿಲ್ಲ ಎನ್ನುವಂತೆ ವಾದಿಸತೊಡಗಿದ.

"ಸಾಬ್ ನೀವು ನನ್ನ ಪೂರ್ತಿ ತಪ್ಪು ತಿಳಿದುಕೊಂಡಿದ್ದೀರ, ಅವರ ಮನೆಗೆ ಹೋಗುತ್ತೇನೆ, ಬರುತ್ತೇನೆ. ಆ ಹುಡುಗಿಯ ಜೊತೆ ಮಾತನಾಡುತ್ತೇನೆ, ಅಷ್ಟೇ ವಿನಃ ನಾನೇನೂ ಕೆಟ್ಟದಾಗಿ ನಡೆದುಕೊಂಡಿಲ್ಲ" ಎಂದ.

"ಸರಿ, ಹಾಗೆ ತಿಳಿದುಕೊಳ್ಳೋಣ, ಹಾಗಾದರೆ ಮೊದಲು ಬಿಚ್ಚಿದ್ದಿಯಲ್ಲ, ಆ ಕತೆ ಯಾರದು ? ಯಾವ ಸಿನಿಮಾ ಕತೆ.. ?" ಪ್ರಶ್ನಿಸಿದೆ.

"ಸಾಬ್, ನಾವು ನನಗೆ ಒಳ್ಳೆ ಸಲಹೆ ಕೊಡುತ್ತೀರೆಂದು ನಿಮಗೆ ಹೇಳಿದರೆ, ನೀವು ಏನೇನೋ ಹೇಳುತ್ತೀರ" ಎಂದ.

"ನೋಡು ಅಲೀಮಿಯ, ನಾನು ಇದುವರೆಗೂ ಹೇಳಿದ್ದೆ ಒಳ್ಳೆ ಸಲಹೆ. ಅದನ್ನು ಬಿಟ್ಟು ಬೇರೆ ಏನು ಮಾಡಿದರೂ ಫಲಿತಾಂಶ ಬೇರೆಯೇ ಆಗಿಬಿಡುತ್ತದೆ" ಎಂದೆ. ಅಲೀಮಿಯ ಪೆಚ್ಚು ಮುಖ ಹಾಕಿಕೊಂಡು ಒಂದಕ್ಕೆ ತಿರುಗಿಕೊಂಡ. ಮುಂದಿನ ಕತೆ ಯಾವ ರೀತಿಯಾಗಿ ಕೊನೆಗೊಳ್ಳುತ್ತದೆಯೋ ನೀವೆ ಮುಂದಕ್ಕೆ ಕಾದು ನೋಡಿ? ಬೆಳಿಗ್ಗೆ ಬನಾರಸ್ ತಲುಪಿ ಹೋಟೆಲ್‌ನಲ್ಲಿ ಇಳಿದುಕೊಂಡೆವು.

"ಅಬ್ಬ, ನೀವು ಎಲ್ಲಿಗಾದರೂ ಹೋಗಿ, ನಾನು ಮಾತ್ರ ಫ್ಯಾನ್ ಬಿಟ್ಟು ಏಳುವುದೇ ಇಲ್ಲ" ಎಂದು ಹಾಸಿಗೆಯ ಮೇಲೆ ಉರುಳಿಕೊಂಡಳು ಸುಶೀಲ. ಅಲ್ಲೇ ಊಟ, ಅಲ್ಲೇ ವಿಶ್ರಾಂತಿ.

ಸಮಯ ನಾಲ್ಕು ಗಂಟೆಯಾಗಿ ಹೋಟಲಿಂದ ರಸ್ತೆಗೆ ಬಂದಿದ್ದೆ ಸೈಕಲ್ ರಿಕ್ಷಾ ನಿಲ್ಲಿಸಿ ಕಾಶಿ ವಿಶ್ವನಾಥನ ಗುಡಿಗೆ ಹೋಗುವಂತೆ ಹೇಳಿದೆ. ಸೈಕಲ್ ರಿಕ್ಷಾದವನು ಸುಮಾರು ದೂರ ಚಲಿಸಿದ ಮೇಲೆ ಒಂದು ರಸ್ತೆಯ ಮಧ್ಯದಲ್ಲಿ ನಿಲ್ಲಿಸಿದ.

" ಹೀಗೆ ಹೋಗಿ ಸಾಬ್ ಗುಡಿ ಸಿಗುತ್ತದೆ" ಎಂದ. ಇವನು ನಿಜ ಹೇಳುತ್ತಿದ್ದಾನೋ ಸುಳ್ಳು ಹೇಳುತ್ತಿದ್ದಾನೋ, ಅರ್ಥವಾಗಲಿಲ್ಲ. ಅಷ್ಟರಲ್ಲಿ ಅಲ್ಲಿಗೆ ಬಂದ ಐವತ್ತರ ಗಡಿಯಲ್ಲಿದ್ದ ಒಬ್ಬ ಮುದುಕ,

"ಹೌದು ಸಾಬ್ ಗುಡಿಗೆ ಈ ದಾರಿಯಲ್ಲೇ ಹೋಗಬೇಕು, ನಾನು ಕರೆದುಕೊಂಡು ಹೋಗುತ್ತೇನೆ" ಎಂದ.

ಸೈಕಲ್ ರಿಕ್ಷಾದವನಿಗೆ ಹಣ ಕೊಟ್ಟು ಕಳುಹಿಸುವುದರೊಳಗೆ ಉತ್ತರ ದಕ್ಷಿಣದ

ಎಲ್ಲಾ ಭಾಷೆಗಳಲ್ಲೂ ಮಾತನಾಡಿಬಿಟ್ಟಿದ್ದ ಮುದುಕ ಕೊನೆಗೆ ಸುಶೀಲ ಒಂದೆರಡು ತೆಲುಗು ಮಾತುಗಳನ್ನು ಮಾತನಾಡಿದ್ದೇ ತೆಲುಗಿನಲ್ಲಿ ಮಾತನಾಡಲು ಶುರುಮಾಡಿದ. ಪಕ್ಕಾ ಕಾಟ್‌ಪಾಡಿಯಂತೆ ಕಾಣಿಸುತ್ತಿದ್ದ ಮುದುಕನ ಮಾತುಗಳು ನನಗ್ಯಾಕೋ ಹಿಡಿಸಲಿಲ್ಲ. ಆದರೂ ಜೊತೆಗೆ ಇರಲಿ ಎಂದು,

"ಎಷ್ಟು ಕೊಡಬೇಕು ?" ಕೇಳಿದೆ.

"ಸ್ವಾಮಿ, ನೀವು ಎಷ್ಟಾದರೂ, ಕೊಡಿ" ಎಂದ.

"ಯೋ ಅದೆಲ್ಲಾ ಬೇಡ, ಎಷ್ಟು ಕೊಡಬೇಕು ಮೊದಲೇ ಹೇಳು?" ಎಂದೆ.

"ಸ್ವಾಮಿ ಹತ್ತು ರೂಪಾಯಿ ಕೊಡಿ, ಎಲ್ಲಾ ತೋರಿಸಿಬಿಡುತ್ತೇನೆ" ಅಘಾಟು, ಈ ಘಾಟು, ಹರಿಶ್ಚಂದ್ರ ಘಾಟು, ಹೀಗೆ ಬರೀ ಘಾಟುಗಳ ಹೆಸರುಗಳನ್ನೇ ಹೇಳಿದ.

"ನಮ್ಮನ್ನ ಮೊದಲು ಗುಡಿಗೆ ಕರೆದುಕೊಂಡೋಗು, ಮಿಕ್ಕಿದ್ದು ಆಮೇಲೆ ಹೇಳುತ್ತೇನೆ" ಎಂದೆ.

"ಏಳು ರೂಪಾಯಿ ಕೊಡಿ" ಎಂದ. ಒಳ್ಳೆ ಸಸ್ತಾ ಪಾರ್ಟಿ ಎಂದುಕೊಂಡು ನಡಿ ಎಂದೆ.

ಆ ಮುದುಕ ಮುಂದೆ. ನಾನು ಹಿಂದೆ. ನನ್ನಿಂದೆ ಸುಶೀಲ, ಕ್ರಾಂತಿ ನನ್ನ ಕಂಕುಳಲ್ಲಿ ನಡೆದು ಹೋಗುತ್ತಿದ್ದೇವೆ. ಒಂದು ಗಲ್ಲಿಯ ಮಧ್ಯದಲ್ಲಿ ಹೋಗುತ್ತಾ ಹೋಗುತ್ತಾ ಆ ಗಲ್ಲಿ ಇನ್ನಷ್ಟು ಇಕ್ಕಟ್ಟಾಗಿ, ಕಿರಿದಾಗಿ ಬರ್ಮಾ ಬಜಾರಿನಂತೆ ಮತ್ತಷ್ಟು ಕಿರಿದಾಗಿ ಅಲ್ಲಲ್ಲಿ ಸುತ್ತಿ ಬಳಸಿ ಹಾವಿನಂತೆ ಹೋಗುತ್ತಲೇ ಇದೆ. ಎರಡು ಕಡೆಯೂ ಸಣ್ಣ ಸಣ್ಣ ಪೆಟ್ಟಿಗೆಯಂತಹ ಅಂಗಡಿಗಳು. ಅಂಗಡಿಗಳ ತುಂಬಾ ಸಾಮಾನುಗಳು. ಒಂದೆರಡು ಕ್ಷಣಗಳು ನಿಂತುಕೊಂಡರೆ ಸಾಕು ಸುಮ್ಮನೇ ಎಳೆದಾಡಿಬಿಡುವಂತಹ ಸನ್ನಿವೇಶ. ಒಂದೆಜ್ಜೆ ಪಕ್ಕಕ್ಕೆ, ಸರಿದು ಸುಶೀಲಳನ್ನು ಮಧ್ಯಕ್ಕೆ ಬರುವಂತೆ ಕೇಳಿ ಹಿಂದೆಯೆ ಬಂದೆ. ಈಗ ಹೆಚ್ಚು ಕಡಿಮೆ ಗುಡಿಯ ಹತ್ತಿರಕ್ಕೆ ಬಂದಿದ್ದೆವು. ಮುದುಕ ಅದೇ ಸಾಲಿನಲ್ಲಿದ್ದ ಒಂದು ಸಣ್ಣ ಮಿಠಾಯಿ ಅಂಗಡಿಯ ಮುಂದೆ ನಿಂತುಕೊಂಡ.

"ಯಾಕೇ ನಡಿ" ಎಂದೆ.

"ಚಪ್ಪಲಿಗಳನ್ನು ಇಲ್ಲೇ ಬಿಡಿ ಎಂದ"

"ಏಕೆ ಚಪ್ಪಲಿ ಬಿಡುವುದಕ್ಕೆ ಬೇರೆ ಸ್ಥಳವಿಲ್ಲವೆ ?"

"ಇಲ್ಲ, ಯಾವುದಾದರೂ ಒಂದು ಅಂಗಡಿ ಮುಂದೆಯೇ ಬಿಡಬೇಕು" ಹೇಳಿದ.

ಒಳ್ಳೆ ಕತೆಯಾಯಿತಲ್ಲ, ಚಪ್ಪಲಿ, ಬೂಟುಗಳನ್ನು ಆ ಅಂಗಡಿಯ ಮುಂದೆ ಬಿಟ್ಟಿದ್ದೆ, ಗಲ್ಲಾ ಮೇಲೆ ಕುಳಿತಿದ್ದವನು ಮಿಠಾಯಿಗಳಿರುವ ಎರಡು ದೊನ್ನೆಗಳನ್ನು ನನಗೆ ಕೊಡಲು ಬಂದ.

"ಏಕೆ ?" ಕೇಳಿದೆ

"ಪೂಜೆಗೆ"

"ಪೂಜೆಗೆ..? ನಾನು ನಿಮಗೆ ಕೇಳಲಿಲ್ಲವಲ್ಲ"

"ಕೇಳದಿದ್ದರೆ ಏನಂತೆ ತೆಗೆದುಕೊಳ್ಳಿ" ಆಜ್ಞೆ ಮಾಡುವಂತೆ ಹೇಳಿದ. ಪಕ್ಕದಲ್ಲಿದ್ದ ಮುದುಕನ ಕಡೆಗೊಮ್ಮೆ ನೋಡಿದೆ,

"ಸ್ವಾಮಿ ಇದು ಮಾಮೂಲಿ, ಪ್ರಸಾದವನ್ನು ಒಳಕ್ಕೆ ತೆಗೆದುಕೊಂಡು ಹೋದರೆ ಅರ್ಚನೆ ಮಾಡಿಕೊಡುತ್ತಾರೆ" ಎಂದ.

"ನೀನು ಸ್ವಲ್ಪ ಬಾಯಿ ಮುಚ್ಚುತ್ತೀಯಾ" ಗದರಿದೆ. ಮುದುಕ ಸುಮ್ಮನಾದ.

"ಎರಡಕ್ಕೂ ಎಷ್ಟು ..? " ಅಂಗಡಿಯವನಿಗೆ ಕೇಳಿದೆ.

"24+24 = 48 ರೂಪಾಯಿಗಳು" ಎಂದ.

"ನನಗೆ ಬೇಕಾಗಿಲ್ಲ, ನಾನು ತೆಗೆದುಕೊಳ್ಳುವುದೂ ಇಲ್ಲ" ಎಂದೆ.

"ಹಾಗಾದರೆ ಚಪ್ಪಲಿಗಳನ್ನು ತೆಗೆದುಕೊಂಡು ಹೋಗು, ಇಲ್ಯಾಕೆ ನಿಂತಿದ್ದೀಯಾ?" ಎಂದ. ಇಷ್ಟಕ್ಕೂ ಆ ದೊನ್ನೆಗಳಲ್ಲಿ ಒಂದು ಸಣ್ಣ ಹೂವಿನ ಹಾರ, ಎರಡು ಸಣ್ಣ ಚೂರುಗಳಂತಹ ಸಿಹಿ ತಿಂಡಿಗಳಿದ್ದವು. ನನಗೆ ಪಿತ್ತ ನೇರವಾಗಿ ನೆತ್ತಿಗೆ ಏರಿತು.

ಈಗ ನಾವು ಹಿಂದಕ್ಕೆ ಹೋಗಬೇಕೋ ಅಥವಾ ಅವನು ಹೇಳಿದಷ್ಟು ರೂಪಾಯಿಗಳನ್ನು ಕೊಟ್ಟು ಮುಂದಕ್ಕೆ ಹೋಗಬೇಕೋ ಸ್ವಲ್ಪ ಗೊಂದಲವಾಯಿತು. ಸುಶೀಲ ಏನೂ ಮಾತನಾಡಲಿಲ್ಲ. ಅಷ್ಟು ದೂರದಿಂದ ಪವಿತ್ರ ಕಾಶಿವಿಶ್ವನಾಥನ ಬಾಗಿಲವರೆಗೂ ಬಂದು ಒಳಕ್ಕೆ ಹೋಗದೆ ಹಿಂದಕ್ಕೆ ಬಂದಿದ್ದರೆ ನನ್ನ ಜೀವನದಲ್ಲಿ ದಾಖಲೆಯಾಗುತ್ತಿತ್ತೋ ಏನೋ, 24 ರೂಪಾಯಿಗಳನ್ನು ಅವನಿಗೆ ಕೊಟ್ಟು ಒಂದೇ ಒಂದು ದೊನ್ನೆಯನ್ನು ತೆಗೆದುಕೊಂಡು ಒಳಕ್ಕೆ ನಡೆದೆವು.

ಮುಖ್ಯ ಬಾಗಿಲು ಶಿಥಿಲಗೊಂಡು ಯಾವುದೋ ಒಂದು ಹಳೆಯ ಕಾಲದ ಐಶ್ವರ್ಯವಂತರ ಮನೆ ಬಾಗಿಲಂತೆ ಹರಕುಮುರುಕಾಗಿದೆ. ಮಧ್ಯೆದಲ್ಲಿ ಸ್ವಲ್ಪ ಚೆನ್ನಾಗಿರುವ ಒಂದು ಗುಡಿ, ಸುತ್ತಲೂ ಅಲ್ಲೊಂದು ಇಲ್ಲೊಂದು ವಿಗ್ರಹಗಳು. ಕೆಲವು ವಿಗ್ರಹಗಳಿಗೆ ಮೇಲೆ ತೆರೆ ಇದ್ದರೆ, ಕೆಲವು ವಿಗ್ರಹಗಳಿಗೆ ತೆರೆದ ಆಕಾಶವೇ ಚಪ್ಪರ. ಕಾಶಿಯ ಈ ಗುಡಿಗಳಿಗೆ ಈ ರೀತಿಯ ವಿಪತ್ತು ಒದಗಿ ಬಂದಿದ್ದು ಮುಸ್ಲಮಾನರ ಕೃತ್ಯಗಳಿಂದ ಎನ್ನುತ್ತಾರೆ. ಪೂರ್ತಿ ಗುಡಿಯ ಆವರಣದಲ್ಲಿ ಕೇವಲ ಒಂದತ್ತು ಜನ ಮಾತ್ರ ಇದ್ದು, ಪೂಜಾರಿಗಳು ಮಾತ್ರ ಒಂದೊಂದು ವಿಗ್ರಹದ ಮುಂದೆಯೂ ಒಬ್ಬೊಬ್ಬರು ನಿಂತು, ಇಲ್ಲಿ ಬನ್ನಿ, ಇಲ್ಲಿ ಬನ್ನಿ ಎಂದು ಒಂದೇ ಸಮನೆ ಗಂಟಲು ಒಡೆದ ಹೋಗುವಂತೆ ಕೂಗುತ್ತಿದ್ದಾರೆ. ನನಗೆ ಕೆಜಿಎಫ್‌ನ ಮಾಂಸದ ಅಂಗಡಿಗಳು ಜ್ಞಾಪಕಕ್ಕೆ ಬಂದು ಬಿಟ್ಟಿವು. ಏಕೆಂದರೆ ಮಾಂಸದ ಅಂಗಡಿಗಳವರು ಹಾಗೆಯೇ ಕೂಗಿಕೊಳ್ಳುವುದು.

ಮುದುಕ ನಮ್ಮನ್ನು ಮುಂದಕ್ಕೆ ಬಿಟ್ಟು ಹಿಂದೆಯೇ ಬರುತ್ತಿದ್ದಾನೆ. ಮೊದಲು ಖಾಲಿ ಇದ್ದ ಒಂದು ವಿಗ್ರಹದ ಹತ್ತಿರ ಹೋದೆವು. ಅಲ್ಲಿದ್ದ ಪಂಡಿತ ಒಂದು ಮಂತ್ರ ಹೇಳಿ ಕಾಣಿಕೆ ಕೊಡುವಂತೆ ಕೇಳಿದ. ಐದು ರೂಪಾಯಿ ಇಟ್ಟೆ. ಇಟ್ಟ ತಕ್ಷಣ ಮುಂದೆ ಕಳುಹಿಸಿ ಬೇರೆ ಗಿರಾಕಿಗಳಿಗೆ ಕಾಯತೊಡಡ. ಅಲ್ಲಿಂದ ಇನ್ನೊಂದು ವಿಗ್ರಹದ ಹತ್ತಿರ ಹೋದೆವು. ಅಲ್ಲಿಯೂ ಅದೇ ರೀತಿಯಾಗಿ ಐದು ರೂಪಾಯಿ ಕೊಟ್ಟೆ. ಮತ್ತೊಂದು ವಿಗ್ರಹದ ಹತ್ತಿರ ಹೋದೆವು. ಅಲ್ಲಿನ ಪೂಜಾರಿ ಮೂವರನ್ನು ಗರ್ಭಗುಡಿಯ ಒಳಕ್ಕೆ ಕರೆದುಕೊಂಡು ಹೋಗಿ ಮಂತ್ರ ಹೇಳುತ್ತಾ ಹೇಳುತ್ತಾ ಕೊನೆಯಲ್ಲಿ,

"ಪಾಂಚ್ ರೂಪಾಯಿ ಇದರ ರಕಿಯೆ" ಎಂದು ಸ್ಥಳವನ್ನೂ ತೋರಿಸಿಕೊಟ್ಟ. ಪಾಂಚ್ ರೂಪಾಯಿ ಪಂಡಿತ್ ತೋರಿಸಿದ ಸ್ಥಳದಲ್ಲಿಟ್ಟೆ.

ಈಗ ನನ್ನಲ್ಲಿದ್ದ ಪಾಂಚ್ ರೂಪಾಯಿ ನೋಟುಗಳೆಲ್ಲ ಮುಗಿದು ಹೋಗಿ ಒಂದೇ ಒಂದು ಪಾಂಚ್ ರೂಪಾಯಿ ಮಾತ್ರ ಉಳಿದುಕೊಂಡಿತ್ತು. ಅದಕ್ಕಿನ್ನು ಕೆಳಗಿನ ಡಿನಾಮಿನೇಷನ್ ನನ್ನಲ್ಲಿರಲಿಲ್ಲ. ಇದೆಲ್ಲಾ ನನಗೆ ಮೊದಲೇ ಗೊತ್ತಿದ್ದರೆ ಚಿಲ್ಲರೆ ಮಾಡಿಕೊಂಡು ಬರಬಹುದಿತ್ತು.

ಇನ್ನೊಂದು ಕಡೆ ಆರತಿ ತೆಗೆದುಕೊಂಡು ತಟ್ಟೆಯಲ್ಲಿ ಹಣ ಹಾಕದೆ ಹಿಂದಕ್ಕೆ ಬಂದು ಬಾಗಿಲಲ್ಲಿದ್ದ ಹುಂಡಿಯಲ್ಲಿ ಪಾಂಚ್ ರೂಪಾಯಿ ನೋಟನ್ನು ಹಾಕಲು ಹೋದೆ. ಹಿಂದೆಯೇ ಓಡಿ ಬಂದ ಪೂಜಾರಿ,

"ಅಲ್ಲಿ ಹಾಕಬೇಡಿ, ನನ್ನ ತಟ್ಟೆಯಲ್ಲಿ ಹಾಕಿ" ಎಂದ.

"ಹಾಗಾದರೆ ಹುಂಡಿಯನ್ನು ಏಕೆ ಇಟ್ಟಿದ್ದಾರೆ ?"

"ಅದು ಯಾಕಾದರೂ ಇಟ್ಟಿರಲಿ, ನಮ್ಮ ಹೊಟ್ಟೆ ಮೇಲೆ ಹೊಡೆಯಬೇಡಿ" ಎಂದು ಅಂಗಲಾಚಿದೆ. ಅವನ ಕೈಯಲ್ಲಿ ಉಳಿದಿದ್ದ ಪಾಂಚ್ ರೂಪಾಯಿಗಳನ್ನಿಟ್ಟು ಕೊನೆಯದಾಗಿ ಕಾಶಿವಿಶ್ವನಾಥನ ಲಿಂಗವಿರುವ ಕಡೆಗೆ ಬಂದೆವು.

ಲಿಂಗದ ಮುಂದೆ ಕುಳಿತಿರುವ ಪೂಜಾರಿ ಯಾವುದೋ ಮಂತ್ರವನ್ನು ಪಠಿಸುತ್ತಾ ಇದ್ದ. ಆ ಕಲ್ಲಿನ ಲಿಂಗ ಎಷ್ಟು ಜನಗಳ ಕೈಗಳನ್ನು ಸೋಕಿಸಿಕೊಂಡಿತ್ತೋ ಏನೋ.. ಪೂರ್ತಿ ಸವೆದು ಹೋಗಿ ಚಪ್ಪಟೆಯಾಗಿ ರುಬ್ಬುಕಲ್ಲಿನಂತೆ ಕಾಣಿಸುತ್ತಿದೆ. ಆ ಲಿಂಗ ಒಂದು ಸಣ್ಣ 3x3 ಅಡಿಗಳ ಕೊಳದ ಮಧ್ಯದಲ್ಲಿದ್ದು, ಅರ್ಧಲಿಂಗ ತೀರ್ಥದ ಒಳಗೆ ಮುಳುಗಿದ್ದರೆ, ಇನ್ನರ್ಧ ಲಿಂಗ ಮೇಲೆ ಕಾಣಿಸುತ್ತಿದೆ.

ಕೈಯಲ್ಲಿದ್ದ ದೊಪ್ಪೆಯನ್ನು ಅದುವರೆಗೂ ನಾನು ಯಾರಿಗೂ ಕೊಟ್ಟಿರಲಿಲ್ಲ ಯಾವ ಪಂಡಿತನೂ ಕೇಳಿರಲಿಲ್ಲ. ಅದನ್ನು ಕೈಗೆ ತೆಗೆದುಕೊಂಡ ಪೂಜಾರಿ ದೊಪ್ಪೆಯಲ್ಲಿದ್ದ ಸಿಹಿ ತಿಂಡಿಗಳನ್ನು ಮುಟ್ಟಿ ಹಿಂದಕ್ಕೆ ಕೊಡುತ್ತಾ ಸಣ್ಣ ಹೂಮಾಲೆಯನ್ನು ನನ್ನ ಕಂಕುಳಲ್ಲಿದ್ದ ಕ್ರಾಂತಿಯ ಕೊರಳಿಗೆ ಎಸೆದ. ಆ ಪೂಜಾರಿ ಮಾತ್ರ ಹಣದ ಬಗ್ಗೆ ಚಕಾರವೆತ್ತಲಿಲ್ಲ. ಆದರೂ ನನಗೆ ಅಲ್ಲಿ ಒಂದೈದು ರೂಪಾಯಿಗಳನ್ನು ಕಾಣಿಕೆಯಾಗಿ ನೀಡಲು ಮನಸ್ಸಾಗಿ, ಜೇಬಿನಲ್ಲಿ ನೋಡಿದೆ. ಐವತ್ತು ರೂಪಾಯಿಯ ನೋಟಿತ್ತು. ನನ್ನನ್ನೇ ನೋಡುತ್ತಿದ್ದ ಪಕ್ಕದ ವಿಗ್ರಹದ ಮುಂದಿದ್ದ ಪೂಜಾರಿ ಚಿಲ್ಲರೆ ಬೇಕೆ ಎನ್ನುತ್ತಾ ಒಳಕ್ಕೆ ಕರೆದು ಐವತ್ತು ರೂಪಾಯಿಗಳಿಗೆ ಚಿಲ್ಲರೆ ನೀಡಿದ. ಅಲ್ಲಿ ಐದು ರೂಪಾಯಿಗಳನ್ನು ನೀಡಿ ಹಿಂದಕ್ಕೆ ಬಂದೆವು. ಮುಖ್ಯಬಾಗಿಲಿನಿಂದ ಹೊರಕ್ಕೆ ಬಂದಿದ್ದೆ ಬೂಟುಗಳನ್ನು ಹಾಕಿಕೊಂಡು ಮುದುಕನ ಕಡೆಗೆ ನೋಡಿದೆ.

ಹತ್ತಿರದಲ್ಲೇ ಇನ್ನೊಂದು ಗುಡಿ ಇದೆ ಎಂದು ಹೇಳಿದ ಮುದುಕ ಮೆಟ್ಟಿಲುಗಳನ್ನು ಹತ್ತಿ ಇಳಿಸಿ ಸಂದುಗೊಂದಿಗಳಲ್ಲಿ ತಿರುಗಿಸಿ ಗಂಗಾನದಿಯ ದಡಕ್ಕೆ ಕರೆದುಕೊಂಡು ಹೋದ. ಬನಾರಸ್ ಜನರ ಕೃತ್ಯಗಳೆಲ್ಲ ಒಟ್ಟಾಗಿ ಸೇರಿ ಒಂದೇ ಸಮನೆ ಕಣ್ಣು ಮೂಗುಗಳನ್ನು ನಾಶಮಾಡತೊಡಗಿದವು.

ಪವಿತ್ರ ಗಂಗಾ ನದಿ ಈ ದೇಶದಲ್ಲಿ ಯಾಕಾದರೂ ಹರಿಯುತ್ತಿದೆಯೋ ಏನೋ ? ಅಷ್ಟರಲ್ಲಿ ಅಲ್ಲೇ ಕಟ್ಟಿ ಹಾಕಿದ್ದ ಎಮ್ಮೆಗಳ ಸಗಣಿಯನ್ನು ಮುಕ್ಕರಿಯಲ್ಲಿ ಹೊತ್ತು ತಂದ ಮಹಾ ತಾಯಿಯೊಬ್ಬಳು ಆ ಗಂಗಾಮಯಿಯ ಮಡಿಲಿಗೆ ತಪಕ್ಕನೆ ಎಸೆದಳು. ನನಗ್ಯಾಕೋ ಅಲ್ಲಿ ನಿಲ್ಲಲು ಆಗಲಿಲ್ಲ. ಬಹಳ ಆಸೆಯಿಂದ ಕಾಶಿಯನ್ನು ನೋಡಲು ಬಂದಿದ್ದ ಸುಶೀಲ,

"ಈ ದಿನವೇ ಲಖನೌಗೆ ಹೋಗಿಬಿಡೋಣ" ಎಂದಳು.

ಹಿಂದಕ್ಕೆ ಬರುತ್ತಿದ್ದ ದಾರಿಯಲ್ಲಿ ಇನ್ನೊಂದು ಗುಡಿಯನ್ನು ತೋರಿಸಿ.

"ಈ ಗುಡಿಗೆ ಹೋಗುವುದಿಲ್ಲವೆ?" ಎಂದ.

"ಯಾವ ಗುಡಿಯೂ ಬೇಡ, ನಮ್ಮನ್ನು ಎಲ್ಲಿಂದ ಕರೆದುಕೊಂಡು ಬಂದೆಯೋ, ಅಲ್ಲಿಗೆ ಕರೆದುಕೊಂಡು ಹೋಗಿ ಬಿಟ್ಟುಬಿಡು, ಅಷ್ಟು ಮಾಡಿದರೆ ಸಾಕು, ಪುಣ್ಯ ಬರುತ್ತದೆ ನಿನಗೆ" ಎಂದೆ.

"ಇಷ್ಟಕ್ಕೆ ಅಷ್ಟು ಪುಣ್ಯ ಬರುವುದಿದ್ದರೆ ನಾನ್ಯಾಕೆ ಇಲ್ಲಿ ಈ ರೀತಿಯ ಜೀವನ ನಡೆಸುತ್ತಿದ್ದೆ ಸ್ವಾಮಿ.. ಇವಂತಾ ಕುಡುಪು ಕೋಸಂಚೇಸೆ ಕಾಲಕ್ಷೇಪಾಲು" ಎಂದ.

ಮತ್ತೆ "ಧರ್ಮಾವರಂ, ಕಂಜೀವರಂ, ಬನಾರಸ್, ಮೈಸೂರು ಸಿಲ್ಕ್ ಸೀರೆಗಳು ಬೇಕೆ?" ಎಂದು ಮತ್ತೊಂದು ಪೀಠಿಕೆ ಹಾಕಿದ.

"ಯಾವುದೂ ಬೇಕಾಗಿಲ್ಲ ತಗೋ" ಎಂದು ಹೇಳಿ ಏಳು ರೂಪಾಯಿಗಳನ್ನು ಕೊಟ್ಟೆ. ಅಷ್ಟರಲ್ಲಿ ಸುಶೀಲ ಏನೋ ಜ್ಞಾಪಿಸಿಕೊಂಡು,

"ತೀರ್ಥದ ಗಿಂಡಿಗಳನ್ನು ಎಲ್ಲಿ ಮಾರುತ್ತಾರೆ?" ಕೇಳಿದಳು.

"ಅದೋ ಅಲ್ಲಿ ನೋಡಿ, ಒಂದು ದೊಡ್ಡ ಬಜಾರೇ ಇದೆ" ಕೈತೋರಿಸಿದ.

"ಹೌದು, ಆ ತೀರ್ಥವನ್ನು ಎಲ್ಲಿಂದ ತರುತ್ತಾರೆ?" ಕೇಳಿದೆ.

"ಇನ್ನೆಲ್ಲಿಂದ ತರುತ್ತಾರೆ ಸ್ವಾಮಿ, ನೀವು ನೋಡಲಿಲ್ಲವೆ ಅದೇ ನದಿಯಿಂದ" ಎಂದು ಹೇಳಿ ಅಲ್ಲಿಂದ ಜಾರಿಕೊಂಡ. ತೀರ್ಥದ ಬಜಾರಿಗೆ ಹೋಗಿ ಒಂದೂವರೆ ಡಜನ್ ಪವಿತ್ರ ತೀರ್ಥದ ಗಿಂಡಿಗಳನ್ನು, ಜೊತೆಗೆ ಕಪ್ಪು ದಾರಗಳನ್ನು ಕೊಂಡುಕೊಂಡು ಆ ರಾತ್ರಿ ಅಲ್ಲೇ ತಂಗಿದ್ದು ಬೆಳಿಗ್ಗೆಯೇ ಹೋಟೆಲ್ ಖಾಲಿ ಮಾಡಿ ಲಖನೌ ಸೇರಿಕೊಂಡೆವು.

ದೇವರು ಇದ್ದಾರೊ ಇಲ್ಲವೊ ನನಗೆ ಗೊತ್ತಿಲ್ಲ, ಆಕಸ್ಮಿಕವಾಗಿ ದೇವರೇನಾದರೂ ಇದ್ದರೆ ಖಂಡಿತ ಇಂತಹ ಗುಡಿಗಳಲ್ಲಿ ಇರಲಿಕ್ಕೆ ಸಾಧ್ಯವೆ ಇಲ್ಲ.

* * *

ಅಲೀಮಿಯನ ಕತೆಗಾಗಿ ನೀವು ಸುಮಾರು ಐದು ನಿಮಿಷಗಳಿಂದ ಕಾದಿರಬೇಕು. ನಾವು ಲಖನೌ ತಲುಪುತ್ತಿದ್ದಂತೆ ಅಲೀಮಿಯನ ಕೊನೆ ಅಧ್ಯಾಯ ಗೋರಾವಲ್‌ನಲ್ಲಿ ಪ್ರಾರಂಭವಾಗಿತ್ತು.

ಖಾನ್ ಜೊತೆ ಸೇಮಿಯಾದಿಂದ ಗೋರಾವಲ್‌ಗೆ ಬಂದ ಅಲೀಮಿಯ ತನ್ನ ಕತೆಯನ್ನು ಮುಂದುವರಿಸಿದ್ದ. ಇನ್ನೇನು ನಾಳೆ ಬೆಳಗ್ಗೆಯೇ ಲಖನೌ ಕಡೆಗೆ ಹೋಗಬೇಕಾಗಿದ್ದ

ಖಾನ್, ಅಲೀಮಿಯನನ್ನು ಕರೆದು ಬೆಳಿಗ್ಗೆ ಐದು ಗಂಟೆಗೆಲ್ಲ ಇಲ್ಲಿಂದ ಹೊರಟು ಬಿಡೋಣ ಎಂದು ಆಜ್ಞೆ ಮಾಡಿದರು.

ಇದಕ್ಕೆ ಮುಂಚಿತವಾಗಿಯೇ ನನ್ನನ್ನು ಬಲೆಗೆ ಕೆಡವಲು ನೋಡಿದ ಅಲೀಮಿಯ,

"ಸಾಬ್, ನೀವು ಈ ವಯಸ್ಸಿನಲ್ಲಿ ಕಾಶಿಗೆ ಏಕೆ ಹೋಗುತ್ತಿದ್ದಿರಿ? ನೀವು ಇಲ್ಲೇ ಇರಿ ನಾನು, ನೀವು ಜೀಪಿನಲ್ಲಿ ಲಖನೌಗೆ ಹೋಗೋಣ, ಖಾನ್ ಸಾಬರು ರೈಲಿನಲ್ಲಿ ಹೋಗಲಿ" ಎಂದು ತನ್ನ ಜಾಲವನ್ನು ನನ್ನ ಕಡೆಗೆ ಎಸೆದಿದ್ದ.

ನನಗೆ ಅಲೀಮಿಯನ ಉಪಾಯ ಅರ್ಥವಾಗಿದ್ದರ ಜೊತೆಗೆ ಕಾಶಿಯನ್ನು ನೋಡುವ ಹಂಬಲವಿದ್ದು,

"ಇಲ್ಲ ಅಲೀಮಿಯ, ನಾವು ಕಾಶಿ ನೋಡಬೇಕೆಂದು ತೀರ್ಮಾನಿಸಿ ಆಗಿದೆ" ಎಂದು ಹೇಳಿ ತಮಾಷೆ ನೋಡಲು ಅಡ್ಡಗೋಡೆಯ ಮೇಲೆ ಕುಳಿತಿದ್ದೆ. ರಾತ್ರಿಯೆ ಟ್ರೈಲರ್‌ನಲ್ಲಿ ಸಾಮಾನುಗಳನ್ನೆಲ್ಲ ತುಂಬಿ ಟಾರ್ಪಾಲನ್ನು ಮುಚ್ಚಿ ಹಗ್ಗಗಳಿಂದ ಕಟ್ಟಲಾಯಿತು. ಮಿಕ್ಕ ಸಾಮಾನುಗಳನ್ನು ನಸುಬೆಳಕಿನಲ್ಲಿಯೇ ಸಂಕಟನ ಸಹಾಯದಿಂದ ಜೀಪಿನಲ್ಲಿ ತುಂಬಿಸಿಕೊಂಡು ಖಾನ್ ಲಖನೌ ಕಡೆಗೆ ಪ್ರಯಾಣ ಮಾಡಿದರು. ಸಂಕಟ ಇಬ್ಬರಿಗೂ ವಿದಾಯ ಹೇಳಿ ತನ್ನ ಹಳ್ಳಿ ಜುಂಗೇಲ್ ಕಡೆಗೆ ಕಾಲು ನಡಿಗೆಯಲ್ಲಿ ಸೋನ್ ನದಿಯನ್ನು ಅಡ್ಡ ತುಳಿದುಕೊಂಡು ದಕ್ಷಿಣಕ್ಕೆ ನಡೆಯತೊಡಗಿದ.

ಸಂಕಟ ಒಮ್ಮೆ ಮಾತನಾಡುತ್ತಿದ್ದಾಗ ತಮ್ಮ ಹಳ್ಳಿಯಲ್ಲಿ ಯಾರಾದರೂ ಸತ್ತು ಹೋದರೆ ಮುಂದಿನ ಜನ್ಮದಲ್ಲಿ ಯಾವ ಪ್ರಾಣಿಯಾಗಿ ಹುಟ್ಟುತ್ತಾರೆ ಎಂದು ತಿಳಿದುಕೊಳ್ಳುತ್ತೇವೆ ಎಂದು ಹೇಳಿದ್ದ. ಅದು ಹೇಗೆ ಎಂದು ಉತ್ಸಾಹದಿಂದ ತಿಳಿದುಕೊಳ್ಳಲು ಕೇಳಿದ್ದೆ. ಸತ್ತುಹೋಗಿ ದಫನ್ ಮಾಡಿದ ರಾತ್ರಿ ಮನೆಯ ಮುಂದೆ ಸ್ವಲ್ಪ ಬೂದಿಯನ್ನು ಚೆಲ್ಲಿ ಮಂಕರಿ ಮುಚ್ಚುತ್ತಾರೆ. ಬೆಳಿಗ್ಗೆ ಎದ್ದು ನೋಡಿದಾಗ ಆ ಪ್ರಾಣಿಯ ಹೆಜ್ಜೆ ಗುರುತುಗಳು ಅಲ್ಲಿ ಮೂಡಿರುತ್ತವೆ ಎಂದು ಹೇಳಿದ್ದ.

ಬೂದಿಯನ್ನು ಎಲ್ಲಾದರೂ ಚೆಲ್ಲಿದಾಗ ಬೀಸುವ ಗಾಳಿಯಲ್ಲಿರುವ ತೇವಾಂಶದಿಂದ ಬೂದಿ ತನ್ನ ರೂಪವನ್ನು ಬದಲಿಸಿಕೊಳ್ಳುವುದು ಇನ್ನೂ ಸುಲಭ. ಪ್ರಾಣಿಗಳು ಒಂದೇ ಎರಡೇ..?

ನಸುಕಿನಲ್ಲೇ ಗೋರಾವಲ್‌ನಿಂದ ಹೊರಟ ಜೀಪು ಮೂರು ಕಿ.ಮೀಟರ್ ದೂರದ ಲಾಲ್‌ಗಂಜ್‌ನ ಅಡ್ಡ ದಾರಿಯಲ್ಲಿ ನಿಂತುಕೊಂಡಿತು.

"ಏಕೆ ಅಲೀಮಿಯ ನಿಂತುಕೊಂಡೆ?" ಖಾನ್ ಕೇಳಿದರು.

"ಸ್ವಲ್ಪ ಚಹ ಕುಡಿಯೋಣ ಸಾರ್. ನಿಮಗೂ ತಂದುಕೊಡಲೇ.. ?" ಅಲೀಮಿಯ ಕೇಳಿದ.

"ಚೆನ್ನಾಗಿ ಮಾಡುವಂತೆ ಹೇಳು" ಎಂದು ಹೇಳಿ ಜೀಪಿನ ಒಳಗಡೆಯೆ ಖಾನ್ ಕುಳಿತುಕೊಂಡರು. ಅಲೀಮಿಯ ಡಾಬಾ ಅಂಗಡಿಯ ಮುಂದೆ ಕುಡಿಯುತ್ತಿದ್ದರೆ ಖಾನ್ ಸಾಬರು ಜೀಪಿನ ಒಳಗೆ ಚಹ ಕುಡಿಯುತ್ತಿದ್ದಾರೆ. ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಜೀಪಿನ ಹಿಂದೆ ಸದ್ದಾಗಿ ಖಾನ್ ಸಾಬರು ಹಿಂದಕ್ಕೆ ತಿರುಗಿ ನೋಡುತ್ತಾರೆ, ಒಂದು ಕಪ್ಪಾದ ಹುಡುಗಿ ನಿಧಾನವಾಗಿ ಹತ್ತಿ ಒಳಗಡೆ ಕುಳಿತುಕೊಳ್ಳುತ್ತಿದ್ದಾಳೆ.

"ಏಯ್ ಯಾರು ನೀನು?" ಖಾನ್ ಗದರಿದರು. ಹುಡುಗಿ ತಲೆ ಬಗ್ಗಿಸಿಕೊಂಡು ಸುಮ್ಮನೆ ಕುಳಿತಿದ್ದಾಳೆ. ಅಲೀಮಿಯ ಕುಡಿದು ಬಂದಿದ್ದೆ ಇಗ್ನೀಶನ್ ಕೊಟ್ಟು, ಗಾಡಿಯನ್ನು ಸ್ಟಾರ್ಟ್ ಮಾಡಿದ.

"ಅಲೀಮಿಯ, ಸ್ವಲ್ಪ ಗಾಡಿ ನಿಲ್ಲಿಸು" ಎಂದಿದ್ದೆ ಕೆಳಕ್ಕೆ ಇಳಿದ ಖಾನ್ ಹುಡುಗಿಯನ್ನು ಕೆಳಕ್ಕೆ ಇಳಿಯುವಂತೆ ಗದರಿದರು. ಹುಡುಗಿ ಜಪ್ಪಯ್ಯ ಅನ್ನಲಿಲ್ಲ.

ಆಗ ಖಾನ್‌ಗೆ ಬುದ್ಧನಿಗೆ ಜ್ಞಾನೋದಯವಾದಂತೆ ಓ ಓಡಿಗೋ ಸಮಾಚಾರ ಎಂದು ಕೊಂಡರಂತೆ. ಏಕೆಂದರೆ ಆ ಹುಡುಗಿಯನ್ನು ಅವರು ಎಂದೂ ನೋಡಿರಲಿಲ್ಲ. ಅಷ್ಟರಲ್ಲಿ ಆ ಹುಡುಗಿಯ ತಂದೆ, ತಾಯಿ ಮತ್ತು ಅಣ್ಣಯ್ಯ ಎಲ್ಲರೂ ಹೊಲಗಳ ನಡುವಿನಿಂದ ಎದ್ದು ಬಿದ್ದು ಕಿರಿಚಿಕೊಳ್ಳುತ್ತಾ ಬರುತ್ತಿರುವುದನ್ನು ಕಂಡ ಖಾನ್ ಸಾಬರು ಪೂರ್ತಿ ಅರ್ಥ ಮಾಡಿಕೊಂಡು ಮತ್ತೊಮ್ಮೆ ಚಹ ಕುಡಿಯಲು ಎದುರಿಗಿದ್ದ ಡಾಬಾ ಅಂಗಡಿಯ ಕಡೆಗೆ ನಡೆದು ಚಹ ಹೀರುತ್ತಾ ಕುಳಿತುಕೊಂಡರಂತೆ. ಅಲೀಮಿಯ ಬರುವವರನ್ನು ನೋಡಿದ್ದೆ ದೂರ ಸರಿದು ನಿಂತುಕೊಂಡ. ಆ ಹುಡುಗಿಯ ತಂದೆ ಹುಡುಗಿಯನ್ನು ಗಾಡಿಯಿಂದ ಕೆಳಕ್ಕೆ ಇಳಿಸಿ ಚೆನ್ನಾಗಿ ತದಿಕಿ ಎಳೆದುಕೊಂಡು ಹೋದರಂತೆ. ದೂರದಲ್ಲಿ ನಿಂತ ಅಲೀಮಿಯ ಏನು ಯೋಚಿಸುತ್ತಿದ್ದನೋ ಏನೋ.. ? ನಾನಂತೂ ಆ ದೃಶ್ಯ ನೋಡಲು ಅಲ್ಲಿರಲಿಲ್ಲ. ಅಲೀಮಿಯ ಕೊನೆಗೂ ದಮಯಂತಿಯನ್ನು ಬಿಟ್ಟು ನಳನಂತೆ ಒಬ್ಬನೇ ಲಖನೌಗೆ ಬರಬೇಕಾಯಿತು. ಅಲೀಮಿಯನ ಈ ಸಾಹಸ ಗಾಥೆ ಖಾನ್ ಮುಖಾಂತರ ತಿಳಿದಿತ್ತು.

* * *

## ಭಾಗ - 3

## 13 ನಾಗಾ ರಾಜ್ಯದ ಕಡೆಗೆ

1988ರ ಮೇ ತಿಂಗಳು ಮೂರನೇ ವಾರ ನನ್ನ ಹೆಸರಿಗೆ ಕಲ್ಕತ್ತಾದಿಂದ ಒಂದು ಲಕೋಟೆ ಬಂದಿತ್ತು. ತೆರೆದು ನೋಡುತ್ತೇನೆ. ಲಖನೌದಿಂದ ದಿಮಾಪುರಕ್ಕೆ (ನಾಗಾಲ್ಯಾಂಡ್) ವರ್ಗವಾಗಿದೆ. ಉತ್ತರ ಪೂರ್ವದ ರಾಜ್ಯಗಳಿಗೂ ಬೇರೆ ರಾಜ್ಯಗಳಿಗೂ ಹಲವು ರೀತಿಯ ವ್ಯತ್ಯಾಸಗಳಿವೆ. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹಲವು ವ್ಯತ್ಯಾಸಗಳಿರುವ ರಾಜ್ಯಗಳು ಅವು. ಈ ವರ್ಗಾವಣೆ ನನಗೇನು ಆಶ್ಚರ್ಯ ಮೂಡಿಸಲಿಲ್ಲ. ಏಕೆಂದರೆ ಉತ್ತರ ಪೂರ್ವದ ರಾಜ್ಯಗಳಿಗೆ ವರ್ಗಾಯಿಸುವಂತೆ ನಾನೇ ಕೇಳಿಕೊಂಡಿದ್ದೆ. ಬೇರೆ ಬೇರೆ ರಾಜ್ಯಗಳನ್ನು ನೋಡುವ ಉತ್ಸಾಹದ ಜೊತೆಗೆ ಉತ್ತರ ಪೂರ್ವಕ್ಕೆ ಹೋದರೆ ಇನ್ನೊಂದು ಅನುಕೂಲತೆ ಕೂಡ ಇತ್ತು. ಕೇಂದ್ರ ಸರ್ಕಾರದ ನೌಕರರು ಎರಡೋ ಮೂರೋ ವರ್ಷಗಳು ಆ ರಾಜ್ಯಗಳಲ್ಲಿ ನೌಕರಿ ಮಾಡಿದ್ದೆಯಾದರೆ ಅವರು ಕೇಳಿದ ಕಡೆಗೆ ವರ್ಗ ನೀಡಬೇಕೆಂಬ ನಿಯಮವಿದೆ. ಆದುದರಿಂದ ಬೇಗನೆ ಬೆಂಗಳೂರಿಗೆ ಬರುವ ತವಕದಿಂದ ನಾನು ಈ ರೀತಿಯ ಉಪಾಯ ಮಾಡಿದ್ದೆ.

ಲಖನೌದಲ್ಲಿ ಎಲ್ಲಾ ಕೆಲಸಗಳನ್ನೂ ಮುಗಿಸಿಕೊಂಡು ನಾಗಾಲ್ಯಾಂಡಿನ ಕಡೆಗೆ ಪ್ರಯಾಣ ಮಾಡಲು ತಯಾರಿ ಮಾಡಿಕೊಂಡೆವು. ಆಗಸ್ಟ್ ಒಂದರಂದು ಕಛೇರಿಯಲ್ಲಿ ಒಂದು ಪುಟ್ಟ ಸಮಾರಂಭ ಏರ್ಪಡಿಸಲಾಗಿತ್ತು. ಕೊನೆಯ ಅವಕಾಶವೆಂಬಂತೆ ಹಿಂದಿಯಲ್ಲೇ ಒಂದು ಭಾಷಣ ಬಿಗಿದು ಚಪ್ಪಾಳೆ ಗಿಟ್ಟಿಸಿಕೊಂಡೆ. ನಮ್ಮ ನಿರ್ದೇಶಕರೂ ಕೂಡ ಬೆನ್ನು ತಟ್ಟಿ "ಶಬಾಷ್" ಎಂದರು.

ಆಗಸ್ಟ್ ಎರಡನೇ ತಾರೀಖು ಮಧ್ಯಾಹ್ನ ನಾಲ್ಕು ಗಂಟೆಗೆ ದೆಹಲಿಯಿಂದ ಲಖನೌ ಮುಖಾಂತರ ಗೌಹಾಟಿಗೆ ಹೋಗುವ ಅಸ್ಸಾಂ -ಅವಧ್ ಎಕ್ಸ್‌ಪ್ರೆಸ್‌ಗಾಗಿ ರೈಲ್ವೇ ನಿಲ್ದಾಣದಲ್ಲಿ ಕಾಯುತ್ತಿದ್ದೇವೆ. ಹಲವು ಸಹೋದ್ಯೋಗಿಗಳು ನಮ್ಮನ್ನು ಬೀಳ್ಕೊಡಲು ನಿಲ್ದಾಣಕ್ಕೆ ಬಂದಿದ್ದಾರೆ. ಕ್ರಾಂತಿ ಒಂದು ಪುಟ್ಟ ರೈಲಿನ ಜೊತೆ ಆಡಿಕೊಳ್ಳುತ್ತಿದ್ದಾನೆ. ಇನ್ನೇನು ರೈಲು ಬರುವ ಸಮಯ, ಎಲ್ಲರೂ ಕೈಕುಲಿಕಿ ವಿಧಾಯ ಹೇಳಿದರು. ರೈಲು ಬಂದೇ ಬಿಟ್ಟಿತು. ನಂಬಿಯಾರ್, ಶತ್ರಜಿತ್ ನಾಗ್, ರಾವತ್, ಘನಶ್ಯಾಂಸಿಂಗ್ ಅವರು ಸಾಮಾನುಗಳನ್ನೆಲ್ಲಾ ಒಳಕ್ಕಿಡಲು ಸಹಾಯ ಮಾಡಿದರು. ರೈಲು ಮತ್ತೆ ಚಲಿಸಿ, ಎಲ್ಲರಿಗೂ ಕೈಬೀಸಿ ವಿಧಾಯ ಹೇಳಿದೆವು.

ಲಖನೌದಿಂದ ದಿಮಾಪುರಕ್ಕೆ ಕಳೆದ ವರ್ಷ ವರ್ಗವಾಗಿ ಹೋಗಿದ್ದ ಚಂದ್ರಮಾಧವ್ ಅವರಿಗೆ ಪತ್ರ ಬರೆದು ಬಾಡಿಗೆ ಮನೆಯನ್ನು ನೋಡುವಂತೆ ತಿಳಿಸಿದ್ದೆ. ಅವರು ಒಂದೇ

ವಾರದಲ್ಲಿ ಬಾಡಿಗೆ ಮನೆ ನೋಡಿದ್ದೇನೆ ಯಾವ ರೀತಿಯ ತೊಂದರೆಯೂ ಇರುವುದಿಲ್ಲ, ಸಾಧ್ಯವಾದರೆ ನೇರವಾಗಿ ಫ್ಯಾಮಿಲಿ ಸಮೇತ ಬಂದು ಬಿಡು ಎಂದು ಪತ್ರ ಬರೆದಿದ್ದರು.

ಲಖನೌ, ಗೋರಖ್‌ಪುರ್, ಛಟ್ನಿ, ಪಟ್ನಾ, ಕಟಿಹಾರ್ ಮತ್ತು ಸಿಲುಗುರಿ ಮುಖಾಂತರ ಗೌಹಾಟಿ ತಲುಪಬೇಕಿದ್ದ ರೈಲು ಪಶ್ಚಿಮ ಬಂಗಾಳದ ಸಿಲುಗುರಿ ದಾಟಿ ಬೆಳಗಿನ ಜಾವ ಅಸ್ಸಾಂ ತಪ್ಪಲುಗಳ ಮಧ್ಯೆ ಆಹ್ಲಾದಕರವಾಗಿ ಚಲಿಸುತ್ತಿದೆ. ಆಗಸ್ಟ್ ತಿಂಗಳಲ್ಲೂ ಉಲ್ಲಾಸ ಬರಿಸುವ ತಂಗಾಳಿ ಬೀಸುತ್ತಿದೆ. ಎಲ್ಲಿ ನೋಡಿದರೂ ಹಸಿರು ತಪ್ಪಲುಗಳು, ಗದ್ದೆ ತೋಟಗಳು, ಅಡಿಕೆ, ತೆಂಗೂ, ಬಿದಿರು ಮೆಳಲುಗಳು ಮಧ್ಯೆ ಮಧ್ಯೆ ಹಾರಾಡುತ್ತಿರುವ ಪಕ್ಷಿಗಳು.

ನೀರು. ನೀರು ಎಂದು ಹಾಹಾಕಾರ ಮಾಡುವ ನಗರದ ಜನರಿಗೆ ಕೂಗಿ ಹೇಳುವಷ್ಟು ನೀರಿನ ಝರಿಗಳು ಎಲ್ಲೆಲ್ಲೂ ಸ್ವತಂತ್ರವಾಗಿ ಹರಿದಾಡುತ್ತಿವೆ. ಯಾವುದೋ ಒಂದು ಹೊಸ ದೇಶಕ್ಕೆ ಬಂದಂತೆ ಭಾಸವಾದ ನಾನು ಕಿಟಕಿಯನ್ನು ಅಗಲವಾಗಿ ತೆಗೆದಿದ್ದೆ ಕಣ್ಣುಗಳನ್ನು ಉಜ್ಜಿಕೊಂಡು ಆಶ್ಚರ್ಯಚಕಿತವಾಗಿ ನೋಡುತ್ತಾ ಕುಳಿತು ಬಿಟ್ಟೆ. ಸಮಯ ಇನ್ನೂ ನಾಲ್ಕು ಮೂಕ್ಕಾಲು ಗಂಟೆ, ಬೆಳಗಿನ ಜಾವ.

ಸುಂದರವಾದ ಕಾಮನಬಿಲ್ಲೋ, ಬಣ್ಣ ಬಣ್ಣದ ಚಿಟ್ಟೆಗಳನ್ನೋ ನೋಡಿದ ಮಕ್ಕಳು ಪುಳಕಗೊಂಡು ತಮ್ಮ ಗೆಳೆಯರಲ್ಲಿ ಹೇಗೆ ಸಂತೋಷವನ್ನು ಹಂಚಿಕೊಳ್ಳುತ್ತಾರೋ ಹಾಗೆ ಹಂಚಿಕೊಳ್ಳಬೇಕೆನಿಸಿತು. ಆದರೆ ಎಲ್ಲರೂ ನಿದ್ದೆಯ ವಶವಾಗಿಬಿಟ್ಟಿದ್ದಾರೆ. ಸುಶೀಲಳನ್ನು ಎಬ್ಬಿಸಿ ನೋಡಿದೆ, ಹ್ಞು ಹ್ಞು ಏಳಲಿಲ್ಲ. ನಾನು ಒಬ್ಬನೇ ನೋಡುತ್ತಾ ಕುಳಿತೆ. ಸ್ವಲ್ಪ ಸಮಯದ ನಂತರ ಸುಶೀಲ, ಕ್ರಾಂತಿ ಕೂಡ ಕುಳಿತು ಹೊರಕ್ಕೆ ನೋಡುತ್ತಿದ್ದಾರೆ. ಸಮಯ ಹತ್ತಾಯಿತು, ಹನ್ನೊಂದಾಯಿತು, ಗೌಹಾಟಿ ಬರಲೇ ಇಲ್ಲ. ಇದ್ದಬದ್ದ ಬಿಸ್ಕತ್ತು, ಹಣ್ಣುಗಳು ಮುಗಿದು ಹೋಗಿ ಹೊಟ್ಟೆ ಚುರುಗುಟ್ಟುತ್ತಿದೆ. ರೈಲಿನಲ್ಲಾಗಲಿ, ಸಣ್ಣಪುಟ್ಟ ನಿಲ್ದಾಣಗಳಲ್ಲಾಗಲಿ ತಿನ್ನಲು ಏನೂ ಸಿಗುತ್ತಿಲ್ಲ.

ರೈಲು ನಿಧಾನವಾಗಿ ಒಂದು ಉದ್ದವಾದ ಉಕ್ಕು ಸೇತುವೆಯ ಮೇಲೆ ಎಚ್ಚರವಾಗಿ ದಡ್...ದಡ್...ದಡ್ ಎಂದು ಸದ್ದು ಮಾಡುತ್ತಾ ಸಾಗುತ್ತಿದೆ. ಗಂಡು ನದಿ ಎಂದೇ ಹೆಸರು ಪಡೆದಿರುವ ಬ್ರಹ್ಮಪುತ್ರಾ ನದಿ ವಿಶಾಲವಾಗಿ ಆಳವಾಗಿ ಗಾಂಭೀರ್ಯದಿಂದ ಸೇತುವೆ ಕೆಳಗೆ ಹರಿಯುತ್ತಿದೆ. ನದಿಯನ್ನು ದಾಟಿದ ರೈಲು ಇನ್ನು ತನಗೇನೂ ತೊಂದರೆ ಇಲ್ಲ ಎನ್ನುವಂತೆ ನಲಿದಾಡುತ್ತಾ ಗೌಹಾಟಿ ನಗರದೊಳಕ್ಕೆ ಪಡ್ಡೆ ಹುಡುಗನಂತೆ ನುಗ್ಗಿ ರೈಲ್ವೇ ನಿಲ್ದಾಣದಲ್ಲಿ ಬೆವರನ್ನು ಒರಸಿಕೊಳ್ಳುತ್ತಾ ನಿಂತುಕೊಂಡಿತು. ಸಾಮಾನುಗಳನ್ನು ಕೆಳಕ್ಕೆ ಇಳಿಸಿಕೊಂಡು ಒಂದು ಕಡೆ ಇಟ್ಟುಕೊಂಡೆ.

"ದಿಮಾಪುರಕ್ಕೆ ಹೋಗುವ ರೈಲು ಎಷ್ಟು ಗಂಟೆಗಿದೆ ?" ಎಂದು ಹೊರೆಯಾಳುಗಳನ್ನು ಕೇಳಿದೆ.

"ರೆಡಿಯಾಗಿದೆ ಸಾರ್, ಇನ್ನರ್ಧ ಗಂಟೆಯಲ್ಲಿ ಹೊರಡುತ್ತದೆ" ಎಂದರು.

"ಅದನ್ನು ಬಿಟ್ಟರೆ?"

"ನಿಮಗೆ ಮತ್ತೆ ರಾತ್ರಿ ಎಂಟು ಗಂಟೆಗೆ"

ಹಾಗಾದರೆ ಇದೇ ರೈಲಿನಲ್ಲಿ ಹೋಗುವುದೇ ವಾಸಿಯೆಂದು ಹೊರೆಯಾಳುಗಳ ಸಹಾಯದಿಂದ ಹತ್ತೇ ನಿಮಿಷಗಳಲ್ಲಿ ಬೇರೆ ಪ್ಲಾಟ್‌ಫಾರಂನಲ್ಲಿದ್ದ ಗೌಹಾಟಿ ಶೀನ್ ಸುಖಿಯ ರೈಲಿನಲ್ಲಿ ಕುಳಿತು ಬಿಟ್ಟೆವು. ಎರಡು ತಟ್ಟೆ ಊಟ ರೈಲಿನ ಒಳಕ್ಕೆ ತರಿಸಿಕೊಂಡು ತಿಂದು, ಜೊತೆಗೆ ಇನ್ನಷ್ಟು ಹಣ್ಣು ಬಿಸ್ಕತ್ತುಗಳನ್ನು ತೆಗೆದಿಟ್ಟುಕೊಂಡೆವು. ರೈಲು ಹೊರಡಬೇಕಾಗಿರುವ ಸಮಯಕ್ಕಿಂತ ಒಂದು ಗಂಟೆ ತಡವಾಗಿ ಹೊರಟು ಜಟಕಾ ಗಾಡಿಯಂತೆ ಸಾಗುತ್ತಿದೆ. ರಾತ್ರಿ ಒಂಬತ್ತು ಗಂಟೆಗೆ ದಿಮಾಪುರ ತಲುಪಬೇಕಿದ್ದ ರೈಲು ಒಂಬತ್ತು ಗಂಟೆಯಾದರೂ ಇನ್ನೂ "ಲುಮ್‌ಡಿಂಗ್" ನಿಲ್ದಾಣವೇ ತಲುಪಲಿಲ್ಲ. ಸುಶೀಲ, ಕ್ರಾಂತಿ ಇನ್ನೆಷ್ಟು ದೂರ, ಇನ್ನೆಷ್ಟು ದೂರ ಎಂದು ಕೇಳುತ್ತಲೇ ಇದ್ದಾರೆ. ಪಕ್ಕದಲ್ಲಿದ್ದವರನ್ನು ಕೇಳಿದರೆ ಇನ್ನೂ ಬಹಳ ದೂರವಿದೆ ಎನ್ನುತ್ತಾರೆ. ಅದೇ ರೀತಿಯ ತಪ್ಪಲುಗಳು, ಅದೇ ರೀತಿಯ ಗದ್ದೆ ತೋಟಗಳು, ತಂಪಾದ ಗಾಳಿಯ ಜೊತೆಗೆ ಜೀರುಂಡೆಗಳ ಸದ್ದು, ಎಲ್ಲೋ ಕತ್ತಲು ತುಂಬಿರುವ ಕಾಡಿನ ಒಳಕ್ಕೆ ಹೋಗುವಂತಹ ಅನುಭವ.

ರಾತ್ರಿ ಹನ್ನೆರಡು ಗಂಟೆ. "ದೀಪು" ನೀಲ್ದಾಣ ಬಂದಿದ್ದು, ಸುಶೀಲಳನ್ನು ತಯಾರಾಗುವಂತೆ ಎಬ್ಬಿಸಿದೆ.

"ನಾನು ತಯಾರಾಗೇ ಇದ್ದೇನೆ" ಎಂದು ಹಾಗೇ ಬಿದ್ದು ಕೊಂಡಳು. ಎಲ್ಲಾ ಸಾಮಾನುಗಳು ಪ್ಯಾಕ್ ಮಾಡಿದ ಹಾಗೆ ಇವೆ. ಸುಶೀಲ, ಕ್ರಾಂತಿಯನ್ನು ಇಳಿಸಿಕೊಂಡರೆ ಸಾಕು, ಮಿಕ್ಕ ವಿಷಯಗಳನ್ನು ನಾನೇ ನಿಭಾಯಿಸಿಬಿಡುತ್ತೇನೆ ಎಂದುಕೊಂಡು. ಹಾಗೆ ಕುಳಿತಿದ್ದೇನೆ.

ರಾತ್ರಿ ಹನ್ನೆರಡೂವರೆ ಗಂಟೆಗೆ ದಿಮಾಪುರ ನಿಲ್ದಾಣ ಬಂದಿತ್ತು. ಒಂದೇ ಜನಸಂದಣಿ, ಸುಶೀಲ ಕ್ರಾಂತಿಯನ್ನು ನಡೆಸಿಕೊಂಡು ಬಂದು ಸೂಟ್‌ಕೇಸಿನ ಜೊತೆಗೆ ಕೆಳಕ್ಕೆ ಇಳಿದುಕೊಂಡಳು. ಜನ ಬಾಗಿಲಿಗೆ ಅಡ್ಡ ಗಟ್ಟಿನಿಂತಿದ್ದಾರೆ.

"ಇಲ್ಲೇನು ನಿಂತಿದ್ದೀರಿ, ಇದು ಮೊದಲನೇ ತರಗತಿ ಬೋಗಿ ಮುಂದಕ್ಕೆ ಹೋಗಿ" ನನ್ನ ಹಿಂದೆ ನಿಂತಿದ್ದ ಒಬ್ಬ ವ್ಯಕ್ತಿ ಗದರಿದ. ಸುಮಾರು ಜನ ಅಲ್ಲಿಂದ ಸ್ಥಳ ಖಾಲಿ ಮಾಡಿದರು. ಸಾಮಾನುಗಳನ್ನೆಲ್ಲಾ ನಿಧಾನವಾಗಿ ಇಳಿಸಿಕೊಂಡೆವು. ದಿಮಾಪುರ ತಲುಪಿದ್ದೇನೋ ಆಯಿತು. ಆದರೆ ರಾತ್ರಿ ಸಾಮಾನುಗಳನ್ನೆಲ್ಲಾ ಹಾಕಿಕೊಂಡು ಎಲ್ಲಿಗೆ ಹೋಗಬೇಕು? ಊಟ ಬೇರೆ ಮಾಡಿರಲಿಲ್ಲ. ಸಾಮಾನುಗಳನ್ನೆಲ್ಲಾ ಒಂದು ಕಡೆ ಇಟ್ಟು ಸುಶೀಲಳನ್ನು ಅಲ್ಲೇ ಕೂರಿಸಿ ನಿಲ್ದಾಣವನ್ನೆಲ್ಲಾ ಒಂದು ಸುತ್ತಾಕಿದೆ. ಕಛೇರಿಯಿಂದ ಯಾರಾದರು ಬಂದಿರಬಹುದೆಂದು. ಯಾರೂ ಕಾಣಿಸಲಿಲ್ಲ. ನಮ್ಮಲ್ಲಿದ್ದ ಕೆಲವು ಸಾಮಾನುಗಳನ್ನು ಕ್ಲಾಕ್‌ರೂಮಿನಲ್ಲಿಟ್ಟು ಬೇರೆ ದಾರಿ ಕಾಣದೆ ಮೂವರು ನಿರೀಕ್ಷಕರ ಕೊಠಡಿಗೆ ಬಂದೆವು.

ಆ ಕೊಠಡಿಗೆ ಕಾವಲುಗಾರನೊಬ್ಬನಿದ್ದು, ಸ್ವಲ್ಪ ಸಮಾಧಾನದಿಂದ ಒಳಕ್ಕೆ ಹೋದೆವು. ಸುಮಾರು ಹದಿನೈದು ಜನ ವಿಚಿತ್ರ ರೀತಿಯಲ್ಲಿ ಕುಳಿತು, ಮಲಗಿ ಕೈಕಾಲುಗಳನ್ನು ಚೆಲ್ಲಿದ್ದಾರೆ. ಅವರಲ್ಲಿ ಹೆಂಗಸರೂ ಕೆಲವರಿದ್ದಾರೆ. ಮೊದಲನೇ ಮತ್ತು ಎರಡನೇ ದರ್ಜೆಯ ಪ್ರಯಾಣಿಕರು, ಎಲ್ಲರಿಗೂ ಒಂದೇ ಕೊಠಡಿ. ಎದುರಿಗೆ ಅಸ್ಸಾಂ ರೈಫಲ್ಸ್ ಜವಾನರಿಬ್ಬರು ಕುಳಿತಿದ್ದಾರೆ.

ಖಾಲಿ ಇದ್ದ ಒಂದು ಮೂಲೆಯಲ್ಲಿ ಸ್ವಲ್ಪ ಜಾಗ ಮಾಡಿಕೊಂಡು ಹೋಲ್ಡಾಲ್ ಬಿಚ್ಚಿ ಇಬ್ಬರನ್ನೂ ಮಲಗಿಸಿದೆ. ಸುಶೀಲ ಮಲಗುವುದಕ್ಕಿಂತ ಮುಂಚೆ ಮಾಂಗಲ್ಯ ಸರವನ್ನು ಬಿಚ್ಚಿಕೊಟ್ಟು ಭದ್ರ ಎಂದು ಎಚ್ಚರಿಕೆ ನೀಡಿ ಮಲಗಿಕೊಂಡಳು. ನಾನು ಸ್ನಾನ ಗೃಹದ ಒಳಕ್ಕೆ ರಹಸ್ಯವಾಗಿ ಹೋಗಿ ಸರವನ್ನು ಪ್ಯಾಂಟಿನ ಬ್ಯಾಂಡ್ ಪಾಕೇಟ್ ಒಳಕ್ಕೆ ಹಾಕಿಕೊಂಡು ಹೊರಕ್ಕೆ ಬಂದು ಹೋಲ್ಡಾಲಿನ ಒಂದು ಮೂಲೆಯಲ್ಲಿ ಕುಳಿತು ಜಾಗರಣೆ ಪ್ರಾರಂಭಮಾಡಿದೆ.

ಒಂದು ರೀತಿಯಲ್ಲಿ ಉಸಿರುಕಟ್ಟಿದಂತಹ ವಾತಾವರಣ, ಯಾವಾಗ ಬೆಳಗಾಗುವುದೊ ಎಂದು ಕಾಯುತ್ತಾ ಕುಳಿತಿದ್ದೇನೆ. ವಿದ್ಯುತ್ ದೀಪ ಉರಿಯುತ್ತಲೇ ಇದೆ. ಪಕ್ಕದಲ್ಲೇ ಮಲಗಿದ್ದ ದಂಪತಿಗಳು ಬಹುಶಃ ಬಿಹಾರದವರಿರಬಹುದು, ಅವರ ಮಧ್ಯದಲ್ಲಿ ಒಬ್ಬ ಹುಡುಗನು, ಕೂಡ ಮಲಗಿದ್ದಾನೆ. ಯಾವುದೋ ಕೂಲಿ ಕೆಲಸ ಅರಿಸಿ ಬಂದಿರಬೇಕು ಅಥವಾ ಈಗಾಗಲೇ ಎಲ್ಲೋ ಕೂಲಿ ಕೆಲಸ ಮಾಡುತ್ತಿರಬಹುದು.

ಆ ಬಿಹಾರಿ ಸುತ್ತಿಕೊಂಡಿದ್ದ ದೇಶಿ ಪಂಚೆ ಪಕ್ಕಕ್ಕೆ ಹೋಗಿ ಪಟ್ಟಾಪಟ್ಟಿಯ ನಿಕ್ಕರ್ ಒಳಗಿಂದ ಮರ್ಮಾಂಗ ಪೂರ್ತಿ ಹೊರಕ್ಕೆ ಬಂದಿದೆ. ಸದ್ಯಕ್ಕೆ ಹೆಂಗಸರ್‍ಯಾರೂ ಇನ್ನೂ ಎದ್ದಿಲ್ಲ. ನನಗೆ ಏನು ಮಾಡಬೇಕೋ ಅರ್ಥವಾಗದೆ ಪಕ್ಕಕ್ಕೆ ತಿರುಗಿಕೊಂಡೆ. ಒಂದಿಬ್ಬರು ಗಂಡಸರು ಮತ್ತು ಅಸ್ಸಾಂ ರೈಫಲ್ಸ್‌ನ ಜವಾನ ನೋಡಿಯೂ ನೋಡದಂತೆ ಕುಳಿತಿದ್ದಾರೆ. ಸುಮಾರು

ಹೊತ್ತು ಬಿಹಾರಿ ಹಾಗೆ ಮಲಗಿದ್ದ. ನನ್ನಿಂದ ನೋಡಲಾಗದೆ ಕಾಲಿನಲ್ಲಿ ಒಮ್ಮೆ ಮೃದುವಾಗಿ ಒದ್ದೆ. ಏನೂ ಪ್ರಯೋಜನವಾಗಲಿಲ್ಲ. ಗಂಡ ಹೆಂಡತಿ ಇಬ್ಬರೂ ಆಳವಾದ ನಿದ್ದೆಯಲ್ಲಿದ್ದಾರೆ. ಒಂದಷ್ಟು ಜನ ಗಂಡಸರು ಆಗಲೇ ಸ್ನಾನಗೃಹದ ಒಳಕ್ಕೆ ಹೋಗಿ ತಮ್ಮ ದಿನ ನಿತ್ಯದ ಕಾರ್ಯಗಳನ್ನು ಮುಗಿಸಿ ಬರುತ್ತಿದ್ದಾರೆ. ಇನ್ನೇನು ಬೆಳಕು ಕೂಡ ಮೂಡುವುದರಲ್ಲಿದೆ.ಒಳಕ್ಕೆ ಹೋಗುತ್ತಿದ್ದವರಿಗೂ ಹೊರಕ್ಕೆ ಬರುತ್ತಿದ್ದವರಿಗೂ ಎಲ್ಲರಿಗೂ ದರ್ಶನ ನಡೆಯುತ್ತಲೇ ಇದೆ. ಕೊನೆಯದಾಗಿ ಒಬ್ಬ ದೃಢಕಾಯ ಮುದುಕ ಎದ್ದುಬಂದು ಸುತ್ತಲೂ ಒಮ್ಮೆ ನೋಡಿ, ಬೂಟುಕಾಲಿನಲ್ಲಿ ಜೋರಾಗಿ ಒದ್ದು,

"ಉಟ್ ಸಾಲಾ, ಆರಾಮಿ, ಓಗೇನಾ ನಿದ್ದೆ ಮಾಡೋದು" ಎಂದು ಗದರಿದರು. ಕಕ್ಕಾಬಿಕ್ಕಿಯಾದ ಆ ಬಿಹಾರಿ ಕಣ್ಣುಜ್ಜಿಕೊಂಡು ಎದ್ದು ಕುಳಿತ. ನಾನಂತೂ ನಗು ತಡೆಯಲಾರದೆ ಸ್ವಲ್ಪಹೊತ್ತು ಹೊರಕ್ಕೆ ಬಂದು ಸುಧಾರಿಸಿಕೊಂಡೆ.

ಬೆಳಕು ಮೂಡುತ್ತಿದ್ದಂತೆ ಸುಶೀಲಳನ್ನು ಎಬ್ಬಿಸಿದೆ. ಎದ್ದ ತಕ್ಷಣವೆ ಮಾಂಗಲ್ಯ ಕೊಡಿ ಎಂದು ಕೈ ನೀಡಿದಳು. ಪ್ಯಾಂಟ್ ಪಾಕೇಟ್ ಒಳಕ್ಕೆ ಬೆರಳುಗಳನ್ನು ಬಿಟ್ಟು ನೋಡುತ್ತೇನೆ. ಖಾಲಿ..? ಮೈ ಒಳಕ್ಕೆ ಒಮ್ಮೆಲೇ ಚಳಿ ಹೊಕ್ಕಂತಾಯಿತು. ಕೆಲವು ಕ್ಷಣಗಳು ನನ್ನಲ್ಲಿನ ವಿದ್ಯುತ್ ನಿಂತು ಹೋಯಿತು. ಮತ್ತೊಮ್ಮೆ ಎಲ್ಲಾ ಜೇಬುಗಳಲ್ಲೂ ಹುಡುಕಿ ನೋಡಿದೆ. ಇಲ್ಲ ಒಳ ಉಡುಪುಗಳನ್ನು ಸಡಿಲಿಸಿ ನೋಡಿದೆ, ಇಲ್ಲ. ಸ್ನಾನಗೃಹದ ಒಳಕ್ಕೆ ಹೋಗಿ ನೋಡಿದೆ ಇಲ್ಲ. ಅಷ್ಟರಲ್ಲಿ ಸುಶೀಲ ಅಳುವುದಕ್ಕೆ ಶುರು ಮಾಡಿಯೇ ಬಿಟ್ಟಳು.

ಏನು ? ಏನು ? ಎಂದು ಒಂದಿಬ್ಬರು ಕೇಳಿ, ವಿಷಯ ತಿಳಿಸಿದೆ. ಇನ್ನೇನು ಮಾಡಬೇಕು ಎಂದುಕೊಂಡು ಕುಳಿತಿದ್ದ ಹೋಲ್ಡಾಲ್ ಮತ್ತು ಅದರಲ್ಲಿದ್ದ ಬಟ್ಟೆಗಳನ್ನು ಹೊರಕ್ಕೆ ಹಾಕಿ ಹುಡುಕಿದೆ, ಸಿಗಲಿಲ್ಲ. ಕ್ರಾಂತಿಯನ್ನು ಎಬ್ಬಿಸಿ ಮಿಕ್ಕ ಬಟ್ಟೆಗಳನ್ನೆಲ್ಲ ಹೊರಕ್ಕೆ ಹಾಕಿದೆ. ಹೋಲ್ಡಾಲಿನ ತಳದಲ್ಲಿದೆ. ಅದು ಹೇಗೆ ಹೋಯಿತೋ ಅಲ್ಲಿಗೆ ? ಕೊನೆಗೂ ಸಿಕ್ಕಿತು. ಸುಶೀಲ ಅಬ್ಬ ಎಂದು ದೀರ್ಘ ಶ್ವಾಸವನ್ನು ಎಳೆದುಕೊಂಡು ಕೊರಳಿಗೆ ಹಾಕಿಕೊಂಡಳು.

ದಿಮಾಪುರದಲ್ಲಿ ಮೊದಲ ದಿನವೇ ನಮಗೆ ಗ್ರಹಚಾರ ಬಿಟ್ಟು ಹೋಗಿತ್ತು. ನಮ್ಮ ಕಛೇರಿ, ಸರ್ಕ್ಯುಲರ್ ರಸ್ತೆಯಲ್ಲಿದ್ದು ಆಟೋ ಚಾಲಕನನ್ನು ಆ ರಸ್ತೆಯಲ್ಲಿ ನಿಧಾನವಾಗಿ ಓಡಿಸುವಂತೆ ಹೇಳಿ ಸುಶೀಲ ಬಲಕ್ಕೆ, ನಾನು ಎಡಕ್ಕೆ ಬೋರ್ಡ್‌ಗಳನ್ನು ನೋಡುತ್ತಾ ಹೋದೆವು ಸುಮಾರು ದೂರ ಹೋದ ಮೇಲೆ

"Geological Survery of India, op Manipur and Nagaland. DIMAPUR" ಎಂಬ ದೊಡ್ಡ ಬೋರ್ಡ್ ಕಾಣಿಸಿಕೊಂಡಿತು. ಆಟೋದವನಿಗೆ ನಿಲ್ಲಿಸುವಂತೆ

ಹೇಳಿ ಕೆಳಗಿಳಿದು ಗೇಟಿನಲ್ಲಿ ಸದ್ದು ಮಾಡಿದೆ. ಪುಟ್ಟ ಕಣ್ಣುಗಳಿರುವ ಗೋಧಿ ಬಣ್ಣದ ನಾಗಾ ಯುವಕ,

"ಕ್ಯಾ ಸಾಬ್...?" ಎಂದ. ವಿಷಯ ತಿಳಿಸಿ

"ಚಂದ್ರ ಮಾಧವ್ ಮನೆ ತೋರಿಸು" ಎಂದೆ. ಆಟೋ ಚಂದ್ರ ಮಾಧವ್ ಮನೆ ಮುಂದೆ ನಿಂತಿತು. ಕೆಳಕ್ಕಿಳಿದು ಆಟೋದವನಿಗೆ ಹಣಕೊಟ್ಟೆ. ಜೊತೆಯಲ್ಲಿ ಬಂದಿದ್ದ ಯುವಕ

"ಸಾಬ್ ನಾನೂ ಆಟೋ ಜೊತೆಯಲ್ಲೇ ಹೋಗಿ ಬಿಡುತ್ತೇನೆ" ಎಂದು ಆಟೋದಲ್ಲಿ ಕುಳಿತುಕೊಂಡ. ಗೋಡೆಯ ಮೇಲಿದ್ದ ಕರೆಗಂಟೆಯನ್ನು ಒತ್ತಿದೆ.

"ಪಾಪಾ, ಅಂಕಲ್ ಔರ್ ಆಂಟಿ ಆಯಾ" ಎಂದುಕೊಂಡು ಮನೆಯೊಳಕ್ಕೆ ಓಡಿದಳು ಶಾಲು. ಶ್ರೀಮತಿ ಮಾಧವ್ ಹೊರಕ್ಕೆ ಇಣಿಕಿ ನೋಡಿದರು.

"ನಮಸ್ತೆ ಬಾಬಿ" ಕೈ ಜೋಡಿಸಿದೆ.

"ಓ ಆಯಿಯೆ, ಆಯಿಯೆ" ಎಂದು ಸಾಮಾನುಗಳನ್ನು ಸರಿ ಪಡಿಸುತ್ತಾ ಒಳಕ್ಕೆ ಬರಮಾಡಿಕೊಂಡರು.

"ಹರ್‌ಕೆ ಸುಸ್ವಾಗತ, ಬೋಲೋ ಜೈ ಕೈಸೆ ಹುವಾ ಸಫರ್" ಎಂದ ಚಂದ್ರಮಾಧವ್ ಕುರ್ಚಿ ತೋರಿಸಿದರು. ಸುಶೀಲ ಇಬ್ಬರಿಗೂ,

"ನಮಸ್ತೆ ಬಾಬಿ, ನಮಸ್ತೆ ಬಾಯಿಸಾಬ್" ಎಂದು ಪ್ರತ್ಯೇಕವಾಗಿ ಹೇಳಿದಳು. ಇಬ್ಬರೂ ನಗುತ್ತಾ

"ನಮಸ್ತೇ ಜೀ" ಎಂದರು.

"ತುಮಾರಾ ನಾಮ್ ಕ್ಯಾ ಹೈ, ಶಾಲೂ..." ಕ್ರಾಂತಿಯನ್ನು ಕೇಳಿದಳು.

"ಹಮಾರಾ ನಾಮ್ ಕ್ರಾಂತಿ" ಹೇಳಿದ. ಬಡಾ ಪ್ಯಾರಾ ನಾಮ್ ಹೈಬೈ ತುಮಾರಾ ಎಂದರು ಶ್ರೀಮತಿ ಮಾಧವ್. ಶಾಲೂ ಸುಮಾರು ನಾಲ್ಕು ವರ್ಷಗಳ ಏಕೈಕ ಪುತ್ರಿ. ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದ ಕ್ರಾಂತಿ ಮೆತ್ತಗೆ ಶಾಲೂ ಜೊತೆ ಸೇರಿಕೊಂಡ. ನೆನ್ನೆ ರಾತ್ರಿ ಮತ್ತು ಬೆಳಗ್ಗೆ ನಡೆದ ಘಟನೆಗಳನ್ನೆಲ್ಲ ಮಾಧವ್ ಅವರಿಗೆ ಹೇಳಿದೆ.

"ನೀವು ಗೌಹಾಟಿಯಿಂದ ರಾತ್ರಿ ಹೊರಡುವ ಮಣಿಪುರ-ನಾಗಾಲ್ಯಾಂಡ್ ರೈಲಿನಲ್ಲಿ ಬೆಳಗ್ಗೆ ಇಲ್ಲಿಗೆ ತಲುಪುತ್ತೀರ ಎಂದುಕೊಂಡೆವು" ಎಂದರು.

"ಅದು ಹೋಗಲಿ, ನೀವು ನಮಗೆ ನೋಡಿರುವ ಮನೆಯನ್ನು ತೋರಿಸಿಬಿಡಿ" ಎಂದೆ.

"ಮೊದಲು ಸ್ವಲ್ಪ ತಿಂಡಿ ತಿಂದು ವಿಶ್ರಾಂತಿ ತೆಗೆದುಕೋ, ಅಷ್ಟು ಅವಸರವೇನು ದಿಮಾಪುರಕ್ಕೆ ಬಂದಾಗಿದೆ" ಎಂದರು. ಪೂರಿ ಸಾಗು, ಚಹ ಮುಗಿದ ಮೇಲೆ ಹೊರಕ್ಕೆ ಬಂದೆವು. ಬಾಗಿಲಿಗೆ ಬಂದ ಮೇಲೆ,

"ಬಾಬಿ ನಾನು ಸಾಮಾನುಗಳನ್ನು ತರುವವರೆಗೂ ಸುಶೀಲ ಇಲ್ಲೇ ಇರುತ್ತಾಳೆ" ಎಂದೆ.

"ನೀವು ಹೋಗಿ ಬನ್ನಿ, ಆರಾಮವಾಗಿ ಇವೊತ್ತೆಲ್ಲಾ ಇಲ್ಲೇ ಇರಲಿ" ಎಂದರು.

ಮನೆ ನೋಡಿ ಸಾಮಾನುಗಳನ್ನು ತಂದಿರಿಸಿ, ಕಛೇರಿಯಲ್ಲಿ ಡ್ಯೂಟಿ ರಿಪೋರ್ಟ್ ಮಾಡಿಕೊಂಡೆ. ಎಲ್ಲವೂ ಸುಗಮವಾಗಿಯೇ ನಡೆದು ಹೋದವು.

***

## ಭೂಮಿ ಗುಡುಗಿದಾಗ

ದೀರ್ಘ ಪ್ರಯಾಣ ಮತ್ತು ಜಾಗರಣೆಗಳಿಂದ ಬೇಸತ್ತಿದ್ದ ನಾವು, ಆ ರಾತ್ರಿ ಚಂದ್ರಮಾಧವ್ ಅವರ ಮನೆಯಲ್ಲೇ ಊಟಮಾಡಿ ಬಂದು ಹೊಸ ಮನೆಯಲ್ಲಿ ಮಲಗಿಬಿಟ್ಟೆವು. ರಾತ್ರಿ ಬೇಗನೆ ಮಲಗಿದ್ದರಿಂದ ಬೆಳಿಗ್ಗೆ ಬೇಗನೆ ಎದ್ದ ಸುಶೀಲ ಮನೆ ಗುಡಿಸುತ್ತಿದ್ದಾಳೆ. ನಾನು ಲುಂಗಿ ಕಟ್ಟಿಕೊಂಡು ಹೊರ ಬಾಗಿಲಲ್ಲಿ ನಿಂತು, ಬರುವ ಹೋಗುವ ವಾಹನಗಳನ್ನು ನೋಡುತ್ತಿದ್ದೇನೆ. ಕ್ರಾಂತಿ ಮಂಚದ ಮೇಲೆ ಮಲಗಿದ್ದಾನೆ.

ಸಮಯ ಸರಿಯಾಗಿ ಆರು ಗಂಟೆ ಏಳು ನಿಮಿಷಗಳಾಗಿದೆ. ಸಣ್ಣದಾಗಿ ಶುರುವಾದ ಶಬ್ದ ಬರು ಬರುತ್ತಾ ಜೋರಾಯಿತು.

"ಕ್ರಾಂತಿ ವಿಮಾನ ನೋಡು ಬಾರೋ" ಎಂದು ಜೋರಾಗಿ ಕೂಗಿದೆ. ವಿಮಾನ ಹೋಗುವ ಸದ್ದಾದರೆ ಸಾಕು, ಕ್ರಾಂತಿ ನಿದ್ದೆ ಮಾಡುತ್ತಿದ್ದರೂ ಎದ್ದು ಓಡಿ ಬಂದು ಬಿಡುತ್ತಿದ್ದ.

ಕೆಲವೇ ಕ್ಷಣಗಳಲ್ಲಿ ಸದ್ದು ವಿಮಾನದ್ದಲ್ಲ ಎಂದು ತಿಳಿದು ಹೋಯಿತು. ಹತ್ತಾರು ವಿಮಾನಗಳು ಒಮ್ಮೆಲೇ ಹಾರಿ ಬಂದಂತಹ ಸದ್ದು. ಕಿವಿಗಳು ಒಡೆದುಹೋಗುವಂತಹ ಭಯಂಕರ ಶಬ್ದ. ಒಳಕ್ಕೆ ಓಡುತ್ತಾ ಸುಶೀಲಳನ್ನು "ಹೊರಕ್ಕೆ ಓಡು ಓಡು" ಎನ್ನುತ್ತಾ ಕ್ರಾಂತಿಯನ್ನು ಎತ್ತಿ ಭುಜದ ಮೇಲೆ ಹಾಕಿಕೊಂಡು ಎರಡೂ ಗೋಡೆಗಳ ಮಧ್ಯದಿಂದ ಇನ್ನೇನು ಹೊರಬಾಗಿಲನ್ನು ದಾಟಬೇಕಿತ್ತು.

ಭೂಕಂಪನದಿಂದ ಬಾಗಿಲು ಸುಮಾರು 35 ಡಿಗ್ರಿಗಳವರೆಗೂ ಉಯ್ಯಾಲೆಯಂತೆ ಆಡತೊಡಗಿತು. ಒಂದು ಕೈಯಲ್ಲಿ ಕ್ರಾಂತಿಯನ್ನು ಇನ್ನೊಂದು ಕೈಯಿಂದ ಗೋಡೆಯನ್ನು ಹಿಡಿದುಕೊಂಡು ಓಡಲಾಗದೆ ಹಾಗೆ ನಿಂತುಬಿಟ್ಟೆ. ಸುಶೀಲ ಹಿಂದಿನಿಂದ ನನ್ನನ್ನು ಹಿಡಿದುಕೊಂಡಿದ್ದಾಳೆ. ನೇರವಾಗಿರಬೇಕಾಗಿದ್ದ ಬಾಗಿಲು, ಉಯ್ಯಾಲೆಯಂತೆ ಸುಮಾರು ನೂರು ಸೆಕೆಂಡುಗಳ ಕಾಲ ಗೋಡೆಯ ಗಡಿಯಾರದ ಲಂಬಕ ಆಡಿದಂತೆ ಆಡತೊಡಗಿತು.

ಭಯಂಕರ ಸದ್ದಿನ ಜೊತೆಗೆ ಭೂಮಿಯ ಕಂಪನ ನಿಂತಿದ್ದೆ ಹೊರಕ್ಕೆ ಓಡಿದೆವು. ಆಗಲೇ ರಸ್ತೆಗಳ ಮೇಲೆಲ್ಲಾ ಹೆಂಗಸರು, ಮಕ್ಕಳು, ಮುದುಕರು ಚೀರಾಡುತ್ತಾ ದಿಕ್ಕು ತೋಚದೆ ಓಡುತ್ತಿದ್ದಾರೆ. ನಮ್ಮ ಮನೆಯ ಮಾಲೀಕ ಏನೂ ಆಗುವುದಿಲ್ಲ, ಇನ್ನೂ ಈ ಕಡೆ ಬಂದು ಬಿಡಿ ಎಂದು ಕಷ್ಟದಿಂದ ದೂರಕ್ಕೆ ನಿಲ್ಲುವಂತೆ ಹೇಳಿದ.

ಈಗ ಆಗಿದ್ದು ಭೂಕಂಪನವೆಂದು ನಿಮಗಾಗಲೇ ತಿಳಿದಿರಬೇಕು. ಮೈ ಗಡಗಡನೆ ನಡುಗುತ್ತಿತ್ತು. ಒಂದರ್ಧ ಗಂಟೆ ಜನರು ಮನೆಗಳ ಒಳಕ್ಕೆ ಹೋಗುವ ಧೈರ್ಯ ಮಾಡಲಿಲ್ಲ. ಆಮೇಲೆ ಒಬ್ಬೊಬ್ಬರಾಗಿ ಒಳಕ್ಕೆ ಹೋದರು. ಸುಶೀಲ ಒಳಕ್ಕೆ ಹೋಗಲೋ ಬೇಡವೋ ಎಂದು ಅನುಮಾನ ಪಡುತ್ತ ಕೊನೆಗೆ ಒಳಗೆ ಹೋದಳು.

"ಡ್ಯಾಡಿ, ನಾವು ನಿದ್ದೆ ಮಾಡುತ್ತಿದ್ದಾಗ ಭೂಕಂಪನ ಬಂದು ಮನೆಯೆಲ್ಲಾ ಬಿದ್ದುಹೋದರೆ ಏನುಮಾಡುವುದು ?" ಎಂದು ಕ್ರಾಂತಿ ಚಿಂತಿಸತೊಡಗಿದ.

ಸಣ್ಣಪುಟ್ಟ ಮನೆಗಳು ಸುಮಾರು ಬಿದ್ದು ಹೋಗಿದ್ದವು. ನಾಗಾಲ್ಯಾಂಡಿನಲ್ಲಿ ಮುಖ್ಯವಾಗಿ ಎರಡು ರೀತಿಯ ಮನೆಗಳಿವೆ. ಒಂದು ಬಿದರು ಮರಗಳನ್ನು ಉಪಯೋಗಿಸಿ ಕಟ್ಟಿರುವ ಮನೆಗಳು ಎರಡು ಮಾಮೂಲಿ ಸಿಮೆಂಟ್ ಕಟ್ಟಡಗಳು. ಮರಗಳನ್ನು ಉಪಯೋಗಿಸಿ ಕಟ್ಟಿರುವ ಮನೆಗಳು ಭೂಮಿ ಎಷ್ಟೇ ಕಂಪನಗೊಂಡರೂ ಮನೆಗಳು ಗಿಡಗಳಂತೆ ಅಲ್ಲಾಡಿ ಮತ್ತೆ ಹಾಗೆ ನಿಂತಿರುತ್ತವೆ. ಹಾಗಾಗಿ ಹೆಚ್ಚು ಮನೆಗಳು ಬೀಳಲಿಲ್ಲ.

ಆದರೆ ಇತ್ತೀಚಿನ ದಿನಗಳಲ್ಲಿ ಇದೊಂದು ಭಯಂಕರ ಭೂಕಂಪವಾಗಿತ್ತು. ರಿಚ್ಟರ್ ಮಾಪನದಲ್ಲಿ 5.3 ಪಾಯಿಂಟುಗಳಷ್ಟಾಗಿತ್ತು. ಸಾಮಾನ್ಯವಾಗಿ 5.2 ಪಾಯಿಂಟುಗಳಷ್ಟು ಭೂಕಂಪನವಾದರೆ ಸಾಕು, ಅಪಾರ ಪ್ರಾಣಹಾನಿಯ ಜೊತೆಗೆ ಹೇರಳ ಸಂಪತ್ತು ಹಾಳಾಗಿ ಕಲ್ಲು ಕಟ್ಟಡಗಳೂ ಕುಸಿದು ಬೀಳುತ್ತಿತ್ತು. ಆದರೆ ಅದೇನು ಆಶ್ಚರ್ಯವೋ ಹಾಗಾಗಿರಲಿಲ್ಲ. ಹಿಮಾಲಯ ಹೆಚ್ಚಾಗಿ ಟೊಳ್ಳು ಮತ್ತು ಸಡಿಲವಾದ ಶಿಲಾಪದರುಗಳನ್ನು ಹೊಂದಿದ್ದು,

ಭೂಕಂಪನವಾಗುವ ಸಮಯದಲ್ಲಿ ಒಳಗಿಂದ ಬಿಡುಗಡೆ ಆಗುವ ಶಕ್ತಿಯನ್ನು ಈ ಶಿಲಾಪದರುಗಳು ಒಂದು ರೀತಿಯಲ್ಲಿ ಶಾಕ್ ಅಬ್ಸರ್‌ವರ್‌ಗಳಂತೆ ಹೀರಿಕೊಳ್ಳುವುದರಿಂದ ಹೆಚ್ಚು ಪ್ರಾಣ ಹಾನಿ ಮತ್ತು ಹೇರಳ ಸಂಪತ್ತು ಹಾಳಾಗುವುದನ್ನು ತಡೆಗಟ್ಟುತ್ತದೆ ಎನ್ನುತ್ತಾರೆ ಭೂವಿಜ್ಞಾನಿಗಳು. ಈ ಭೂಕಂಪನದ ಅನುಭವದ ಮೇಲೆ ನಾನು ಬರೆದ "ಭೂಮಿ ಗುಡುಗಿದಾಗ" ಎನ್ನುವ ಲೇಖನ "ಸುದ್ದಿ ಸಂಗಾತಿ"ಯಲ್ಲಿ ಪ್ರಕಟವಾಗಿತ್ತು. ಇತ್ತೀಚೆಗೆ ಇದೇ ಹೆಸರಿನಲ್ಲಿ ಭೂಕಂಪನಗಳ ಬಗ್ಗೆ ಗೀತಾಂಜಲಿ ಪಬ್ಲಿಕೇಷನ್ಸ್‌ನವರು ನನ್ನ ಒಂದು ಪುಸ್ತಕವನ್ನು ಪ್ರಕಟಿಸಿದ್ದಾರೆ.

1988ನೇ ವರ್ಷದ ಆಗಸ್ಟ್ ತಿಂಗಳು, ಐದನೆ ತಾರೀಖು ಸಂಭವಿಸಿದ ಈ ಭೂಕಂಪನದ ನಂತರ ಮುಂದೆ ಕೆಲವೇ ದಿನಗಳಲ್ಲಿ ಇನ್ನೊಂದು ಮಹಾ ಭೂಕಂಪ ಬರಲಿದೆ ಎನ್ನುವ ಎಚ್ಚರಿಕೆ ಎಂಬಂತೆ ಭೂಮಿ ಅಲ್ಲಲ್ಲಿ ಸ್ವಲ್ಪ ಹೊಗೆಯನ್ನು ಬಿಟ್ಟು ಬುಸುಗುಡುವುದನ್ನು ಗಮನಿಸಿದ ಭೂವಿಜ್ಞಾನಿಗಳು ಎಚ್ಚರಿಕೆಯನ್ನೇನೋ ನೀಡಿದ್ದರು. ಆದರೆ ಸರಿಯಾಗಿ ಎಲ್ಲಿ ಯಾವಾಗ ಎಂದು ಹೇಳಲಾಗಲಿಲ್ಲ.

ಮುಂದೆ ಕೆಲವೇ ದಿನಗಳಲ್ಲಿ ಅಂದರೆ ಅದೇ ವರ್ಷದ ಸೆಪ್ಟೆಂಬರ್ ತಿಂಗಳು 21 ನೇ ತಾರೀಖು ಮುಂಜಾನೆ ಬಿಹಾರ್ (ಧರ್ಬಂಗಾ)- ನೇಪಾಳದ ಗಡಿಯಲ್ಲಿ ಮಲಗಿದ್ದವರು ಏನಾಗುತ್ತಿದೆ ಎಂದು ಕಣ್ಣುಜ್ಜಿಕೊಳ್ಳುವುದರೊಳಗೆ ಅವರ ಮನೆ ಮಠಗಳನ್ನೆಲ್ಲ ಹೊತ್ತು ನಿಂತಿದ್ದ ಬೆಟ್ಟ ಗುಡ್ಡಗಳೇ ಅವರ ಮೇಲೆ ಎರಗಿಬಿಟ್ಟವು. ಈ ಪ್ರದೇಶ ಹಿಮಾಲಯ ಮತ್ತು ಗಂಗಾ ಬಯಲಿನ ನಡುವಿನ ಪ್ರದೇಶವಾಗಿತ್ತು.

ನೂರಾರು ಜನ ಸತ್ತು ಸಾವಿರಾರು ಜನ ಅಂಗವಿಕಲರಾದರು. ಕೋಟ್ಯಾಂತರ ರೂಪಾಯಿಗಳ ಆಸ್ತಿ ಹಾಳಾಯಿತು. ಇಷ್ಟಕ್ಕೂ ಇದು ರಿಚ್ಟರ್ ಮಾಪನದಲ್ಲಿ 5.1 ರಿಂದ 5.2 ಮಧ್ಯದ ಭೂಕಂಪನವಾಗಿತ್ತು.

* * *

ದಿಮಾಪುರ ಮೂಲದಲ್ಲಿ ಭೀಮನ ಪ್ರೇಯಸಿ ಹಿಡಿಂಭಾ ಇದ್ದ ಸ್ಥಳವಾಗಿದ್ದು, ಬರುಬರುತ್ತಾ ಹಿಡಿಂಭಾಪುರ, ಡಿಂಭಾಪುರವಾಗಿ ನಂತರ ದಿಮಾಪುರ ಆಯಿತಂತೆ. ಊರಿನ ದಕ್ಷಿಣ ಪೂರ್ವಕ್ಕೆ, ಉತ್ತರ ಈಶಾನ್ಯದ ತಪ್ಪಲುಗಳ ಕೆಳಗೆ ಈಗಲೂ ಕೆಲವು ಶಿಥಿಲಗೊಂಡ ಕುರುಹುಗಳಿದ್ದು, ಅವೆಲ್ಲಾ ಮಹಾಭಾರತದ ಪ್ರತೀಕಗಳೆಂದೇ ಹೇಳುತ್ತಾರೆ. ಪಾಂಡವರು ಸ್ನಾನ

ಮಾಡುತ್ತಿದ್ದ ದೊಡ್ಡ ದೊಡ್ಡ ಕೊಳಗಳು, ಚದುರಂಗಮಣೆ, ಕಲ್ಲಿನಲ್ಲಿ ಕೆತ್ತಿರುವ ದೊಡ್ಡ ದೊಡ್ಡ ಚದುರಂಗ ಕಾಯಿಗಳೂ ಸಹ ಇವೆ. ಈ ಚದುರಂಗ ಕಾಯಿಗಳು ಒಂದೊಂದು ಆಳೆತ್ತರವಿದ್ದು, ಹತ್ತಡಿಗಳಿಗಿಂತ ಹೆಚ್ಚು ಸುತ್ತಳತೆಯನ್ನು ಹೊಂದಿವೆ.

ಪಕ್ಕದ ಮಣಿಪುರ ರಾಜ್ಯದ ಸುಭದ್ರಾಗಳನ್ನು ಮಹಾಭಾರತದ ಅರ್ಜುನ ವರಿಸಿದ್ದನೆಂದು ಹೇಳುತ್ತಾರೆ. ರಾಧಾಕೃಷ್ಣರ ಬ್ಯಾಲೆ ಈಗಲೂ ಮಣಿಪುರದಲ್ಲಿ ಬಹಳ ಪ್ರಖ್ಯಾತ. ಈ ಓಡಿಂಭಾಪುರಕ್ಕೆ ಬಂದು ಒಂದು ವಾರವೇ ಆಗಿದ್ದರೂ ಮನೆಯಲ್ಲಿ ಅಡಿಗೆ ಇನ್ನೂ ಶುರುಮಾಡಿರಲಿಲ್ಲ. ಅಲ್ಲಿನ ಸಹೋದ್ಯೋಗಿಗಳು ಮನೆಗೆ ಬಂದು ಈ ದಿನ ನಮ್ಮ ಮನೆಗೆ, ನಾಳೆ ನಿಮ್ಮ ಮನೆಗೆ ಎಂದು ತಾವೇ ಫಿಕ್ಸ್ ಮಾಡಿಕೊಂಡು ಹೊರಟು ಬಿಡುತ್ತಿದ್ದರು. ಎಲ್ಲರ ಮನೆಗಳಲ್ಲೂ ಒಂದು ಸುತ್ತು ಆಯಿತು.

ಕಿಟ್ಟಿ ಔತಣಗಳು, ಹುಟ್ಟುಹಬ್ಬಗಳು, ಬೀಳ್ಕೊಡಿಗೆ ಸಮಾರಂಭಗಳು, ಹೊಸ ವರ್ಷದ ಔತಣಗಳು, ವಿಡಿಯೋ ಚಿತ್ರಗಳು, ಎಲೆಯಾಟಗಳು ಹೀಗೆ ಒಂದಲ್ಲಾ ಒಂದು ಚಟುವಟಿಕೆಗಳು ನಡೆಯುತ್ತಲೇ ಇದ್ದವು.

ಒಂದು ರಾತ್ರಿ ಯಥಾಪ್ರಕಾರವಾಗಿ ಮಲಗಿ ನಿದ್ದೆ ಮಡುತ್ತಿದ್ದೇವೆ. ಆಗಸ್ಟ್ ತಿಂಗಳಾದರೂ ಸೆಕೆ ಇನ್ನೂ ಪೂರ್ತಿ ಕಮ್ಮಿಯಾಗದ ಕಾರಣ ಕಿಟಕಿಗಳು ತೆಗೆದೇ ಇವೆ. ರಾತ್ರಿ ಸುಮಾರು ಮೂರು ಗಂಟೆ ಇರಬಹುದು. ಕ್ರಾಂತಿ ನೀರು ಕೇಳಿದ, ದೀಪದ ಸ್ವಿಚ್ ಹಾಕಿ ನೀರು ಕುಡಿಸಿದೆ. ಮತ್ತೆ ಅವನು ನಿದ್ದೆ ಮಾಡುವವರೆಗೂ ದೀಪವನ್ನು ಆರಿಸಲು ಬಿಡುತ್ತಿರಲಿಲ್ಲವಾದ್ದರಿಂದ ದೀಪವನ್ನು ಹಾಗೇ ಬಿಟ್ಟು ಸೊಳ್ಳೆ ಪರದೆಯ ಒಳಗೆ ಕಣ್ಣುಮುಚ್ಚಿ ಮಲಗಿದ್ದೇನೆ. ಏನೋ.. ಸರ ಸರ ಸದ್ದು, ಅರೆನಿದ್ದೆ, ಅರೆ ಎಚ್ಚರದ ಮಧ್ಯೆ ಒಲ್ಲದ ಮನಸ್ಸಿನಿಂದ ಕಣ್ಣು ತೆರೆದು ನೋಡುತ್ತೇನೆ. ಸೊಳ್ಳೆ ಪರದೆಯ ಪಕ್ಕದಲ್ಲೇ ಒಂದು ದಪ್ಪವಾದ ಬಿದಿರು ಮರ ಚಲಿಸುತ್ತಿದೆ.

ಅವಕ್ಕಾದ ನನ್ನ ಹೃದಯ ಒಮ್ಮಲೇ ನಿಂತಂತಾಯಿತು. ಉದ್ದವಾದ ಬಿದಿರು ಮರ ಕಿಟಕಿಯಿಂದ ಒಳತೂರಿ ಗೋಡೆಯಲ್ಲಿ ನೇತಾಕಿದ್ದ ವ್ಯಾನಿಟಿ ಚೀಲವನ್ನು ಅಪಹರಿಸಲು ಪ್ರಯತ್ನಿಸುತ್ತಿದೆ. ಒಮ್ಮೆಲೇ ಹೌಹಾರಿದ ನಾನು "ಏಯ್.." ಎಂದು ಸದ್ದು ಮಾಡಿ ಎರಡೂ ಕೈಗಳಿಂದ ಬಿದಿರು ಮರವನ್ನು ದೂರ ತಳ್ಳಿದೆ. ವ್ಯಾನಿಟಿ ಚೀಲ ದೊಪ್ಪನೆ ಕೆಳಕ್ಕೆ ಬೀಳುವುದರ ಜೊತೆಗೆ ಬಿದಿರು ಮರ ಸರಕ್ಕನೆ ಓಂದಕ್ಕೆ ಸರಿಯಿತು.

ನಾನು ಮಾಡಿದ ಸದ್ದಿಗೆ ಪಕ್ಕದ ಮನೆಯಲ್ಲಿ ಮಲಗಿದ್ದವರೂ ಮತ್ತು ಸುಶೀಲ ಒಮ್ಮೆಲೇ ಎಚ್ಚರಗೊಂಡಿದ್ದರು. ನನಗೆ ಕೆಲವು ಕ್ಷಣಗಳು ಮಾತುಗಳು ಬರದೆ ಹೃದಯ ಗಂಟಲಲ್ಲೇ ಸಿಕ್ಕಿಕೊಂಡಂತಾಯಿತು. ಬೆಳಿಗ್ಗೆ ಎದ್ದು ನೋಡಿದಾಗ ಆ ಕಳ್ಳನ ಹೆಜ್ಜೆಗಳು ಹಾಗೆ ಬಿದ್ದಿದ್ದವು. ಆ ದಿನದಿಂದ ಕಿಟಿಕಿಗಳನ್ನು ತೆಗೆದುಕೊಂಡು ಮಲಗುವುದೇ ಬಿಟ್ಟು ಬಿಟ್ಟೆವು.

ಒಂದು ಭಾನುವಾರ ಬೆಳಗ್ಗೆ ನಾವು ಮೂವರು ಸೈಕಲ್ ರಿಕ್ಷಾದಲ್ಲಿ ಕುಳಿತುಕೊಂಡು ದಿಮಾಪುರದ ಮುಖ್ಯ ರಸ್ತೆ, ಸರ್ಕ್ಯುಲರ್ ರಸ್ತೆಯಲ್ಲಿ ಹೋಗುತ್ತಿದ್ದೇವೆ. ರಸ್ತೆಯ ಪಕ್ಕದಲ್ಲೇ ಸುಮಾರು 50-60 ನಾಯಿಗಳು ಬಿದ್ದಿವೆ. ಸುತ್ತಲು ಒಂದಷ್ಟು ಜನ, ಮಾರುತಿ ಕಾರುಗಳು ಮತ್ತು ದ್ವಿಚಕ್ರ ವಾಹನಗಳೂ ನಿಂತಿವೆ. ಇದೇನಿರಬಹುದು ಎಂದು ನೋಡು ನೋಡುತ್ತಿದ್ದಂತೆ ಹತ್ತಿರ ಬಂದಿದ್ದೆವು. ಎಲ್ಲಾ ನಾಯಿಗಳೂ ಸತ್ತು ಬಿದ್ದಿವೆ. ಅಲ್ಲಿದ್ದವರೆಲ್ಲ ನೂರು, ಇನ್ನೂರು ನೋಟುಗಳನ್ನು ಕೊಟ್ಟು ನಾಯಿಗಳನ್ನು ತಮ್ಮ ವಾಹನಗಳಲ್ಲಿ ಹಾಕಿಕೊಂಡು ಹೋಗುತ್ತಿದ್ದಾರೆ.

ಸ್ವಲ್ಪ ಗಾಬರಿಯಾದ ನಾವು ನೇರವಾಗಿ ಆದಿನಾರಾಯಣರವರ ಮನೆಗೆ ಹೋಗಿ ವಿಷಯ ತಿಳಿಸಿದೆವು. ಶ್ರೀಮತಿ ಆದಿನಾರಾಯಣ ಮತ್ತು ಆದಿನಾರಾಯಣ ಅವರು ಬಿದ್ದು ಬಿದ್ದು ನಗುತ್ತ ಸುಮಾರು ವಿಷಯಗಳನ್ನು ನಮಗೆ ತಿಳಿಸಿ ಇನ್ನಷ್ಟು ಗಾಬರಿ ಪಡಿಸಿದರು. ನಂತರದ ದಿನಗಳಲ್ಲಿ ಅವರು ತಿಳಿಸಿದ್ದ ವಿಷಯಗಳನ್ನು ನೇರವಾಗಿ ನೋಡಿ ನಮಗೂ ಸಾಕಾಗಿ ಹೋಯಿತು.

ನಾಗಾಗಳಿಗೆ ನಂಬರ್ ಒನ್ ಪ್ರಿಯವಾದ ಮಾಂಸವೆಂದರೆ ನಾಯಿ, ನಂತರ ಮಂಗ, ಹಂದಿ, ಇತ್ಯಾದಿ ಇವುಗಳ ಜೊತೆಗೆ ಭೂಮಿಯ ಮೇಲೆ ಸಿಗುವ ಎಲ್ಲಾ ಪ್ರಾಣಿಗಳೂ ಅವರಿಗೆ ಪ್ರಿಯವೆ.

ಒಮ್ಮೆ "ತ್ಯುಯಿನ್ ಸಾಂಗ್" ಜಿಲ್ಲೆಯ ಹಳ್ಳಿಯವನನ್ನು ನೀವು ಏನೇನು ತಿನ್ನುತ್ತೀರ ಎಂದು ಪ್ರಶ್ನಿಸಿದಾಗ,

"ನಾಗಾ ಮನುಷ್ಯ ತಿನ್ನದೆ ಇರುವ ವಸ್ತುಗಳೆಂದರೆ ಎರಡೇ ಎರಡು ಒಂದು ಅವನ ಉಚ್ಚೆ ಎರಡು ಕಕ್ಕಸ್ಸು" ಎಂದಿದ್ದ. ಅವನು ಹೇಳಿದ್ದರಲ್ಲಿ ಸತ್ಯಾಂಶವೂ ಇತ್ತು. ನಾಗಾಲ್ಯಾಂಡಿನ ರಾಜಧಾನಿ ಕೋಹಿಮಾ ನಗರದ ನಾಗಾ ಸಂತೆಯನ್ನು ನೋಡಲೆಂದೆ ಹೋಗಿದ್ದೆವು. ಆ ಸಂತೆಯಲ್ಲಿ ಸಿಗದೆ ಇರುವ ಪ್ರಾಣಿಗಳೇ ಇಲ್ಲವೆನ್ನಬಹುದು.

ನಾಯಿಗಳು ಹೊಲಿಗೆ ಮಾಡಿದ ಗೋಣಿ ಚೀಲಗಳಲ್ಲಿ ಮುಖಗಳನ್ನು ಹೊರಕ್ಕೆ ಚಾಚಿ ಮನುಷ್ಯರಂತೆ ಕುಳಿತುಕೊಂಡಿದ್ದರೆ, ಕಪ್ಪೆಗಳನ್ನು ತರಕಾರಿಯ ಕುಪ್ಪೆಗಳಂತೆ ದಾರಗಳಲ್ಲಿ ಕಟ್ಟಿಡಲಾಗಿದೆ. ಬಸವನ ಹುಳುಗಳನ್ನು ಬಿದಿರು ಸೇರುಗಳಲ್ಲಿ ಅಳತೆ ಮಾಡುತ್ತಿದ್ದರೆ, ಹಸಿರು ಹಳದಿ ಬಣ್ಣದ ಕಂಬಳಿ ಹುಳುಗಳನ್ನು ತಕ್ಕಡಿಯಲ್ಲಿ ತೂಕ ಹಾಕುತ್ತಿದ್ದಾರೆ. ಮಿಡತೆ ಇನ್ನಿತರ ಹಾರುವ ಪ್ರಾಣಿಗಳನ್ನು ಪ್ಲಾಸ್ಟಿಕ್ ಚೀಲಗಳಲ್ಲಿ ಕಟ್ಟಿಟ್ಟಿದ್ದಾರೆ. ಹಾವುಗಳು, ಮತ್ತು ಮಂಗಗಳು ಮಾತ್ರ ಹುಡಿಕಿದರೂ ಸಿಗಲಿಲ್ಲ. ಕಾರಣ ಅವು ಸಂತೆ ತಲುಪುವುದಕ್ಕಿಂತ ಮುಂಚೆಯೇ ದಾರಿಯಲ್ಲೇ ವ್ಯಾಪಾರ ಆಗಿಬಿಡುತ್ತವಂತೆ.

ನಾಗಾ ಮನೆಗಳಿಗೆ ಯಾರಾದರೂ ಮುಖ್ಯ ಅತಿಥಿಗಳು ಬಂದರೆ ನಾಯಿ ಮತ್ತು ಮಂಗಗಳ ತಲೆಗಳನ್ನು ವಿಶೇಷವಾಗಿ ತಯಾರಿ ಮಾಡಿ ಬಡಿಸಲು ಇಡುವುದು ಗೌರವದ ಪ್ರತೀಕ. ನಾಯಿ ಮತ್ತು ಮಂಗಗಳ ಮಾಂಸವನ್ನು ತಿಂದರೆ ಒಂದು ರೀತಿ ಹಗುರವಾಗಿ ಹಾಗೇ ಹಾರಾಡಿದಂತಾಗಿ ಮೈಯೆಲ್ಲ ಪುಳಕಗೊಳ್ಳುತ್ತದೆ, ಎನ್ನುತ್ತಿದ್ದ ನನ್ನ ಜೀಪಿನ ಚಾಲಕ ಟೊಂಗಪಾಂಗ್ ವರ್ಣಿಸುವ ಸಮಯದಲ್ಲಿ ಅವನ ಮುಖವನ್ನು ನೋಡಬೇಕು.

* * *

## 14 ಸ್ವಯಂ ಶಾಸಕರು ಸ್ವಂತ ಆಡಳಿತ

ಉತ್ತರ ಪೂರ್ವ ಹಿಮಾಲಯದ ನಾಗಾ ಬೆಟ್ಟಗಳಲ್ಲಿ ಓಡಾಡುವಾಗ ಒಂದು ಬಗೆ ಅರಿಯದ ನಿರಾಶೆ ನಮ್ಮನ್ನು ಕಾಡುತ್ತದೆ. ಸಣ್ಣ ಮಕ್ಕಳಿಂದ ಯುವಕರು ದೊಡ್ಡವರೆನ್ನದೆ ಎಲ್ಲರೂ ಒಂದೊಂದು ಕೋವಿಯನ್ನು ಭುಜಕ್ಕೆ ನೇತಾಕಿಕೊಂಡು, ನಾಗಾ ದಾವ್‌ನ್ನು (ಮಚ್ಚು) ನಡುವಿನ ಪಟ್ಟಿಯಲ್ಲಿ ಸಿಕ್ಕಿಸಿಕೊಂಡು ಯಾವ ಪ್ರಾಣಿ ಸಿಕ್ಕರೂ ಸರಿ, ಯಾವ ಮರವನ್ನಾದರೂ ಸರಿ ಉರುಳಿಸುತ್ತಲೇ ಇರುತ್ತಾರೆ.

ಅಷ್ಟು ದಟ್ಟ ಕಾಡುಗಳಲ್ಲಿ ನೆಲದಲ್ಲಿ ಹರಿದಾಡುವ ಹಾವುಗಳಾಗಲಿ, ಆಕಾಶದಲ್ಲಿ ಹಾರಾಡುವ ಹಕ್ಕಿಗಳಾಗಲಿ ಕೊನೆಗೆ ಗುಬ್ಬಚ್ಚಿಗಳಾಗಲಿ ಒಂದೂ ಸಿಗುವುದಿಲ್ಲ. ಇನ್ನು ಕಾಡು ಕಡಿಯುವುದನ್ನು ಕೇಂದ್ರ ಸರಕಾರವು ಪ್ರಶ್ನಿಸುವಂತಿಲ್ಲ. ಎಲ್ಲಾ ಹಳ್ಳಿಗಳೂ ತಮಗೆ ತೋಚಿದ ಹಾಗೆ ಗೆರೆಗಳನ್ನು ಹಾಕಿಕೊಂಡಿದ್ದು, ಅವರು ಏನಾದರೂ ಮಾಡಬಹುದು. ಅದೊಂದು (ಅಟಾನಮಸ್) ಸ್ವಯಂಶಾಸನದ ರಾಜ್ಯವಾಗಿದ್ದು, ಹೊರ ರಾಜ್ಯಗಳ ಜನ ನೆಲವನ್ನು ಕೊಂಡುಕೊಳ್ಳಲು ಸಾಧ್ಯವಿಲ್ಲ. ಎಲ್ಲವನ್ನೂ ತೀರ್ಮಾನಿಸುವವನು ಹಳ್ಳಿಯ ವೃದ್ಧನೇ (ಗಾವ್‌ಬುಡಾ ಅಥವಾ ಜಿ.ಬಿ.). ಅವನ ಅಪ್ಪಣೆ ಇಲ್ಲದೆ ಸರಕಾರಿ ಅಧಿಕಾರಿಗಳೂ ಸಹ ಹಳ್ಳಿಯನ್ನು ಪ್ರವೇಶಿಸುವಂತಿಲ್ಲ. ಝೂಮ್ (ಚಲಿಸುವ) ವ್ಯವಸಾಯದಿಂದ ಪ್ರತಿವರ್ಷವೂ ಕಾಡನ್ನ ಕಡಿಯಲಾಗುತ್ತದೆ. ಈಗಲೂ ಮನಸ್ಸು ಮಾಡಿದರೆ ಎಷ್ಟೋ ಕಾಡನ್ನು ಉಳಿಸಬಹುದು. ಆದರೆ ಅದೆಲ್ಲಾ ಯಾರಿಗೆ ಬೇಕಾಗಿದೆ..?

ಮಾತುಗಳ ಜೊತೆಗೆ ತಿನಿಸುಗಳ ಇನ್ನೊಂದು ಸ್ವಾರಸ್ಯಕರ ವಿಷಯವನ್ನು ಬಿಟ್ಟಿದ್ದಕ್ಕೆ ಕ್ಷಮಿಸಬೇಕು. ದಿಮಾಪುರಕ್ಕೆ ಹೊಸದಾಗಿ ಹೋದ ನಾನು ಒಂದು ವಾರದ ನಂತರ ನೇರವಾಗಿ ಮಾಂಸದ ಅಂಗಡಿ ತಲುಪಿದೆ. ಎಲ್ಲಾ ಊರುಗಳಲ್ಲೂ ಕಟುಕರು ಕೂಗಾಡುವಂತೆ ಇಲ್ಲಿಯೂ ಕೂಗಾಡುತ್ತಿದ್ದರು. ಅಂಗಡಿಗಳಲ್ಲಿ ಚರ್ಮ ಸುಲಿದುಕೊಂಡ ಕುರಿ, ಮೇಕೆಯ ದೇಹಗಳು ನೇತಾಡುತ್ತಿವೆ. ಆದರೆ ಆ ದೇಹಗಳು ಗಾಳಿ ತುಂಬಿಕೊಂಡ ಬೆಲೂನುಗಳಂತೆ ಊದಿಕೊಂಡಿದ್ದು ಅವುಗಳಿಂದ ನೀರು ಒಂದೇ ಸಮನೆ ಜಿನುಗುತ್ತಿದೆ. ಎಲ್ಲಾ ಅಂಗಡಿಗಳಲ್ಲೂ ನೋಡಿದೆ. ಎಲ್ಲವೂ ಅದೇ ಗತಿ.

"ಇದೇನು, ನೀರು ಸುರಿಯುತ್ತಿದೆಯಲ್ಲ..?" ಒಬ್ಬ ಕಟುಕನನ್ನು ಪ್ರಶ್ನಿಸಿದೆ.

"ನೀರೆಲ್ಲಿದೆ ಸ್ವಾಮಿ, ಒಂದು ತೊಟ್ಟೂ ನೀರಿಲ್ಲ ಇದರಲ್ಲಿ" ಎಂದ. ನೀರು ಜಿನುಗುತ್ತಿರುವುದನ್ನು ತೋರಿಸಿ ಇದೇನಿದು ಎಂದು ಕೇಳಿದೆ.

"ಓ, ಅದು ನೀರನಲ್ಲಿ ತೊಳೆದಿದ್ರಿಂದ ಹಾಗಾಗಿದೆ" ಎಂದ.

"ಅಂದರೆ ನಾವೆಲ್ಲೂ ಮಾಂಸ ತೆಗೆದುಕೊಂಡಿಲ್ಲ, ತಿಂದಿಲ್ಲ ಅನ್ನು" ಎಂದೆ.

" ನಾನು ಆ ತರಹ ಹೇಳಿದೆನೆ" "ಮತ್ತೆ ನೀನು ಹೇಳಿದ್ದು ಕಣ್ಣೆದುರಿಗೆ ನೀರು ಸುರಿಯುತ್ತಿದ್ದರೂ ಒಂದು ತೊಟ್ಟೂ ನೀರಿಲ್ಲ ಅನ್ನುತ್ತೀಯಲ್ಲ, ಇದೇನು ಮಾಂಸವೆ ಅಥವಾ" ಎಂದು ಸ್ವಲ್ಪ ದಬಾಯಿಸಿದೆ.

"ಹ್ಹ.. ಹ್ಹ.. ಮಾಂಸಾನೆ ಸ್ವಾಮಿ, ನಾವೇನು ಮಾಡುವುದು ಹೇಳಿ..? ಇಲ್ಲಿ ಎಲ್ಲರೂ ಈ ತರಹದ ಮಾಂಸಾನೆ ಕೇಳ್ತಾರೆ ಮಾಂಸಕ್ಕೆ ನೀರೊಡೆಯದಿದ್ದರೆ ಯಾರೂ ತೆಗೆದುಕೊಳ್ಳುವುದಿಲ್ಲ ತೆಗೆದುಕೊಂಡರೂ ಹಣ ಕಡಿಮೆ ಕೊಡ್ತಾರೆ.." ಎನ್ನುತ್ತಾ ತನ್ನ ಕಷ್ಟವನ್ನು ತೋಡಿಕೊಂಡ.

"ನೀರನ್ನು ಎಲ್ಲಿಂದ ತರ್ತೀರ..? ದೇಹದ ಒಳಕ್ಕೆ ಹೇಗೆ ಸೇರಿಸ್ತೀರ ?" ಕೇಳಿದೆ. ಸ್ವಲ್ಪ ಹಿಂದೆ ಮುಂದೆ ನೋಡಿದ ಆ ಬಾಂಗ್ಲಾ ದೇಶಿ,

" ನೀರೇನು ಸ್ವಾಮಿ ಯಾವುದಾದರೂ ಸರಿ ಎನ್ನುತ್ತಾ ಒಳಕ್ಕೆ ಕರೆದುಕೊಂಡು ಹೋಗಿ ಒಂದು ದೊಡ್ಡ ಪಿಚಕಾರಿ ರೀತಿಯ ಸಿರೆಂಜ್ ತೋರಿಸಿ, ಈ ಪಿಚಕಾರಿಯಿಂದ ಬಾಲದ ಹಿಂದಿರುವ ಒಂದು ನರದ ಮುಖಾಂತರ ಏರಿಸುತ್ತೇವೆ. ಆಗ ದೇಹವೆಲ್ಲ ನೀರಿನಿಂದು ತುಂಬಿಕೊಳ್ಳುತ್ತದೆ" ಎಂದು ವಿವರಿಸಿದ.

ದಿಗ್ಭ್ರಮೆಗೊಂಡ ನಾನು ವಲಸೆ ಬಂದಿರುವ ಆ ಬಾಂಗ್ಲಾ, ದೇಶದ ಕಟುಕ ವಿಜ್ಞಾನಿಯ ಜ್ಞಾನಕ್ಕೆ ಮೂಕನಾಗಿ ಹೋದೆ.

"ಹೌದು ನೀರೊಡೆಯದೆ ಹಾಗೆ ಮಾರುವುದಕ್ಕೆ ಆಗುವುದಿಲ್ಲವೆ.." ಕೇಳಿದೆ.

" ಯಾಕಾಗೂದಿಲ್ಲ ಸ್ವಾಮಿ, ಆಗಲೇ ಹೇಳಲಿಲ್ಲವೆ.." ಪ್ರಶ್ನಿಸಿದ.

"ಅದೆಲ್ಲಾ ಹೋಗಲಿ ಈಗ ನನಗೆ ನೀರಿಲ್ಲದ ಮಾಂಸಬೇಕು" ಎಂದೆ.

"ಹಾಗಾದರೆ ಒಂದು ಕೆಲಸ ಮಾಡಿ ನಾಳೆಯಿಂದ ಮಾಂಸ ಬೇಕಾದಾಗ ಬೆಳಗ್ಗೆ ಏಳು ಗಂಟೆಗೆ ಬಂದು ಬಿಡಿ, ನಿಮಗೆ ಎಷ್ಟು ಬೇಕೋ ಅಷ್ಟು ಕೊಡುತ್ತೇನೆ. ನೀರಿಲ್ಲದೆ ಇರುವುದು, ಅರವತ್ತು ರೂಪಾಯಿಗಳು, ನೀರಿರುವುದು ನಲವತ್ತು ರೂಪಾಯಿಗಳು" ಹೇಳಿದ. ಅಂದಿನಿಂದ ಮಾಂಸ ಬೇಕಾದಾಗ, ಅವನು ಹೇಳಿದಂತೆ ಮಾಡಬೇಕಾಯಿತು.

ಒಂದು ದಿನ ಬೆಳಗ್ಗೆ ಮನೆ ಮುಂದೆ ನಿಂತು ಓಡಾಡುವ ವಾಹನಗಳನ್ನು ನೋಡುತ್ತಿದ್ದೇನೆ. ಒಂದು ಖಾಲಿ ಲಾರಿ ಸುಮಾರು ನಲವತ್ತು ಕಿ.ಮೀ.ಗಳ ವೇಗದಲ್ಲಿ ಧಾವಿಸುತ್ತಿದೆ. ಅಷ್ಟರಲ್ಲಿ ಅಕಸ್ಮಾತಾಗಿ ಒಂದು ಕೋಳಿಪಿಳ್ಳೆ, ಲಾರಿಗೆ ಅಡ್ಡ ಬಂದು, ಲಾರಿಯ ವೇಗ ಥಟ್ಟನೆ ಕಡಿಮೆಯಾಯಿತು. ಹಿಂದೆಯೇ ವೇಗವಾಗಿ ಸ್ಕೂಟರ್ ಓಡಿಸುತ್ತಿದ್ದ ನಾಗಾ ಯುವಕ ಸ್ವಲ್ಪ ಮುಗ್ಗರಿಸಿ ಆಯ ತಪ್ಪಿ ಮತ್ತೆ ಚೇತರಿಸಿಕೊಂಡು ಲಾರಿಯನ್ನು ಕೆಲವೇ ಕ್ಷಣಗಳಲ್ಲಿ ಓಂದಕ್ಕೆ ಹಾಕಿ ಸ್ಕೂಟರನ್ನು ಮುಂದೆ ನಿಲ್ಲಿಸಿದ. ಬಿಹಾರಿ ಚಾಲಕ ವಿಧಿಯಿಲ್ಲದೆ ಲಾರಿ ನಿಲ್ಲಿಸಿದ, ಅಷ್ಟೇ . ಸಣಕಲಾದ ನಾಗಾ ಯುವಕ ಲಾರಿಯ ಕೇಬಿನ್ ಹತ್ತಿ ಲಾರಿ ಚಾಲಕನ ಮುಖಕ್ಕೆ ಮುಷ್ಠಿಯಿಂದ ಒಂದೇ ಸಮನೆ ಪ್ರಹಾರ ಮಾಡಿದ.

ಬಿಹಾರಿ ಚಾಲಕ ಯಾವ ರೀತಿಯ ಪ್ರತಿರೋಧವೂ ತೋರದೆ ಮುಷ್ಠಿ ಪ್ರಹಾರವನ್ನು ತಪ್ಪಿಸಿಕೊಳ್ಳಲು ಮಾತ್ರ ಪ್ರಯತ್ನಿಸುತ್ತಿದ್ದ. ಜೊತೆಯಲ್ಲಿದ್ದ ಇನ್ನೊಬ್ಬ ಆಳು ಓಡಿ ಹೋಗಿ ಸ್ವಲ್ಪ ದೂರದಲ್ಲಿ ನಿಂತು ಮಿಕ ಮಿಕನೆ ನೋಡುತ್ತಿದ್ದ. ಅಲ್ಲೊಬ್ಬರು ಇಲ್ಲೊಬ್ಬರು ನಿಂತು ನೋಡುತ್ತಿದ್ದರೂ ಯಾರೂ ಹತ್ತಿರ ಹೋಗಲಿಲ್ಲ. ಯುವಕನಿಗೆ ಸಾಕೆನಿಸಿರಬೇಕು. ಪ್ರಹಾರ ನಿಲ್ಲಿಸಿ. ಸ್ಕೂಟರ್ ಚಾಲನೆ ಮಾಡಿ ಹೊರಟು ಹೋದ. ಬಿಹಾರಿ ಚಾಲಕ ತನ್ನ ರಕ್ತ ಸಿಕ್ತ ಮುಖವನ್ನು ಒರೆಸಿಕೊಂಡು ಲಾರಿ ಚಾಲನೆ ಮಾಡಿದ.

ಇನ್ನೊಂದು ಸಲ ಮನೆಯಿಂದ ಕಛೇರಿಗೆ ಹೋಗುತ್ತಿದ್ದೆ. ರಸ್ತೆಯ ಪಕ್ಕದಲ್ಲೆ ಇರುವ ತರಕಾರಿ ಅಂಗಡಿಯಲ್ಲಿರುವ ಬಿಹಾರಿ ಯುವಕ ಓಂದಕ್ಕೆ ತಿರುಗಿಕೊಂಡು ತರಕಾರಿಯನ್ನು ನೀಟಾಗಿ ಪೇರಿಸುತ್ತಿದ್ದಾನೆ. ಒಂದು ಎಮ್ಮೆ ಮುಂದಿದ್ದ ತರಕಾರಿಯನ್ನು ತಿನ್ನುತ್ತಿದ್ದು "ಹರೇ ಭೈ ಇದರ್ ದೇಖೋ" ಎಂದೆ. ಆ ಯುವಕನಿಗೆ ಏನು ಗ್ರಹಚಾರ ವಿತ್ತೋ ಏನೋ..? ಒಂದು ಉದ್ದವಾದ ಬಿದುರು ಮರವನ್ನೊತ್ತು ಎಮ್ಮೆಯನ್ನು ಅಟ್ಟಿಸಿಕೊಂಡು ರಸ್ತೆಗೆ ಬಂದು ಬಿಟ್ಟ. ಅದೇ ಸಮಯಕ್ಕೆ ಇಬ್ಬರು ನಾಗಾ ಯುವಕರು "ಯಮಾಹ" ಓಡಿಸಿಕೊಂಡು ವೇಗವಾಗಿ ಬರುತ್ತಿದ್ದಾರೆ. ಆ ಯಮಾಹ ವಾಹನಕ್ಕೆ ಈ ಯಮರಾಯನ ವಾಹನ ಅಡ್ಡವಾಗಿ ಯಮಾಹ ಸ್ವಲ್ಪ ಮುಗ್ಗರಿಸಿ ನಿಂತರೂ ಯಾರಿಗೂ ಯಾವ ರೀತಿಯ ತೊಂದರೆಯೂ ಆಗಲಿಲ್ಲ. ವೇಗ ಮಾತ್ರ ಧಿಡೀರನೆ ಕಡಿಮೆಯಾಗಬೇಕಾಯಿತು ಅಷ್ಟೆ. ಬಿಹಾರಿ ಯುವಕನಿಗೆ ಆಗಲೇ ತನ್ನ ತಪ್ಪಿನ ಅರಿವಾಗಿ ಸುತ್ತಲು ಒಮ್ಮೆ ನೋಡಿ, ಬಿದಿರು ಮರವನ್ನು ಅಲ್ಲೆ ಎಸೆದು, ಓಡಲು ಶುರುಮಾಡಿದ. ಅಷ್ಟರಲ್ಲಿ ಯಮಾಹ ಅವನನ್ನು ಹಿಮ್ಮೆಟ್ಟಿಸಿತು. ಹಿಂದಿದ್ದ ಯುವಕ ಇಳಿದು ಹಿಂದೆಯೇ ಓಡಿದ. ಬಿಹಾರಿ ಯುವಕ ಸ್ವಲ್ಪ ದೂರದಲ್ಲೇ ನಿಂತಿದ್ದ ನಾಗಾ ಪೋಲೀಸ್ ಸಹಾಯಕ್ಕಾಗಿ ಹತ್ತಿರಕ್ಕೆ ಓಡಿದ. ನಾಗಾ ಯುವಕ "ಸಾಲಾರ್ ರುಕಿಬಿ" ಎನ್ನುತ್ತಾ

ಗುಂಡುಕಲ್ಲನ್ನು ಕೈಗೆ ತೆಗೆದುಕೊಂಡು ಹಿಂದೆಯೇ ಓಡಿದ. ಕಾಕಿ ಬಟ್ಟೆ ಧರಿಸಿದ್ದ ಪೇದೆ ಏನು ಗೊತ್ತಿಲ್ಲದವನಂತೆ ಇನ್ನೊಂದು ಕಡೆಗೆ ತಿರುಗಿಕೊಂಡು ನಡೆಯತೊಡಗಿದ. ಬಿಹಾರಿ ಯುವಕ ದಿಕ್ಕು ತೋಚದೆ ಶರಣಂ ಎನ್ನುವಂತೆ ನಿಂತುಬಿಟ್ಟ. ಅಷ್ಟರಲ್ಲಿ ಒಮ್ಮೆ ಬೀಸಿದ ಗುಂಡುಗಲ್ಲಿನಿಂದ ತಪ್ಪಿಸಿಕೊಂಡಿದ್ದ ಬಿಹಾರಿ ಯುವಕನ ಮೇಲೆ ನಾಗಾ ಯುವಕನಿಗೆ ಆಗಾದ ಕೋಪ ಬಂದು ಕೈ ಕಾಲು ಏನೂ ನೋಡದೆ ಒಂದೇ ಸಮನೆ ಪ್ರಹಾರ ಮಾಡಿದ. ಸುಮಾರು ಹತ್ತು ಮುಷ್ಟಿ ಹೊಡೆತ, ಹತ್ತು ಒದೆಗಳನ್ನು ತಿಂದ ಯುವಕ ಕೊನೆಗೆ ಕೆಳಕ್ಕೆ ಬಿದ್ದು ಬಿಟ್ಟ. ಕೆಳಗೆ ಬಿದ್ದವನನ್ನು ಹೊಡೆಯಬಾರದು ಎನ್ನುವ ಉದ್ದೇಶದಿಂದಲೋ ಏನೋ ಕೊನೆಯದಾಗಿ ಜೋರಾಗಿ ಒಮ್ಮೆ ಒದ್ದು ಯಮಹಾ ಹತ್ತಿ ಇಬ್ಬರು ಬುರ್ರನೆ ಹೋಗಿ ಬಿಟ್ಟರು. ಇವು ಬರಿ ಕೆಲವು ಸ್ಯಾಂಪಲ್‌ಗಳು ಮಾತ್ರ ಇಂಥಹ ವಿಷಯಗಳು ನಾಗಾಲ್ಯಾಂಡಿನಲ್ಲಿ ದಿನಕ್ಕೆ ಹತ್ತಾರು ನಡೆಯುತ್ತಲೇ ಇರುತ್ತವೆ.

ನಾಗಾಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಒಂದು ನಾಗಾ ಬೆಟ್ಟಗಳಲ್ಲಿ ಗೆಡ್ಡೆಗೆಣಸು, ಎಲೆಗಳನ್ನು ತಿಂದು ಜೀವಿಸುವ ಕಡುಬಡವರು. ಎರಡು ಸರಕಾರದ ಎಲ್ಲಾ ಸವಲತ್ತುಗಳನ್ನೂ ನುಂಗಿ ನೀರು ಕುಡಿಯುತ್ತಿರುವ ರಾಜಕೀಯ ಚಿಲ್ಲರೆ ಪುಢಾರಿಗಳು ಮತ್ತು ರಾಜ್ಯ ಸರಕಾರ ನೌಕರರು. ಮೂರು ಭ್ರಷ್ಟತೆಯ ಆಕಾಶವನ್ನು ಮುಟ್ಟಿರುವ ನಾಗಾ ಉನ್ನತ ಅಧಿಕಾರಿಗಳು ಹಾಗೂ ಉನ್ನತ ರಾಜಕಾರಣಿಗಳು.

ಇವರ ಮೇಲೆ ಮತ್ತು ಕೆಳಗೆ ಸಿಕ್ಕಿಕೊಂಡಿರುವ ಹೊರಗಿನವರನ್ನು, ಈ ರೀತಿಯಾಗಿ ವಿಂಗಡಿಸಬಹುದು. ಒಂದು, ಪೂರ್ತಿ ರಾಜ್ಯದ ಆರ್ಥಿಕ ಸ್ಥಿತಿಯನ್ನು ಹಿಡಿತದಲ್ಲಿಟ್ಟುಕೊಂಡಿರುವ ವ್ಯಾಪಾರಿಗಳಾದ ಮಾರ್ವಾಡಿ, ಯು.ಪಿ. ಬಿಹಾರಿಗಳು, ಸ್ವಲ್ಪ ಮಟ್ಟಿಗೆ ಬೆಂಗಾಲಿಗಳು. ಎರಡು, ಚರ್ಚ್,ಆಸ್ಪತ್ರೆ ಮತ್ತು ಶಿಕ್ಷಣದ ಹೆಸರಿನಲ್ಲಿ ಇವರ ಇನ್ನೊಂದು ಅಂಗವಾಗಿರುವ ಮಳೆಯಾಳಿಗಳು ಮತ್ತು ಕ್ರೈಸ್ತ ಮಿಶನರಿಗಳು, ಮೂರು, ನಾಗಾಗಳ ಕೈಯಲ್ಲಿ ದಿನಾ ಗುದ್ದಿಸಿಕೊಂಡು ಕಾಲ ಕಳೆಯುತ್ತಿರುವ ಬಿಹಾರಿ, ಯು.ಪಿ. ಕೂಲಿಗಳು, ಲಾರಿ ಚಾಲಕರು, ಸೈಕಲ್ ರಿಕ್ಷಾದವರು ಮತ್ತು ಹೊರೆಯಾಳುಗಳು. ಕೊನೆಯದಾಗಿ ಸದ್ದುಗದ್ದಲವಿಲ್ಲದೆ ಹೊರಗಿನಿಂದ ವಲಸೆ ಬಂದು ಚಿಲ್ಲರೆ ವ್ಯಾಪಾರ, ಮಾಂಸ, ಪೆಟ್ಟಿಗೆ ಅಂಗಡಿ, ಬಟ್ಟೆ ಅಂಗಡಿ ಕೂಲಿನಾಲಿ ಮಾಡಿಕೊಂಡು ಸಂತಾನ ಹೆಚ್ಚಿಸುತ್ತಿರುವ ಬಂಗ್ಲಾ ದೇಶೀಯರು. ಇವರೆಲ್ಲರ ಮೇಲೆ ಸವಾರಿ ಮಾಡುತ್ತಿರುವ ನಾಗಾ ಉಗ್ರಗಾಮಿಗಳು. ದಿಮಾಪುರ ಸಾಕಷ್ಟು ದೊಡ್ಡ ವ್ಯಾಪಾರ ಕೇಂದ್ರವಾಗಿದ್ದು ಮಣಿಪುರ ಮತ್ತು ನಾಗಾಲ್ಯಾಂಡಿನ ಏಕೈಕ ರೈಲ್ವೆ ನಿಲ್ದಾಣ ಮತ್ತು ವಿಮಾನ ನಿಲ್ದಾಣವನ್ನು ಹೊಂದಿರುವ ನಗರ. ನಾಗಾಲ್ಯಾಂಡಿನಲ್ಲಿ ಶೇಕಡ 90 ರಷ್ಟು ಜನ ಕ್ರೈಸ್ತ ಮತಕ್ಕೆ ಸೇರಿದವರಾಗಿದ್ದು ಮಿಕ್ಕ ಜನ ಗುಡ್ಡಗಾಡುಗಳಲ್ಲಿ ಈಗಲೂ ನಗ್ನರಾಗಿ ಅರೆ ಕೊರೆ ಬಣ್ಣ ಬಣ್ಣದ ತುಂಡು ಬಟ್ಟೆಗಳನ್ನು ಕಟ್ಟಿಕೊಂಡು ನಿಸರ್ಗದ ಸೂರ್ಯದೇವರ ಭಕ್ತರಾಗಿದ್ದಾರೆ.

ಜಾತಿ ಮತಗಳ ಭೇದವಿಲ್ಲದೆ ಸ್ವಚ್ಛಂಡವಾಗಿ ನಲಿದಾಡುತ್ತಿದ್ದ ಈ ಬುಡಕಟ್ಟು ಜನಾಂಗಕ್ಕೆ ಮತ ಧರ್ಮಗಳ ಮತ್ತೇರಿದ್ದು ಮೊದಲು ಮತ್ತು ಎರಡನೆಯ ಮಹಾಯುದ್ಧದ ನಂತರವೇ ಎಂದು ತಿಳಿದು ಬರುತ್ತದೆ. ಈ ಬುಡಕಟ್ಟು ಜನ ಅಷ್ಟೇನು ಸ್ವಚ್ಛಂದ ಮತ್ತು ಪ್ರೀತಿಯಿಂದ ಕಾಲವನ್ನು ಕಳೆಯಲಿಲ್ಲ ಎನ್ನುವುದಕ್ಕೆ ಸಾಕಷ್ಟು ಸ್ವಾರಸ್ಯಕರ ಪುರಾವೆಗಳನ್ನು ಜನಗಳಿಂದ ಮತ್ತು ಪುಸ್ತಕಗಳಿಂದ ತಿಳಿದುಕೊಂಡ ನನಗೆ ಎದೆ ಜಿಲ್ಲೆನಿಸಿ. "ಸುದ್ದಿ ಸಂಗಾತಿಗೆ" ಒಂದು ಲೇಖನವನ್ನು ಕಳುಹಿಸಿ ಕೊಟ್ಟಿದ್ದೆ. ಆ ಲೇಖನ "ರುಂಡ ಚೆಂಡಾಡುವ ಬುಡಕಟ್ಟು ಜನ" ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟಗೊಂಡಿತ್ತು. ಇದೇ ಲೇಖನ ಮತ್ತೊಮ್ಮೆ ಇನ್ನಷ್ಟು ಸ್ವಾರಸ್ಯವಾಗಿ ಕನ್ನಡ ಪ್ರಭ ದಲ್ಲೂ ಪ್ರಕಟವಾಗಿತು.

ಈಗಿನ ಮೇಲಿನ ಅಸ್ಸಾಂನಲ್ಲಿ ನೆಲೆಯೂರಿರುವ ಆ ಪಂಗಡದ ಜನ ಮೂಲತಃ ಬರ್ಮಾದೇಶದ ಕಡೆಯಿಂದ ಚಿಂದ್‌ವಿನ್ ಮತ್ತು ಈರ್‌ವಾಡಿ ನದಿ ಕಣಿವೆಗಳ ಮೂಲಕವಾಗಿ ಲಗ್ಗೆ ಮಾಡಿ ಬಂದ ಜನರಾಗಿರುತ್ತಾರೆ. ಉತ್ತರ ಈಶಾನ್ಯದ ನೂರಾರು ಬುಡಕಟ್ಟು ಪಂಗಡಗಳ ಬಗ್ಗೆ ಇನ್ನೂ ಸರಿಯಾಗಿ ಸಂಶೋಧನೆಗಳು ನಡೆದಿಲ್ಲ. ನೀಗ್ರೋ (ರೇಸ್) ಪಂಗಡ ಮಾತ್ರ ಇಲ್ಲಿ ಕಾಣಿಸುವುದಿಲ್ಲ. ಮಿಕ್ಕ ಹಲವು ಮಿಶ್ರ ಪಂಗಡಗಳಿದ್ದರೂ ಅವರ ಮೂಲಗಳು ಯಾವುವು ? ಅವರು ಎಲ್ಲಿಂದ ಬಂದವರು ಎಂಬುದರ ಬಗ್ಗೆ ವಿಶೇಷವಾದ ಸಂಶೋಧನೆಗಳು ನಡೆಯಬೇಕಾಗಿದೆ. ಇಪ್ಪತ್ತು ಲಕ್ಷ ಜನ ಸಂಖ್ಯೆಯ ಈ ಪುಟ್ಟ ನಾಗಾಲ್ಯಾಂಡ್ ಒಂದರಲ್ಲೇ ಸುಮಾರು ಹೆಸರಿಸುವ ಇಪ್ಪತ್ತಾರು ಸ್ಥಳೀಯ ಬುಡಕಟ್ಟು ಭಾಷೆಗಳಿವೆ. ಒಂದು ಬುಡಕಟ್ಟಿನವರಿಗೆ ಇನ್ನೊಂದು ಬುಡಕಟ್ಟಿನವರ ಭಾಷೆ ಚೂರೂ ಅರ್ಥವಾಗುವುದಿಲ್ಲ ಯಾವ ಭಾಷೆಗೂ ಸ್ಕ್ರಿಪ್ಟ್ ಇಲ್ಲ. ಇಲ್ಲಿನ ಸಂಪರ್ಕ ಭಾಷೆಯನ್ನು (ಬ್ರೋಕನ್ ಅಸ್ಸಾಮಿ ಭಾಷೆ) ನಾಗಾ ಮೀಸ್ ಎನ್ನುತ್ತಾರೆ. ಆ ಭಾಷೆಯಲ್ಲಿ ಅಸ್ಸಾಮಿ, ಬೆಂಗಾಲಿ, ಹಿಂದಿ, ಒರಿಯಾ ಭಾಷೆಯ ಪದಗಳೆಲ್ಲವೂ ತುಂಬಿಕೊಂಡಿವೆ. ಮೇಲಿನ ನಾಲ್ಕು ಭಾಷೆಗಳೂ ಒಂದಕ್ಕೊಂದು ಸಂಬಂಧವಿರುವ ಭಾಷೆಗಳೆ ಆಗಿವೆ.

"ಆಓಂ" ಬುಡಕಟ್ಟು ಯೋಧರು ಈರ್ವಾಡಿ ನದಿ ಕಣಿವೆಗಳ ಮುಖಾಂತರ ಪ್ರಕೃತಿಯ ಅಡೆತಡೆಗಳ ಜತೆಗೆ ಸ್ಥಳೀಯ ಬುಡಕಟ್ಟು ಜನರನ್ನು ಎದುರಿಸಿ ಉತ್ತರ ಈಶಾನ್ಯದ ಕಡೆಗೆ ಬಂದವರು. ಅವರನ್ನು ಇವರು, ಇವರನ್ನು ಅವರು ಸಾಯಿಸುವುದು ನಡೆಯುತ್ತಲೇ ಇತ್ತು. ಯಾವ ಬುಡಕಟ್ಟು ಜನಕ್ಕೂ ಹೊಂದಾಣಿಕೆ ಇದ್ದಂತೆ ತೋರುವುದಿಲ್ಲ. ಎರಡೂ ಕಡೆಯವರು ಸೆರೆ ಸಿಕ್ಕವರನ್ನು ಬಹಳ ಕ್ರೂರವಾಗಿ ಹಿಂಸಿಸುತ್ತಿದ್ದರು ಎಂದು ತಿಳಿದು ಬರುತ್ತಿದೆ.

"ಆ ಓಂ" ಯೋಧರು ಸೆರೆ ಸಿಕ್ಕ ಸ್ಥಳೀಯರನ್ನು ತುಂಡು ತುಂಡಾಗಿ ಕತ್ತರಿಸಿ ಬೇಯಿಸಿ

ಅದೇ ಜನಗಳಿಗೆ ತಿನ್ನಿಸುತ್ತಿದ್ದರಂತೆ. ಇನ್ನು ಹೆಂಗಸರ ಬಗ್ಗೆ ಹೇಳತೀರದು. ಆಕ್ರಮಣ ನಡೆಸುವ ಜನಾಂಗಗಳು ಪ್ರತಿಭಟಿಸುವ ಸುತ್ತಮುತ್ತಲಿನ ಜನಾಂಗಗಳನ್ನು ಮುಗಿಸಿಯೇ ಮುಂದಕ್ಕೆ ಹೋಗಬೇಕಾಗಿತ್ತು. ಹಾಗಾಗಿ ಕೆಲವೊಮ್ಮೆ ಸ್ಥಳೀಯ ಬುಡಕಟ್ಟುಗಳು ಪೂರ್ಣವಾಗಿ ನಶಿಸಿಹೋಗುತ್ತಿದ್ದವು ಎನ್ನುವ ಉಲ್ಲೇಖಗಳೂ ಇವೆ.

ಸುದ್ದಿ ಸಂಗಾತಿ ಮತ್ತು ಕನ್ನಡ ಪ್ರಭದಲ್ಲಿ ಪ್ರಕಟವಾದ "ರುಂಡ ಚೆಂಡಾಡುವ ಬುಡಕಟ್ಟು ಜನ" ಎಂಬ ರೋಚಕ ಲೇಖನವನ್ನು ಇಲ್ಲಿ ಹಾಗೆಯೇ ನೀಡಲಾಗಿದೆ.

* * *

## ರುಂಡ ಚೆಂಡಾಡುವ ಬುಡಕಟ್ಟು ಜನ

ಉತ್ತರ ಈಶಾನ್ಯದ ಒಂದು ಭಾಗ. ಹಿಮಾಲಯದ ಪರ್ವತ ಪಂಕ್ತಿಗಳ ನಡುವೆ ಹಾವುಗಳಂತೆ ಹರಿದಾಡುವ ನದಿ ಝರಿಗಳು. ಸೂರ್ಯನು ಇಣುಕಿ ನೋಡಲಾಗದಷ್ಟು ದಟ್ಟ ಹಸಿರು ಕಾಡುಗಳು. ಮರಗಳಿಗೆ ಹೆಣೆದುಕೊಂಡ ಹೂವಿನ ಹಾರಗಳು. ತುತ್ತ ತುದಿಗಳಲ್ಲಿ ದೂರ ದೂರಕ್ಕೆ ಗುಂಪು ಗುಂಪು ಬಿದಿರಿನ ಮನೆಗಳು. ಮನೆಗಳ ಮೇಲೆ ಹೊದ್ದಿಸಿರುವ ಪಾಮ್ ಎಲೆಗಳು, ಬೆಳಕಿಗೆ ಸ್ಪಟಿಕ ಕಲ್ಲುಗಳಂತೆ ಹೊಳೆಯುತ್ತಿವೆ. ಒಳಗೆ ಒಬ್ಬರನ್ನೊಬ್ಬರು ತಬ್ಬಿಕೊಂಡು ಸರಸವಾಡುತ್ತಿರುವ ಯುವ ಜೋಡಿಗಳು.

ಯುವತಿ ಯುವಕನ ಕಣ್ಣಲ್ಲಿ ನೋಟವಿಟ್ಟು ಹೇಳುತ್ತಾಳೆ.

"ನಾಳೆ ನೀನು ಬರುವಾಗ ನಿನ್ನ ಎರಡೂ ಕೈಗಳಲ್ಲಿ ಕನಿಷ್ಠ ಐದಾರು ಯುವತಿಯರ ತಲೆಗಳಾದರೂ ಇರಬೇಕು" ಯುವಕನ ಕಣ್ಣಲ್ಲಿ ಬೆಳಕಿನ ಮಿಂಚುಗಳು ಸಿಡಿಯುತ್ತವೆ. ಮುಖ ಬಿಗಿದುಕೊಂಡು ಗಡಸಾಗುತ್ತದೆ.

"ಖಂಡಿತ ತರುತ್ತೇನೆ" ಎಂದೇಳಿ ಅವಳನ್ನೊಮ್ಮೆ ಗಟ್ಟಿಯಾಗಿ ತಬ್ಬಿಕೊಂಡು ಕರಗಿ ಬಿಡುತ್ತಾನೆ, ಅವಳ ಬೆಳದಿಂಗಳ ಮೈಯೊಳಕ್ಕೆ. ಆ ಜೋಡಿಯೇ ಅಲ್ಲ ಅವರೇ ಅಲ್ಲ. ಹೀಗೆ ಇಡೀ ಹಳ್ಳಿಯೇ ನಾಳೆಯ ಬೇಟೆಯ ಬಗ್ಗೆ ಮಾತನಾಡುತ್ತಿದೆ.

ಸುಮಾರು ದಿನಗಳಿಂದ ಹಳ್ಳಿಯ ಯುವಕರು ಬೇಟೆಯ ತಯಾರಿಗಾಗಿ ವಿಧವಿಧವಾದ ಕೆಲಸಗಳಲ್ಲಿ ಮುಳುಗಿದ್ದಾರೆ. ಕೆಲವರು ಚಿರತೆ, ಹುಲಿಗಳನ್ನು ಹಿಮ್ಮೆಟ್ಟಿದ್ದರೆ ಇನ್ನೂ ಕೆಲವರು ಜೇನು ಗೂಡುಗಳಿಗೆ ಕೈಯಾಕಿ ಜೇನು ಹುಳುಗಳನ್ನು ಕೈಯಲ್ಲಿ ಹಿಸುಕಿ ಹಿಸುಕಿ ಸಾಯಿಸುತ್ತಿದ್ದಾರೆ. ಮತ್ತೆ ಕೆಲವರು ಕಾಡುಕೋಳಿ, ಮುಳ್ಳುಹಂದಿ ಮುಂತಾದ ಪ್ರಾಣಿಗಳನ್ನು ಒಂದೇ ಏಟಿಗೆ ತುಂಡು

ತುಂಡಾಗಿಸುತ್ತಿದ್ದಾರೆ. ಹಳ್ಳಿಯ ಹಿರಿಯರು ಮಚ್ಚು ಈಟಿ ಮತ್ತು ವಿಷದ ಬಾಣಗಳನ್ನು ತಯಾರಿಸುತ್ತಿದ್ದಾರೆ.

* * *

ಸೂರ್ಯ ತನ್ನ ನೇಸರಗಳನ್ನು ಒಮ್ಮೆಲೆ ಚೆಲ್ಲಿಬಿಡಲು ಕಾತುರದಿಂದ ಪರ್ವತಗಳನ್ನು ಮೆಟ್ಟಿ ಬರುತ್ತಿದ್ದಾನೆ. ದಟ್ಟ ಹಸಿರು ಕಾಡುಗಳು ಇನ್ನೂ ಮಂಜಿನಲ್ಲಿ ತಮ್ಮ ಆಕೃತಿಗಳನ್ನು ಸರಿಯಾಗಿ ಪಡೆಯದೆ ಹೆಣಗಾಡುತ್ತಿವೆ.

ಒಮ್ಮೆಲೇ ಮುಗಿಲು ಮುಟ್ಟುವಂತೆ ವಿಕಾರವಾಗಿ ಕಿರುಚಿದ ಬೇಟೆಗಾರರು ಶತ್ರುಗಳ ಹಳ್ಳಿಯ ಸುತ್ತ ಒಣಗಿದ ಎಲೆಗಳ ಮೇಲೆ ಓಡುತ್ತಾ ಹಳ್ಳಿಯನ್ನು ಸುತ್ತುವರೆಯುತ್ತಾರೆ. ವಿಷಬಾಣಗಳು, ಈಟಿಗಳು ಮತ್ತು ಮಚ್ಚುಗಳು ದಾಹದಿಂದ ಅವರ ಕೈಗಳಲ್ಲಿ ರಕ್ತಕ್ಕಾಗಿ ಆತುರದಿಂದ ಗಾಳಿಯಲ್ಲಿ ತೇಲಾಡುತ್ತವೆ.

ಕಿರಿಚಿಕೊಂಡ ಶತ್ರುಗಳ ಹಳ್ಳಿಯಿಂದ ಹಸು, ಕೋಳಿ, ಹಂದಿ, ನಾಯಿಗಳು ದಿಕ್ಕು ತಿಳಿಯದೆ ಓಡತೊಡಗಿದರೆ ಹೆಂಗಸರು ಮಕ್ಕಳು ಅಡಗಿಕೊಳ್ಳುತ್ತಾರೆ. ಯುವಕರು, ಮುದುಕರು ತಮ್ಮ ತಮ್ಮ ಆಯುಧಗಳನ್ನು ಮಿಂಚಿನಂತೆ ತೆಗೆದುಕೊಂಡು ಬೇಟೆಗಾರರ ಮೇಲೆ ಎರಗುತ್ತಾರೆ. ಕೆಲವೇ ನಿಮಿಷಗಳಲ್ಲಿ ನೂರಾರು ಜನರು ತಲೆ ಕೈಕಾಲು ಕಿವಿ ತುಟಿ ಮೂಗುಗಳನ್ನು ಕಳೆದುಕೊಳ್ಳುತ್ತಾರೆ. ಸಮಯ ಸಿಕ್ಕಿದ ಬೇಟೆಗಾರರು ಪ್ರಾಣದ ಸಮೇತ ಕೆಲವರನ್ನು ಹಿಡಿದುಕೊಂಡು ವಿಜಯದಿಂದ ತಮ್ಮ ಹಳ್ಳಿಯ ಕಡೆಗೆ ನಡೆಯುತ್ತಾರೆ. ರುಂಡಗಳನ್ನು ಕಳೆದುಕೊಂಡ ಮುಂಡಗಳು ನೆಲದ ಮೇಲೆಲ್ಲಾ ಉರುಳಾಡುತ್ತವೆ. ಇಡೀ ಹಳ್ಳಿಯೇ ಸ್ಮಶಾನವಾಗಿ ರಕ್ತ ಹೆಪ್ಪುಗಟ್ಟಿ ನಿಲ್ಲುತ್ತದೆ.

* * *

ಇತ್ತ ಹಳ್ಳಿಯಲ್ಲಿ ಬರುವವರಿಗಾಗಿ ವಿಜಯೋತ್ಸವ ಕೊಂಡಾಡಲು ಹೆಂಗಸರು ಮಕ್ಕಳು ಮುದುಕರು ಆತುರದಿಂದ ಕಾಯುತ್ತಿರುತ್ತಾರೆ. ರಕ್ತತೊಟ್ಟಿಕ್ಕುವ ತಲೆಗಳನ್ನು, ಕೈಕಾಲುಗಳನ್ನು, ಕಿವಿ ತುಟಿಗಳನ್ನು ರಾಜಾರೋಷವಾಗಿ ಹಿಡಿದುಕೊಂಡು ವಿಜಯದ ಹಾಡುಗಳನ್ನು ಹಾಡುತ್ತಾ ಬರುತ್ತಾರೆ. ಒಬ್ಬರನ್ನೊಬ್ಬರು ತಬ್ಬಿಕೊಂಡು ಆನಂದದಿಂದ ಕುಣಿಯುತ್ತಾರೆ. ಮದುವೆಯಾಗದ ಯುವಕರು ತಮ್ಮ ಗೆಳತಿಯರ ಕಡೆಗೆ ನೋಡಿ ನಗುತ್ತಾರೆ. ರುಂಡಗಳನ್ನು ತರದವರು ನಾಚಿಕೆಪಡುತ್ತಾ ದೂರ ನಿಲ್ಲುತ್ತಾರೆ.

ಅಲ್ಲಿ ಶತ್ರುಗಳ ಹಳ್ಳಿಯಲ್ಲೂ ಸಿಕ್ಕಿಬಿದ್ದ ಬೇಟೆಗಾರರನ್ನು ಸಾಯಿಸಿ ವಿಜಯೋತ್ಸವ ನಡೆದಿರುತ್ತದೆ. ತಂದ ರುಂಡಗಳು ಮತ್ತಿತರ ಭಾಗಗಳನ್ನು ಕಲ್ಲಿನ ಮೇಲಿಟ್ಟು, ಬಣ್ಣ ಬಣ್ಣದ ಬಟ್ಟೆ, ಹಲವು ಪ್ರಾಣಿಗಳ ಚರ್ಮ, ಕೊಂಬು, ಕೂದಲು, ಹಕ್ಕಿಗಳ ರೆಕ್ಕೆಗಳನ್ನು ವಿಚಿತ್ರವಾಗಿ ಧರಿಸಿದ ಇಡೀ ಹಳ್ಳಿಯೇ ರುಂಡಗಳ ಸುತ್ತ ಕುಣಿದಾಡುತ್ತದೆ. ಅದರಲ್ಲೂ ರುಂಡಗಳನ್ನು ತಂದ ಯುವಕರು ವಿಶೇಷ ಉಡುಗೆ ಧರಿಸುತ್ತಾರೆ. ಎಷ್ಟು ತಲೆಗಳನ್ನು ಕತ್ತರಿಸಿ ತಂದಿರುವರೊ ಅಷ್ಟು ತಲೆಗಳನ್ನು (ಮರ ಅಥವಾ ಲೋಹದಲ್ಲಿ ಸಣ್ಣದಾಗಿ ಮಾಡಿ) ಕೊರಳಿಗೆ ನೇತು ಹಾಕಿಕೊಂಡಿರುತ್ತಾರೆ.

ಮಿಥುನ್ (ಹಸು ಎಮ್ಮೆಗೆ ಸೇರಿದ ತಳಿ) ಹಂದಿ, ನಾಯಿ, ಕೋಳಿ ಮುಂತಾದ ಕಾಡು ಪ್ರಾಣಿಗಳ ಮಾಂಸ ಮಡಕೆಗಳಲ್ಲಿ ಕುದಿಯುತ್ತಿರುತ್ತದೆ. ಜೊತೆಗೆ ಅಕ್ಕಿಯ ಬೀರು (Rice-Beer) ಕೂಡ ಇಳಿಯುತ್ತಿರುತ್ತದೆ.

ಹಳ್ಳಿಯ ಮುಖ್ಯಸ್ಥನು ಮುಂದೆ ಬಂದು ಅಕ್ಕಿಯ ಬೀರು, ಅನ್ನ ಕೋಳಿ ಮೊಟ್ಟೆಗಳನ್ನು ಒಡೆದು ತಲೆಗಳ ಮೇಲೆ ಸಿಂಪಡಿಸುತ್ತಾನೆ. ಸತ್ತವರ ತಲೆಯಲ್ಲಿರುವ ಕಣ್ಣುಗಳನ್ನು ಮೊನಚಾದ ಮುಳ್ಳಂದಿ ಮುಳ್ಳುಗಳಿಂದ ಚುಚ್ಚುತ್ತಾರೆ. (ಸತ್ತ ದೆವ್ವ ಕುರುಡಾಗಲೆಂದು) ಅನಂತರ ಆಕಾಶ ನೋಡುತ್ತಾ....

"ಓ ಸ್ವರ್ಗ ದೇವರೆ ...... ಈ ತಲೆಗಳ ವಾರಸುದಾರರೆಲ್ಲರನ್ನೂ ಕಳುಹಿಸು.... ಈ ಮಧು, ಅಕ್ಕಿ ಮತ್ತು ಮೊಟ್ಟೆಗಳನ್ನು ತಿನ್ನಲು ..... ದಯವಿಟ್ಟು ಕಳುಹಿಸು ಬೇಗ.... ಬೇಗ ..." ಎಂದು ಪ್ರಾರ್ಥಿಸುತ್ತಾರೆ.

ಸುತ್ತಲಿದ್ದವರು  ಕೂಡ ಒಮ್ಮೆಲೆ ಬಾಯಿಗಳು ಒಡೆದ್ಹೋಗುವಂತೆ ಅದೇ ಮಾತುಗಳನ್ನು ಆಕಾಶದ ಕಡೆಗೆ ನೋಡಿ ಕಿರುಚುತ್ತಾರೆ. ತಂದಿರುವ ಕೈಕಾಲುಗಳನ್ನು ಪ್ರಾಣದ ಸಮೇತ ತಂದಿದ್ದರೆ ಶತೃಗಳನ್ನು ಸಣ್ಣದಾಗಿ ಕತ್ತರಿಸಿ ತುಂಡುಗಳನ್ನು ಪ್ರತಿಯೊಬ್ಬರಿಗೂ ನೀಡುತ್ತಾರೆ. ಅವರು ಆ ತುಂಡುಗಳನ್ನು ಬಹಳ ಭದ್ರವಾಗಿ ಇಟ್ಟುಕೊಳ್ಳುತ್ತಾರೆ. ತಲೆಗಳನ್ನು ವಿಜಯದ ಟ್ರೋಫಿಗಳಾಗಿ ಮರಗಳ, ಮೇಲೆ ಮನೆಗಳ ಗೋಡೆಗಳ ಮೇಲೆ ನೇತಾಕುತ್ತಾರೆ.

ಎಲ್ಲರಿಗೂ  ಮಧು ಮಾಂಸ ಸರಬರಾಜಾಗುತ್ತದೆ. ಮತ್ತೆ ನೃತ್ಯ ನಡೆಯುತ್ತದೆ. ರಾತ್ರಿಯೆಲ್ಲಾ... ಇನ್ನೊಂದು ದಿನದ ಸೂರ್ಯನು ಬರುವವರೆಗೂ.

ಮೇಲೆ ಹೇಳಿದ ಆಟ ನಾಗಾಲ್ಯಾಂಡಿನ ಇಂಡೋ-ಮಂಗೋರಾಯ್ಡ್ ಬುಡಕಟ್ಟಿನ

ನಾಗಾಗಳು ನಡೆಸುವ ರುಂಡ ಚುಂಡಾಡುವ ಬೇಟೆಯ ಚಿತ್ರಣ. ಇದು ಸುಮಾರು 1958ರವರೆಗೂ ಬರ್ಮ-ನಾಗಾಲ್ಯಾಂಡಿನ ಹಳ್ಳಿಗಳಲ್ಲಿ ನಡೆಯುತ್ತಲೇ ಇತ್ತು.

* * *

ಮಾನವನ ಹುಟ್ಟು ಕ್ರೂರ ಎನ್ನುವಷ್ಟು ಮೊದಲಿನಿಂದಲೂ ಈ ಬೇಟೆ ನಡೆಯುತ್ತಿದೆ. ಪ್ರಪಂಚದ ಮೂಲೆ ಮೂಲೆಗಳಲ್ಲಿ ಅದರಲ್ಲೂ ಆದಿವಾಸಿಗಳಲ್ಲಿ ತಲೆಗಳ ಬೇಟೆ ಬಳಕೆಯಲ್ಲಿದೆ. ಆಫ್ರಿಕಾ, ದ. ಅಮೇರಿಕಾ, ಇಂಡೋನೇಷಿಯ (ನಾಗಾಗಳ ಮೂಲದವರು) ರಿಜಿರಿಸ್ತಾನ (ಈಗ ಪಾಕಿಸ್ತಾನದಲ್ಲಿದೆ) ದಲ್ಲೂ ಈ ಬೇಟೆ ಇನ್ನೂ ಬಳಕೆಯಲ್ಲಿದೆ ಎಂದು ತಿಳಿದು ಬರುತ್ತದೆ.

ನಾಗಾಲ್ಯಾಂಡಿನ ಮೋನ್, ಮೊಕಕ್‌ಚುಂಗ್ ಜಿಲ್ಲೆಗಳ ಕೆಲವು ಬುಡಕಟ್ಟಿನ ನಾಗಾಗಳು ಇದನ್ನು 1958ರವರೆಗೂ ನಡೆಸಿಕೊಂಡು ಬಂದಿದ್ದರು. ಎರಡನೆ ಮಹಾಯುದ್ಧದವರೆಗೆ ಒಂದು ರಸ್ತೆಕೂಡ ಇಲ್ಲದೆ, ನಾಗರೀಕತೆಯ ಗಾಳಿಯೂ ಸೋಂಕದಿದ್ದ ಇವರು ಕಾಡಿನಲ್ಲಿ ಪ್ರಾಣಿಗಳಂತೆ ಸ್ವಚ್ಛಂದವಾಗಿ ತಮ್ಮ ಜೀವನ ನಡೆಸಿದ್ದರು. ಇವರ ಮೂಢ ನಂಬಿಕೆಗಳ ಗೂಡು ಕೆದಕಿದಷ್ಟೂ ನಿಗೂಢ. ಈ ಬಗ್ಗೆ ಚರಿತ್ರೆ ಕೂಡ ತನ್ನ ತುಟಿಗಳನ್ನು ಸಲೀಸಾಗಿ ಬಿಚ್ಚುವುದಿಲ್ಲ. ನಾಗರೀಕತೆ ಬೆಳೆದಷ್ಟು ಮೂಢನಂಬಿಕೆಗಳು ಮಾಯವಾಗುತ್ತವೆ. ಆದರೆ ನಾಗಾಗಳಲ್ಲಿ ಹಾಗಾಗಲಿಲ್ಲ. ಎರಡನೆಯ ಮಹಾ ಯುದ್ಧದವರೆಗೂ ಕಾಡಿನಲ್ಲೇ ಇದ್ದ ಈ ಇಂಡೋ ಮಂಗೋಲಾಯ್ಡ್ ರೇಸ್‌ನ ಆದಿವಾಸಿ ಪಂಗಡಗಳು ನಾಗರೀಕತೆಯಿಂದ ದೂರವಾಗಿಯೇ ಉಳಿದಿದ್ದರು. ಆದುದರಿಂದಲೇ ಏನೋ ಅವರು ಈ ಗುಣಗಳನ್ನು ಇನ್ನೂ ಮುಂದುವರೆಸಿಕೊಂಡು ಬಂದಿದ್ದಾರೆ. ಮೇಲಿನ ಕೆಲವು ಜಿಲ್ಲೆಗಳಲ್ಲಿ ಇನ್ನೂ ಕೆಲವು ಕಡೆ ಪೂರ್ತಿಯಾಗಿ ನಗ್ನವಾಗೇ ಬದುಕುವ ಜನರಿದ್ದಾರೆ.

ಮನುಷ್ಯನ ಆತ್ಮ ಹಣೆಯ ಕೆಳಗೆ ತಲೆಯಲ್ಲಿರುತ್ತದೆ. ಮನುಷ್ಯನ ಎಲ್ಲಾ ಶಕ್ತಿಯುಕ್ತಿ ತಲೆಯಲ್ಲಿ ಅಡಗಿರುತ್ತದೆ. ಜೊತೆಗೆ ಅದು ಒಬ್ಬರಿಂದ ಇನ್ನೊಬ್ಬರಿಗೆ ಸೇರಿಕೊಳ್ಳುತ್ತದೆ. ಇದೇ ಆತ್ಮ ದೇಹದ ಎಲ್ಲಾ ಕೆಲಸಗಳನ್ನು ದಂಡಿಸುತ್ತದೆ. ಇದು ನಾಗಗಳ ನಂಬಿಕೆ.

ಒಂದು ಜನಾಂಗದ ಇಡೀ ಒಟ್ಟು ಮೊತ್ತದ ಆತ್ಮಶಕ್ತಿ ಕೂಡಿಕೆ ಆ ಪಂಗಡದ ಅಭಿವೃದ್ಧಿಯಾಗುತ್ತದೆ. ಪ್ರಕೃತಿ ವಿಕೋಪಗಳಾದ ಭೂಕಂಪ, ನೆರೆ, ಸಿಡಿಲು, ಬೆಂಕಿ, ಸಾಂಕ್ರಮಿಕ ರೋಗಗಳಿಂದ ಬೆಳೆ ನಾಶವಾದರೆ ತಮ್ಮ ಆತ್ಮ ಶಕ್ತಿ ಕಡಿಮೆಯಾಗಿದೆ ಎಂದೇ ಅವರ ನಂಬಿಕೆ. ಇದನ್ನು ಸರಿದೂಗಿಸಿಕೊಳ್ಳಬೇಕಾದರೆ ಬೇರೆ ಬುಡಕಟ್ಟಿನ ತಮ್ಮ ಜನಾಂಗದವರಲ್ಲದ ತಲೆಗಳನ್ನು ತರಬೇಕು.

ಕೆಲವು ಶತಮಾನಗಳ ಮುಂಚೆ ಈ ಆದಿವಾಸಿ ಪಂಗಡಗಳು ತಲೆಗಳನ್ನು

ಬೇಟೆಯಾಡುವುದರ ಜೊತೆಗೆ ಮನುಷ್ಯರನ್ನು ಭಕ್ಷಿಸುತ್ತಿದ್ದರು. ತಮ್ಮ ವಂಶಾಭಿವೃದ್ಧಿಗಾಗಿ, ಆರೋಗ್ಯವಂತ ಮಕ್ಕಳನ್ನು ಪಡೆಯುವುದಕ್ಕಾಗಿ ಶತ್ರುಗಳ ಮಾಂಸ ಮತ್ತು ರಕ್ತವನ್ನು ತಮ್ಮಲ್ಲಿ ಸೇರಿಸಿಕೊಂಡರೆ ಶತೃಗಳ ಶಕ್ತಿ ಸೇರಿಕೊಳ್ಳುತ್ತದೆ ಎಂದು ನಂಬಿದ್ದರು..

ಕರೆನ್ಸ್ ಎಂಬ ಬರ್ಮಾ ನಾಗಾಗಳು ನಂಬಿದಂತೆ ಮನುಷ್ಯರ ತಲೆಯಲ್ಲಿ ಶಕ್ತಿಯುತ ದ್ರವವೊಂದಿದ್ದು ಅದನ್ನು ನೆಲದಲ್ಲಿ ಚುಮುಕಿಸಿದರೆ ಮಣ್ಣು ಫಲವತ್ತಾಗಿ, ಬೆಳೆ ಹೆಚ್ಚಾಗಿ ಬೆಳೆಯುತ್ತದೆ. ಅಂಥಹ ಬೆಳೆ ತಿಂದ ಪ್ರಾಣಿಗಳು ದಷ್ಟ ಪುಷ್ಟವಾಗುತ್ತವೆ. ಇಂತಹ ಬೆಳೆ ಮತ್ತು ಪ್ರಾಣಿಗಳನ್ನು ತಿನ್ನುವ ಮನುಷ್ಯರ ವಂಶಾಭಿವೃದ್ಧಿ ಸಾಮರ್ಥ್ಯ ಹೆಚ್ಚುತ್ತೆಂದೆ ನಂಬುತ್ತಾರೆ. ಅದರಲ್ಲೂ ಯುವತಿಯರ ರಕ್ತ ಮಾಂಸ ಎಂದರೆ ಅಚ್ಚು ಮೆಚ್ಚು. ಇವರಿಂದಲೇ ವಂಶ ವೃದ್ಧಿಯಾಗುವುದಲ್ಲವೆ ?

ದೆವ್ವಗಳೆಂದರೆ ಪ್ರಾಣ ಬಿಡುವ ಈ ಆದಿವಾಸಿ ಪಂಗಡಗಳು ಸತ್ತವನು ಸಾಯಿಸಿದವನ ಸೇವಕನಾಗಿ ಬರುತ್ತಾನೆಂದು ನಂಬುತ್ತಾರೆ. ಆದುದರಿಂದ ಕನಿಷ್ಠ ಒಬ್ಬ ಮನುಷ್ಯ ಒಬ್ಬ



ನಾಗಾಗಳು ಒಂದು ಸಾಂಸ್ಕೃತಿಕ ಉಡುಗೆಯಲ್ಲಿ

ಮನುಷ್ಯನನ್ನಾದರೂ ಸಾಯಿಸಿದರೆ, ಸತ್ತ ಮೇಲೆ ಒಳ್ಳೆ ಸೇವೆ ಮಾಡಲು ಸೇವಕ ದೊರಕುತ್ತಾನೆಂಬ ಪ್ರತೀತಿ.

ತಲೆ ಬೇಟೆಯಾಡಲು ಇನ್ನೂ ಕೆಲವು ಕಾರಣಗಳಿವೆ. ಕೆಲವೊಂದು ಸಲ ಎರಡು ಹಳ್ಳಿಗಳು ಶಾಂತಿಕೋರಿದ್ದೆ ಯಾದರೆ ಯಾವ ಹಳ್ಳಿ ಎಷ್ಟು ಜಾಸ್ತಿ ತಲೆಗಳನ್ನು ತೆಗೆದಿದ್ದಾರೋ ಅಷ್ಟು ತಲೆಗಳನ್ನು ಸೇವಕರ ಮುಖಾಂತರ ಇನ್ನೊಂದು ಹಳ್ಳಿ ಕೊಡುತ್ತದೆ. ಕೊಟ್ಟ ಸೇವಕರನ್ನು ತಲೆಗಳ ಬೇಟೆ ನಡೆದ ಜಾಗದಲ್ಲೇ ಸಾಯಿಸಿ ಊರಿಗೆ ವಿಜಯದಿಂದ ಮರಳುತ್ತಾರೆ. ಸಾಂಕ್ರಮಿಕ ರೋಗಗಳು ಬಂದಾಗ ತಲೆಗಳನ್ನು ಊರಿಗೆ ತಂದರೆ ರೋಗ ನಿವಾರಣೆಯಾಗುತ್ತದೆಂದು ಬೇಟೆಯಾಡುತ್ತಾರೆ. ಬಿತ್ತನೆ ಮುನ್ನ ಸೇವಕರನ್ನು ಬಲಿಕೊಡುತ್ತಾರೆ. ಹಳ್ಳಿಯ ಮುಖ್ಯಸ್ಥನ ಮಗನಿಗೆ ಅಧಿಕಾರ ವಹಿಸಿಕೊಡುವ ಸಮಯದಲ್ಲೂ ಸೇವಕನನ್ನು ತಂದು ಕಟ್ಟಿ ಹಾಕಿ ಯುವ ಮುಖ್ಯಸ್ಥನ ಕೈಯಲ್ಲಿ ಕಡಿಸಿ, ಸಣ್ಣ ತುಂಡುಗಳನ್ನು ಮಾಡಿ ನೆರೆದ ಎಲ್ಲರಿಗೂ ಹಂಚುತ್ತಾರೆ.

* * *

## 15 ವಿಮಾನವೇರಿ

ಡಿಸೆಂಬರ್ ತಿಂಗಳು ಹತ್ತಿರ ಬರುತ್ತಿದ್ದಂತೆ ಎಲ್ಲಾ ಫೀಲ್ಡ್ ಅಧಿಕಾರಿಗಳು ಮಣಿಪುರ ಮತ್ತು ನಾಗಾಲ್ಯಾಂಡಿನ ಮೂಲೆ ಮೂಲೆಗೆ ಹೊರಡಲು ತಯಾರಿ ಮಾಡಿಕೊಳ್ಳುತ್ತಿದ್ದಾರೆ. ನಾನು ಮತ್ತು ಶಾಹು ಕೊಹಿಮಾ ಜಿಲ್ಲೆಯಲ್ಲಿ ಭೂ ವಿಜ್ಞಾನದ ಬಗ್ಗೆ ಸಂಶೋಧನೆ ನಡೆಸಬೇಕಿತ್ತು. ಲಖನೌದಿಂದ ನೇರವಾಗಿ ದಿಮಾಪುರಕ್ಕೆ ಬಂದಿದ್ದ ನಾವು ಫೀಲ್ಡ್‌ಗೆ ಹೋಗುವುದಕ್ಕಿಂತ ಮುಂಚೆ ಕೆ.ಜಿ.ಎಫ್.ಗೆ ಹೋಗಲು ಎಲ್.ಟಿ.ಸಿ. ಪಡೆದುಕೊಂಡು ತಯಾರಾದೆವು. ಮಳೆಗಾಲ ಅಲ್ಲದಿದ್ದರೂ ಕರಿ ಮೋಡಗಳು ಇದ್ದಕ್ಕಿದ್ದಂತೆ ಗುಂಪುಕಟ್ಟಿಕೊಂಡು ಬೆಟ್ಟಗುಡ್ಡಗಳನ್ನು ಸುತ್ತುವರಿದು ವಿಮಾನ ಪ್ರಯಾಣಕ್ಕೆ ತೊಂದರೆ ಪಡಿಸುತ್ತಿದ್ದವು. ಎಲ್.ಟಿ.ಸಿ. ಪಡೆದುಕೊಂಡಿದ್ದ ನಾವು ಕಲ್ಕತ್ತಾವರೆಗೂ ವಾಯುದೂತ ವಿಮಾನದಲ್ಲಿ ಟಿಕೆಟ್‌ಗಳನ್ನು ಕಾಯ್ದಿರಿಸಿ ಅಲ್ಲಿಂದ ಬೆಂಗಳೂರಿಗೆ ರೈಲಿನಲ್ಲಿ ಪ್ರಯಾಣ ಮಾಡಲು ತೀರ್ಮಾನಿಸಿದೆವು.

ಹೊಸದಾಗಿ ಮದುವೆಯಾಗಿ ಬಂದಿದ್ದ ಆನಂದಮೂರ್ತಿ ಎಲ್ಲರಿಗೂ ಔತಣ ನೀಡಲಿದ್ದ ದಿನವೂ, ನಾವು ದಿಮಾಪುರ ಬಿಡಲಿದ್ದ ದಿನವೂ ಆಕಸ್ಮಿಕವಾಗಿ ಒಂದೇ ದಿನ ಆಗಿಬಿಟ್ಟಿತು. ನಾವು ಮೊದಲ ಬಾರಿಗೆ ವಿಮಾನ ಪ್ರಯಾಣ ಮಾಡಲಿರುವುದರಿಂದ ಸಾಕಷ್ಟು ಪ್ರಚಾರವನ್ನು  ಮಾಡಿಬಿಟ್ಟಿದ್ದೆವು. ಎಲ್ಲರೂ ಪ್ರಯಾಣವನ್ನು ಮುಂದೂಡುವಂತೆ ಹೇಳುತ್ತಿದ್ದರು. ಔತಣವನ್ನು ಬಿಡುವುದೋ ವಿಮಾನವನ್ನು ಬಿಡುವುದೋ ತೀರ್ಮಾನಿಸಲಾಗದೆ ಒಂದೆರಡು ದಿನ ಪೇಚಿಗೆ ಸಿಲುಕಿ ದಿನಾ ಬೆಳಿಗ್ಗೆ ಸಾಯಂಕಾಲ ಮೋಡಗಳನ್ನು ನೋಡುವುದೇ ಒಂದು ಕೆಲಸವಾಯಿತು.

ವಿಮಾನ ಕಲ್ಕತ್ತದಿಂದ ಇಂಫಾಲ್ ಮೇಲೆ ದಿಮಾಪುರಕ್ಕೆ ಬಂದು ಅಲ್ಲಿಂದ ನೇರವಾಗಿ ಕಲ್ಕತ್ತ ತಲುಪುತಿತ್ತು. ವಾಯುದೂತ ವಿಮಾನವೆಂದರೆ ಸಾಕು, ಎಲ್ಲರೂ ನಗುತ್ತಿದ್ದರು. ಕೆಲವರಂತೂ ಆ ವಿಮಾನವನ್ನು ನೆನೆಸಿಕೊಂಡಿದ್ದೇ ಹೌಹಾರಿ ಬಿಡುತ್ತಿದ್ದರು. ಆಕಾಶದಲ್ಲಿ ಹಾರುತ್ತಿರುವಾಗ ಬಾಗಿಲು ಅದೇ ತೆರೆದುಕೊಂಡು ಹಿಡಿತ ತಪ್ಪಿದ ಗಾಳಿಪಟದಂತೆ ಹಾರುತ್ತಿತ್ತಂತೆ. ಆಗ ಯಾರಾದರೂ ಬಾಗಿಲು ಮುಚ್ಚಿ ಹಿಡಿದುಕೊಳ್ಳಬೇಕಂತೆ. ಲ್ಯಾಟ್ರಿನ್ ಕೆಲವೊಮ್ಮೆ ಆಟೋಮ್ಯಾಟಿಕ್ ಲಾಕ್ ಆಗಿ ಬಾಗಿಲು ತಪ್ಪುತ್ತ ವಾಸನೆಯಲ್ಲೇ ಕೊಳೆಯಬೇಕಂತೆ ಹೀಗೆ...

ಒಂದು ದಿನ ಸಾಯಂಕಾಲ ಆನಂದ ಮೂರ್ತಿಯನ್ನು ಅದೇ ವಾಯುದೂತ್‌ನಲ್ಲಿ (ಮದುವೆ ಆಗುವುದಕ್ಕೆ) ಕಲ್ಕತ್ತಾಗೆ ಹತ್ತಿಸಿ ಮನೆಗೆ ವಾಪಸ್ ಬಂದಿದ್ದೆ. ವಿಮಾನವು ಆಕಾಶಕ್ಕೆ ಏರಿ ಕಲ್ಕತ್ತಾ ಕಡೆಗೆ ಹಾರಿ ಹೋಯಿತು. ರಾತ್ರಿ ಒಂಬತ್ತು ಘಂಟೆಗೆ ಅದೇ ಆನಂದ ಮೂರ್ತಿ ಸರ್ಕ್ಯುಲರ್ ರಸ್ತೆಯಲ್ಲಿ ಒಬ್ಬನೆ "ದೀ ಸ್ಪೈ ಹು ಲೌಡ್ ಮಿ" ಚಿತ್ರದಲ್ಲಿನ ವಿಲನ್ ಬಂದಂತೆ ನಡೆದು ಬರುತ್ತಿದ್ದಾನೆ.

"ಹರೆ, ಮೂರ್ತಿ ಇದೇಮಿ"? ಎಂದಿದ್ದೆ,

"ಸಾರ್, ಬದುಕಿ ಪೋಯಾನು. ಸಾರ್, ಈ ರೋಜು, ಅಮ್ಮ! ನಮ್ಮೂರಿಗೆ ಬೇಕಾದರೆ ನಡೆದೆ ಹೋಗಿಬಿಡುತ್ತೇನೆ, ಆದರೆ ಆ ಕುಪ್ಪೆ ವಿಮಾನದಲ್ಲಿ ಮಾತ್ರ ಎಂದೂ ಹೋಗುವುದಿಲ್ಲ, ಸಾರ್" ಎಂದು ಗೋಳಾಡಿಬಿಟ್ಟ. ಆಕಾಶಕ್ಕೆ ಹಾರಿದ ವಿಮಾನದಲ್ಲಿ ಏನೋ ತೊಂದರೆ ಕಾಣಿಸಿಕೊಂಡು ಸುಮಾರು ಕಾಲು ಗಂಟೆ ಅಂತರಿಕ್ಷಾದಲ್ಲಿ ವಿಲಿ ವಿಲಿ ಎಂದು ಒಮ್ಮೆ ಸತ್ತು ಹೋಗಿ ಮತ್ತೆ ಅದೇನು ಅದೃಷ್ಟವೋ ಕೊನೆಗೆ ವಿಮಾನಗದ್ದೆಯಲ್ಲಿ ಬಿದ್ದು ಎಲ್ಲರೂ ಮಸಣದಿಂದ ಎದ್ದು ಬಂದಿದ್ದರಂತೆ.

ಆ ದಿನ ಬೆಳಗ್ಗೆ ಎದ್ದಿದ್ದೆ ಆಕಾಶದ ಕಡೆಗೆ ನೋಡಿದೆ. ಬಿಸಿಲಿನ ಪ್ರಖರವೇನೋ ಜೋರಾಗಿತ್ತು. ಅದರ ಜೊತೆ ಜೊತೆಯಲ್ಲೇ ನೀಲಾಕಾಶದ ಕೆಳಗೆ ಕಪ್ಪು ಮೋಡಗಳು ಒಂದು ಪಿಂಡಾಗಿ ಚಲಿಸುತ್ತಿವೆ. ವಿಮಾನ ಸಾಯಂಕಾಲ 4.30 ಕ್ಕೆ ದಿಮಾಪುರ ಬಿಡಲಿದ್ದು ನಾವು ಕನಿಷ್ಠ ಅರ್ಧ ಗಂಟೆ ಮುಂಚಿತವಾಗಿ ವಿಮಾನ ನಿಲ್ದಾಣ ತಲುಪಬೇಕಿತ್ತು.

ನೋಡು ನೋಡುತ್ತಿದ್ದಂತೆ ಕಪ್ಪು ಮೋಡಗಳು ಹನಿಗಳನ್ನು ಉದುರಿಸಲಾರಂಭಿಸಿದವು. ನಾವಿರುವ ಸ್ಥಳಕ್ಕೂ ವಿಮಾನ ನಿಲ್ದಾಣಕ್ಕೂ ಸುಮಾರು ಎಂಟು ಕಿ.ಮೀ. ದೂರವಿದೆ. ಸುಶೀಲಳಿಗೆ ತಯಾರಾಗಿರುವಂತೆ ಹೇಳಿ ಬುಕ್ಕಿಂಗ್ ಕಛೇರಿಯಲ್ಲಿ ವಿಮಾನ ಬರುತ್ತದೋ ಇಲ್ಲವೋ ತಿಳಿದುಕೊಂಡು ಬರಲು ಹೊರಟೆ. ಕಲ್ಕತ್ತಾ ಮತ್ತು ದಿಮಾಪುರ ಮಧ್ಯದ ದಾರಿ ಹೆಚ್ಚೆಚ್ಚು ಪರ್ವತ ಶಿಖರಗಳಿಂದ ಕೂಡಿದ್ದು ವಾತಾವರಣ ತುಸುವೆ ಕೆಟ್ಟರೂ ಸಾಕು, ವಿಮಾನ ಪ್ರಯಾಣ ಹೆಚ್ಚು ಅಪಾಯಕರವಾಗಿ ಪರಿಣಮಿಸುತಿತ್ತು. ಆದುದರಿಂದ ಈ ದಾರಿಯಲ್ಲಿ ಮಳೆಗಾಲದ ದಿನಗಳಲ್ಲಿ ವಿಮಾನಗಳ ಸಂಚಾರ ಸಾಮಾನ್ಯವಾಗಿ ಸ್ಥಗಿತವಾಗಿ ಬಿಡುತ್ತದೆ.

ಬುಕ್ಕಿಂಗ್ ಕಛೇರಿಗೆ ಹೋಗಿ ವಿಮಾನದ ಬಗ್ಗೆ ಕೇಳಿದಾಗ,

"ನಮಗೆ ಇನ್ನೂ ಯಾವ ಸಂದೇಶವೂ ಬಂದಿಲ್ಲ, ಯಾವುದಕ್ಕೂ ವಿಮಾನ ನಿಲ್ದಾಣ ತಲುಪಿ ಬಂದರೆ ಹತ್ತಿಕೊಳ್ಳಿ ಇಲ್ಲದಿದ್ದರೆ ನಾವೆ ನಿಮ್ಮನ್ನ ಮನಗೆ ತಲುಪಿಸುತ್ತೇವೆ" ಎಂದರು.

ಆಕಾಶದ ಕಡೆಗೆ ನೋಡಿ,

"ನಾಳೆಗೆ ಕಾಯ್ದಿರಿಸಿ" ಎಂದೆ. ಎರಡೂವರೆ ಟಿಕೇಟಿನಮೇಲೆ ಶೇಕಡ 10ರಷ್ಟು ಹಣ ಹೆಚ್ಚಿಗೆ ಪಡೆದುಕೊಂಡು, ಅಂದಿನ ಟಿಕೆಟ್‌ಗಳನ್ನು ರದ್ದುಮಾಡಿ ಮುಂದಿನ ದಿನಕ್ಕೆ ಟಿಕೆಟ್ ಕೊಟ್ಟರು. ಟಿಕೆಟ್ ತೆಗೆದುಕೊಂಡು ಹೊರಗೆ ಬಂದಾಗ ದಾಸ್ ಸ್ಕೂಟರಲ್ಲಿ ನನ್ನನ್ನು ಹುಡುಕುತ್ತಾ ಬಂದಿದ್ದರು.

"ಹರೇ ಸ್ವಾಮಿ, ಅಲ್ಲಿ ನಿನಗಾಗಿ ಬಾಭೀಜಿ ಕಾಯುತ್ತಿದ್ದಾರೆ, ವಿಮಾನ ಹೊರಡುವ ವೇಳೆಯಾದರೂ ನೀನು ಇಲ್ಲೇ ಇದ್ದೀಯಲ್ಲ" ಎಂದರು.

"ಇಲ್ಲ, ಈ ದಿನ ಹೋಗುವುದಿಲ್ಲ. ಟಿಕೆಟ್‌ಗಳನ್ನು ರದ್ದುಮಾಡಿ ನಾಳೆಗೆ ಕಾಯ್ದಿರಿಸಿದ್ದೇನೆ" ಎಂದೆ.

"ಹೌದಾ, ಆಯಿತು ನಡಿ. ಮೂರ್ತಿಯ ಔತಣ ಅಟೆಂಡ್ ಮಾಡೋಣ" ಎಂದರು. ಸ್ಕೂಟರ್ ಹಿಂದೆ ಕುಳಿತುಕೊಂಡೆ. ಸ್ವಲ್ಪ ಹೊತ್ತಿನ ನಂತರ ವಿಮಾನ ನಿಲ್ದಾಣದ ಕಡೆಯಿಂದ ಮೇಲೇರಿ ಕಲ್ಕತ್ತಾ ಕಡೆಗೆ ಸದ್ದು ಮಾಡುತ್ತಾ ಆಕಾಶದಲ್ಲಿ ಹೋಗುತ್ತಿದೆ. ದಾಸ್ ಮೇಲೆ ನೋಡಿ ನಕ್ಕ. ತುಸು ಮುಂಜಾಗ್ರತೆ ಇಲ್ಲದ ಕಾರಣ ನೂರಾಐವತ್ತು ರೂಪಾಯಿಗಳ ಕಡಿತವಾಯಿತಲ್ಲ, ಎಂದು ಪಶ್ಚಾತ್ತಾಪ ಪಟ್ಟುಕೊಂಡೆ.

ಸಮಯ ಸಾಯಂಕಾಲ ಎಂಟುಗಂಟೆ ಆಗುತ್ತಾ ಬಂದಿದ್ದು ಗಂಡಸರು ಆದಷ್ಟು ಒಳ್ಳೆಯ ಮತ್ತು ಬೆಚ್ಚನೆಯ ಬಟ್ಟೆಗಳನ್ನು ಧರಿಸಿ, ಹೆಂಗಸರು ಸಾಧ್ಯವಾದಷ್ಟು ಬಣ್ಣಬಣ್ಣದ ಉಡುಪುಗಳನ್ನು ತೊಟ್ಟು ಸಾಕಷ್ಟು ಮೇಕಪ್ ಮಾಡಿಕೊಂಡು ಒಬ್ಬೊಬ್ಬರಾಗಿ ಬರುತ್ತಿದ್ದಾರೆ. ಮನಸ್ಸಿಗೆ ಉಲ್ಲಾಸ ಬರಿಸುವಂತಹ ತಂಪಾದ ಸಾಯಂಕಾಲ. ಉಣ್ಣೆ ಬಟ್ಟೆಗಳಲ್ಲಿ ಅಡಗಿಕೊಂಡಿರುವ ಪುಟ್ಟ ಕೂಸುಗಳು ತಾಯಿತಂದೆಯರ ಕಂಕುಳಿಂದಲೇ ಪಿಳಿಪಿಳಿ ಕಣ್ಣುಗಳಬಿಟ್ಟು ಆಶ್ಚರ್ಯದಿಂದ ಸುತ್ತಲೂ ನೋಡುತ್ತಿದ್ದರೆ, ತೊದಲು ನುಡಿಯುವ ಮಕ್ಕಳು ನಾಚಿಕೆಯಿಂದ ತಮ್ಮ ತಂದೆತಾಯಿಯರನ್ನು ಸುತ್ತುವರೆದಿವೆ. ದೊಡ್ಡ ಮಕ್ಕಳು ತಮ್ಮ ತಮ್ಮ ವಯಸ್ಸಿಗೆ ತಕ್ಕಂತೆ ಬಳಗಗಳನ್ನು ಕಟ್ಟಿಕೊಂಡು ಆಟವಾಡಿಕೊಳ್ಳುತ್ತಿದ್ದಾರೆ.

ಸಹೋದ್ಯೋಗಿಗಳ ಮೂರು ಮನೆಗಳು ಒಂದೇ ಕಾಂಪೌಂಡಿನಲ್ಲಿ ಇದ್ದುದ್ದರಿಂದ

ಹೆಂಗಸರೆಲ್ಲಾ ಒಂದು ಮನೆ ಸೇರಿ ತಮ್ಮ ಮುಕ್ತಾಯವಿಲ್ಲದ ಮಾತುಗಳನ್ನು ಆಗಲೇ ಶುರುಮಾಡಿದ್ದಾರೆ, ಎದುರಿಗಿದ್ದ ಇನ್ನೊಂದು ಮನೆಯಲ್ಲಿ ಗಂಡಸರು ಅದೇ ರೀತಿಯ ಮಾತುಗಳಲ್ಲಿ ತೊಡಗಿದ್ದಾರೆ. ಒಂದಷ್ಟು ಜನ ಔತಣದ ಏರ್ಪಾಟುಗಳನ್ನು ನೋಡಿಕೊಳ್ಳುತ್ತಿದ್ದಾರೆ. ಇನ್ನಷ್ಟು ಅಡಿಗೆ ತಜ್ಞರು ಪಲಾವ್, ಮಾಂಸ ಇನ್ನಿತರ ಭಕ್ಷ್ಯಗಳ ತಯಾರಿಯಲ್ಲಿ ಮುಳುಗಿದ್ದಾರೆ. ಒಂದು ಕಡೆ ಟ್ಯೂನ್ ವನ್ ಹಾಡುಗಳು, ಇನ್ನೊಂದು ಕಡೆ ವಿ.ಸಿ.ಪಿ. ಮತ್ತು ಒಂದು ಕಡೆ ಚೇಷ್ಟೆ, ತಮಾಷೆ, ನಗು. ಒಟ್ಟಿನಲ್ಲಿ ಒಂದು ರಮ್ಯ ಸಾಯಂಕಾಲ ಮನೋಹರವಾಗಿ ಪ್ರಾರಂಭಗೊಂಡಿದೆ.

ಮಕ್ಕಳು ಮತ್ತು ಹೆಂಗಸರಿಗೆ ಬೋರೋಸಿಲ್ ಗ್ಲಾಸುಗಳಲ್ಲಿ ಬಣ್ಣ ಬಣ್ಣದ ರಸಪಾ ಪೂರೈಕೆ ಆಗುತ್ತಿದ್ದಂತೆ. ಇನ್ನೊಂದು ಕಡೆ ಬೀರು ಬ್ರಾಂದಿ ಬಾಟಲ್‌ಗಳು ನೊರೆಯನ್ನು ಉಕ್ಕಿಸುತ್ತ ಗ್ಲಾಸ್‌ಗಳಲ್ಲಿ ತುಂಬಿಕೊಳ್ಳುತ್ತಿವೆ. ಒಂದಷ್ಟು ಜನ ತಮ್ಮ ಅರ್ಧಾಂಗಿಯರ ಹಾಜರಿಯ ಬಗ್ಗೆ ಆತಂಕವನ್ನು ವ್ಯಕ್ತ ಪಡಿಸುತ್ತ ಮುಂದಿನ ಆಗು ಹೋಗುಗಳ ಬಗ್ಗೆ ಒಳಗೊಳಗೆ ಅವಲೋಕನ ಮಾಡಿಕೊಳ್ಳುವಂತೆ ತೋರುತ್ತಿದ್ದಾರೆ ಇನ್ನಷ್ಟು ಜನ ನಿರಾಳವಾಗಿ ಗ್ಲಾಸುಗಳು ಕೈಗೆ ಬರುವುದಕ್ಕಿಂತ ಮುಂಚೆಯೇ ಪುಳಕಿತರಾಗಿ ಬಿಟ್ಟಿದ್ದಾರೆ.

ಕೊಠಡಿಯೊಳಕ್ಕೆ ಆಗಾಗ ಇಣುಕು ನೋಟ ಬೀರುತ್ತಿದ್ದ ಹೆಂಗಸರು, ಗಂಡಸರಿಗೆ ಎಚ್ಚರಿಕೆಯಿಂದ ನಡೆದುಕೊಳ್ಳುವಂತೆ ಕಣ್ಣುಗಳಲ್ಲೇ ಸನ್ನೆ ಮಾಡಿ, ಹದ್ದು ಮೀರಿದರೆ ಮುಂದೆ ಸಂಭವಿಸುವ ಅನಾಹುತಗಳಿಗೆ ತಾವು ಜವಾಬ್ದಾರರಲ್ಲ ಎನ್ನುವಂತೆ ಸಿಗ್ನಲ್‌ಗಳನ್ನು ಕೊಡುತ್ತಿದ್ದಾರೆ. ನಾಗಾಲ್ಯಾಂಡಿನಲ್ಲಿ ಮದ್ಯದ ಮೇಲೆ ತೆರಿಗೆ ಇಲ್ಲದ ಕಾರಣ ಎಲ್ಲಾ ಬ್ರಾಂಡ್‌ಗಳೂ ಬಹಳ ಕಡಿಮೆ ಬೆಲೆಗೆ ಸಿಗುತ್ತಿದ್ದು ಕುಡುಕರಿಗೆ ಇದು ಉತ್ತರ ಈಶಾನ್ಯದ ಗೋವಾ ಆಗಿದೆ. ಒಂದು ಒಳ್ಳೆ ಬೀರ್ ಬಾಟಲ್ ಕೇವಲ ಏಳೆಂಟು ರೂಪಾಯಿಗಳಾದರೆ ಫುಲ್ ಬಾಟಲ್ ಬ್ರಾಂದಿ, ವಿಸ್ಕಿ, ಕೇವಲ ನಲವತ್ತು ಐವತ್ತು ರೂಪಾಯಿಗಳು. ಮಿಲಿಟರಿ ಕ್ಯಾಂಟಿನ್‌ಗಳಲ್ಲಿ ಕೇಳಿದಷ್ಟು ಸಿಗುತ್ತದೆ.

ಆನಂದಮೂರ್ತಿ ಮತ್ತು ಶ್ರೀಮತಿ ಮೂರ್ತಿಯನ್ನು ಜೋಡಿಯಾಗಿ ನಿಲ್ಲಿಸಿದ ದಾಸ್, ಇಬ್ಬರ ಕೈಗಳಿಗೂ ಒಂದೊಂದು ಗ್ಲಾಸ್ ಕೊಟ್ಟು, ಹೊಸ ಜೋಡಿ ಎಷ್ಟೇ ಕೇಳಿಕೊಂಡರೂ ಬಿಡದೆ ಇನ್ನಷ್ಟು ಜನ ಇಬ್ಬರನ್ನೂ ಪ್ರೇರೇಪಿಸಿ ಒಂದೊಂದು ಗುಟುಕು ಕುಡಿಸಿಯೇ ಬಿಟ್ಟರು. ಆಗ ಇಬ್ಬರನ್ನು ನೋಡಬೇಕಿತ್ತು. ಶ್ರೀಮತಿ ಮೂರ್ತಿ ನಾಚಿ ನೀರಾಗಿ

ಕರ್ಪೂರದಂತೆ ಕರಗಿ ಹೋದರು. ಒಂದು ಸುಸಂಸ್ಕೃತ ಹೆಣ್ಣು, ಗಂಡುಗಳ ಮಧ್ಯೆ ಕಾಕ್‌ಟೈಲ್ ಕುಡಿಯುವುದೆಂದರೆ ತಮಾಷೆಯೇ?

ಈಗ ಎಲ್ಲರೂ ತಮಗೆ ಇಷ್ಟವಾದ ಬ್ರಾಂಡ್‌ಗಳನ್ನು ಸುರಿದುಕೊಂಡು ಖಾರದ ಜೊತೆಗೆ ಏರಿಸುತ್ತಾ ಹೋದರೆ, ಮಧ್ಯೆ ಮಧ್ಯೆದಲ್ಲಿ ಕೆಲವರು ತಮ್ಮ ಎಲ್ಲೆಗಳನ್ನು ಕಂಡುಕೊಂಡು ಅಡ್ಡಗೋಡೆಗಳ ಮೇಲೆ ನಿಂತುಕೊಳ್ಳುತ್ತಿದ್ದರು. ಮೂರ್ತಿಯನ್ನು ಮಧ್ಯೆದಲ್ಲಿ ಕೂರಿಸಿಕೊಂಡ ಕೆಲವು ಅನುಭವಿಗಳು ಮೂರ್ತಿಗೆ ಉಪದೇಶಗಳನ್ನು ನೀಡುತ್ತಿದ್ದಾರೆ.

"ನಿನ್ನನ್ನು ನಾವೇನು ದಿನಾಗಲೂ ಕುಡಿ ಅಂತ ಹೇಳುತ್ತೇವೆಯೇ.. ? ಈ ದಿನ ನಮ್ಮನ್ನು ನಿರಾಶೆ ಮಾಡಬೇಡ ಶ್ರೀಮತಿ ಮೂರ್ತಿಗೆ ನಿನ್ನನ್ನು ತಡೆಯುವುದಕ್ಕೆ ಯಾವ ರೀತಿಯ ಹಕ್ಕು ಇಲ್ಲ. ಏಕೆಂದರೆ ಅವರೇ ಒಂದು ಸಿಪ್ ಕುಡಿದುಬಿಟ್ಟಿದ್ದಾರೆ" ಎಂದು ಹುರಿದುಂಬಿಸಿ ಕುಡಿಸತೊಡಗಿದರು.

ಮೂರ್ತಿ ಒಂದು ಘುಟ್ಟು ತಲುಪಿದ್ದೇ ತನ್ನ ಕೆನ್ನೆಯ... ...ನೇ ಜೋರಾಗಿ ಹಿಂಡಿಕೊಳ್ಳುತ್ತ

"ಇಲ್ಲಿ ನೋಡಿ ನನಗೆ ಒಂದು ಚೂರೂ ನೋವಾಗುತ್ತಿಲ್ಲ" ಎಂದು ನಗಲು ಶುರು ಮಾಡಿದ.

"ಹರೇ ಛೈ ಇಸ್‌ಕೋ ಅಬ್ ಛೋಡ್ ದೋ ಯಾರ್ ಬಿಚಾರೇ ಕೋ" (ಅರೆ ಇವರಿಗೆ ಬಿಟ್ಟು ಬಿಡ್ರಪ್ಪ ಪಾಪ) ಎಂದು ಬಿಟ್ಟು ಬಿಟ್ಟರು. ಈಗ ಅಗರ್‌ವಾಲ್ ಮತ್ತು ಮೊಹಂತಿ ಎರಡೂ ಕೈಗಳಲ್ಲಿ ಎರಡು ಬೀರು ಬಾಟಲ್‌ಗಳನ್ನು ಹಿಡಿದುಕೊಂಡು ಬದಲಾಯಿಸಿ ಬದಲಾಯಿಸಿ ಕುಡಿಯತೊಡಗಿದರೆ, ಚಂದ್ರ ಮಾಧವ್ ಒಂದು ಅಗಲವಾದ ಪಾತ್ರೆಗೆ ಸುರಿದುಕೊಂಡು ನೀರನ್ನು ಕುಡಿದಂತೆ ಗಟಗಟನೆ ಕುಡಿಯತೊಡಗಿದರು. ಅಷ್ಟರಲ್ಲಿ ದಾಸ್, ಶ್ರೀಮತಿ ಚಂದ್ರ ಮಾಧವ್ ಅವರನ್ನು ಮೆಲ್ಲಗೆ ಕರೆತಂದು ಚಂದ್ರ ಮಾಧವ್‌ರನ್ನು ತೋರಿಸಿದ. ಈ ದೃಶ್ಯವನ್ನು ನೋಡಿದ ಎಲ್ಲರೂ ಗೊಳ್ಳನೆ ನಕ್ಕರು. ಚಂದ್ರ ಮಾಧವ್

"ಅಬ್ ಲೇಲೋ ಯಾರ್ ಮೇರಾ ಛುಟ್ಟಿ ಹೋಗಯಾ" (ಇನ್ನು ತಕೊ ನನ್ನ ಕಥೆ ಮುಗಿಯಿತು) ಎಂದು ಪೆಚ್ಚು ಮೋರೆ ಹಾಕಿಕೊಂಡು ಗೋಳಾಡಿದ್ದೆ ಗೋಳಾಡಿದ್ದು.

ಮಧ್ಯೆದಲ್ಲಿ

"ಅಪ್ಪಾ ಈ ಫೀಕು ನೋಡಪ್ಪ ಹೊಡೆಯೂದು, ನನ್ನನ್ನ"

ಶೆಟ್ಟರ ಮಗಳು ಅರ್ಪಿತ ದೂರು ಹೇಳಿದಳು.

"ಏಯ್ ಪೀಕು" ಎಂದು ಜೋರಾಗಿ ಕೂಗು ಹಾಕಿದ ಶೆಟ್ಟಿ ಎದ್ದು ತೂರಾಡುತ್ತಾ ಅಗರ್‌ವಾಲ್ ಮಗನನ್ನು ಹುಡುಕಲು ಶುರು ಮಾಡಿದರು.

"ಲೇಲೋ ಅಬ್ ಪೀಕುಕ ಚುಟ್ಟಿ ಹೋಗಯ" (ತೆಕೊ ಪೀಕು ಕಥೆ ಮುಗಿಯಿತು) ಎಂದ ಮೊಹಂತಿ ಭುಜಗಳನ್ನು ಕುಲುಕುತ್ತಾ ತನ್ನ ಪ್ರತ್ಯೇಕ ಶೈಲಿಯಲ್ಲಿ ನಗತೊಡಗಿದ. ಸುಶೀಲ ಜಾನಕಿ ನಡಿ,

ಸ್ವಾಮಿ ನೀವು ಕುಡಿಯಲಿಲ್ಲ ಅಲ್ವೇ ?" ಪ್ರಶ್ನಿಸಿದಳು

" ಸ್ವಾಮಿ ಕುಡಿಯಲಿಲ್ಲವೆ..? ಅಲ್ಲಿ ನೋಡಿ ಕುರ್ಚಿ ಕೆಳಗೆ ಗ್ಲಾಸು "ದಾಸ್ ಕೈ ತೋರಿಸಿದ.

ನೈ ನೈ ಸ್ವಾಮೀಜೀ ಕುಡಿಯುವುದಿಲ್ಲ" ಸುಶೀಲ, ದಾಸ್ ಜೊತೆ ವಾದಿಸ ತೊಡಗಿದಳು. ಅಷ್ಟರಲ್ಲೇ ಸನ್ನ ಎಲ್ಲೆಯನ್ನು ಕಂಡುಕೊಂಡಿದ್ದ ನಾನು ಮುಖವನ್ನು ಎಷ್ಟೇ ನೈಜ...ಗಿರಿಸಿಕೊಳ್ಳಲು ಪ್ರಯತ್ನಪಟ್ಟರೂ ಮನಸ್ಸು ಸಾಧ್ಯವಿಲ್ಲ ಎನ್ನುತ್ತಿತ್ತು. ಭಕ್ಷ್ಯಗಳು ತಯಾರಾಗಿ ಕುಳಿತಿದ್ದು ಹೆಂಗಸರು ಮಕ್ಕಳು ತಮ್ಮ ಸರದಿಯನ್ನು ಮೊದಲು ಪ್ರಾರಂಭಿಸಿದರು. ನಂತರ ಗಂಡಸರು ಒಬ್ಬೊಬ್ಬರಾಗಿ ಪ್ಲೇಟುಗಳನ್ನು ತೆಗೆದುಕೊಂಡು ತಾವೇ ಹಾಕಿಕೊಳ್ಳುತ್ತಾ ಪ್ರತ್ಯೇಕ ಸ್ಥಳಗಳಲ್ಲಿ ಕುಳಿತು ತಿನ್ನುತ್ತಿದ್ದರು. ರಸ್ನಾದಿಂದ ಶುರುವಾದ ಔತಣ ಪಲಾವ್, ಮಟನ್‌ಕರಿ, ಆಲೂಗೋಬಿ, ಆಲೂಮಟ್ಟರ್, ಪನ್ನೀರ್, ಸಬ್ಜೀ, ಗುಲಾಬ್ ಜಾಮೂನ್, ದಾಲ್‌ಫ್ರೈ, ಬಾಳೆಹಣ್ಣು ಪಾನ್‌ನಿಂದ ಮುಕ್ತಾಯಗೊಂಡಿತು. ಎಲ್ಲರೂ ಮೂರ್ತಿ ಮತ್ತು ಶ್ರೀಮತಿ ಮೂರ್ತಿಗೆ ಧನ್ಯವಾದಗಳ ಜೊತೆಗೆ ಶುಭರಾತ್ರಿಯನ್ನು ಕೋರಿ ಒಬ್ಬೊಬ್ಬರಾಗಿ ತಮ್ಮ ತಮ್ಮ ಮನೆಗಳ ಕಡೆಗೆ ನಡೆದರು. ಕೊನೆಯಲ್ಲಿ ಉಳಿದ ಒಂದಷ್ಟು ಜನ ನಾವು ಎಲ್ಲಾ ಸಾಮಾನುಗಳನ್ನು ಜೋಡಿಸಿ, ಸರಿಮಾಡಿ ಉಳಿದ ತಿಂಡಿಗಳನ್ನು ಕಟ್ಟಿಕೊಂಡು ಮನೆಗಳ ಕಡೆಗೆ ಹೊರಟೆವು. -

* * *

ಕರಿ ಮೋಡಗಳು ಆಕಾಶದಲ್ಲಿ ನೆನ್ನೆಯಂತೆಯೇ ಇಂದೂ ಕೂಡ ಹಾರಾಡುತ್ತಿದ್ದವು.

ತಿಮಿಂಗಿಲಗಳಂತೆ ವಿಮಾನಗಳು. ಹೊರಕ್ಕೆ ಬಂದ ನಾವು ಅಲ್ಲೇ ಇದ್ದ ವಿಮಾನ ನಿಲ್ದಾಣದ ಬಸ್ಸಿನಲ್ಲಿ ಕುಳಿತುಕೊಂಡೆವು. ಬಸ್ಸು ನಿಧಾನವಾಗಿ ಸುತ್ತುತ್ತಾ ಬಂದು ಮುಖ್ಯ ಕಟ್ಟಡದ ಹತ್ತಿರ ನಿಂತುಕೊಂಡಿತು. ಎಲ್ಲರೂ ಇಳಿದು ಸಾಮಾನುಗಳಿಗಾಗಿ ಕಾಯುತ್ತಿದ್ದಾರೆ.

ಕ್ರಾಂತಿ "ಅಯ್ಯೋ ಇನ್ನೂ ವಿಮಾನದಲ್ಲೆ ಇದ್ದಿದ್ದರೆ ಚೆನ್ನಾಗಿತ್ತಲ್ಲ" ಎಂದು ಪಶ್ಚಾತ್ತಾಪ ಪಡುತ್ತಿದ್ದ. ಚಲಿಸುವ ಪಟ್ಟಿಗಳು ಹೊತ್ತುತಂದ ನಮ್ಮ ಸಾಮಾನುಗಳನ್ನು ಎತ್ತಿಕೊಂಡು ಅವುಗಳ ಟೋಕನ್‌ಗಳನ್ನು ಗಗನಸಖಿಗೆ ಕೊಟ್ಟು, ಅಲ್ಲೆ ಇದ್ದ ರೈಲ್ವೆ ಬುಕ್ಕಿಂಗ್ ಕೌಂಟರ್‌ನಲ್ಲಿ ಮುಂದಿನ ದಿನಕ್ಕೆ ಟಿಕೆಟ್ಟುಗಳನ್ನು ರಿಸರ್ವ್ ಮಾಡಿಸಿ ಟ್ಯಾಕ್ಸಿಯಲ್ಲಿ ಹೌರಾ ತಲುಪಿ ಹೋಟೆಲೊಂದರಲ್ಲಿ ಉಳಿದುಕೊಂಡೆವು.

ಬೆಳಿಗ್ಗೆ ಸ್ನಾನ ಮಾಡಿ ಉಪಹಾರ ಮುಗಿಸಿ ಕಲ್ಕತ್ತಾ ನೋಡಲು ಹೊರಟೆವು. ನಮ್ಮ ದುರಾದೃಷ್ಟಕ್ಕೆ ಆ ದಿನ ರವಿವಾರವಾಗಿದ್ದು ಮುಖ್ಯ ಕಲ್ಕತ್ತಾ ಪೂರ್ತಿ ಮುಚ್ಚಿತ್ತು. ಪ್ರಖ್ಯಾತ ಹೌರಾ ಸೇತುವೆಯ ಕೆಳಗೆ ಹರಿಯುತ್ತಿದ್ದ ಕೊಳಕು ಹೂಗ್ಲಿ ನದಿಯ ದರ್ಶನ ಆಗಿದ್ದೆ ಪೂರ್ತಿ ಕಲ್ಕತ್ತಾ ದರ್ಶನವಾದಂತಾಗಿ, ಇಡೀ ಕಲ್ಕತ್ತಾದ ಹೇಯ ಕೃತ್ಯಗಳನ್ನೆಲ್ಲಾ ಆ ನದಿಯೊಂದೇ ನುಂಗಿಕೊಂಡಂತೆ ಗಬ್ಬು ನಾಥ ದೂರ ದೂರಕ್ಕೆ ಹರಡಿತ್ತು. ಆ ಕೊಳಕು ನೀರಿನ ಮುಖಾಂತರವೆ ಇಡೀ ಕಲ್ಕತ್ತಾ ಶ್ವಾಸ ವಿಶ್ವಾಸ ಆಡುತ್ತಿದೆ ಎನ್ನಬೇಕು. ಆ ದಡಗಳ ಉದ್ದಕ್ಕೂ ಒಂದು ಕಡೆ ಪೂಜೆ ನಡೆಯುತ್ತಿದ್ದರೆ, ಇನ್ನೊಂದು ಕಡೆ ಕಾಗೆಗಳಿಗೆ ಪಿಂಡವನ್ನು ಉಣಿಸುತ್ತಿದ್ದಾರೆ. ಮತ್ತೊಂದು ಕಡೆ ಮೈಗಳಿಗೆ ಎಣ್ಣೆ ಸವರಿಕೊಂಡು ಮಸಾಜ್ ಮಾಡಿಸಿಕೊಳ್ಳುತ್ತಿದ್ದಾರೆ. ಒಟ್ಟಿನಲ್ಲಿ ಹೇಳತೀರದ ಹೇಯ ಕೃತ್ಯಗಳು ಆ ದಡಗಳ ಮೇಲೆ ನಡೆಯುತ್ತಿವೆ.

ಕಲಕತ್ತಾದ ಚೌರಂಗಿ, ವಿಕ್ಟೋರಿಯಾ ಮೆಮೋರಿಯಲ್, ಬಟಾಣಿಕಲ್ ಗಾರ್ಡನ್, ಬರ್ಮಾ ಬಜಾರ್ ಮತ್ತು ದಕ್ಷಿಣೇಶ್ವರಗಳನ್ನು ಸುತ್ತಿಕೊಂಡು ವಾಪಸ್ ಬಂದೆವು. ಸಾಯಂಕಾಲ ನಾಲ್ಕು ಗಂಟೆಗೆಲ್ಲ ಹೋಟೆಲ್ ಖಾಲಿ ಮಾಡಿ ಹೌರಾ ರೈಲ್ವೆ ನಿಲ್ದಾಣಕ್ಕೆ ಬಂದು ಪೂರ್ವ ಕಡಲ ರೈಲಿನಲ್ಲಿ ಹವಾ ನಿಯಂತ್ರಣದ ಭೋಗಿಯಲ್ಲಿ ಕುಳಿತುಕೊಳ್ಳುತ್ತಿದ್ದಂತೆ ಎಲ್ಲಿಲ್ಲದ ಆರಾಮ ಸಿಕ್ಕಿತು. ಹೌರಾದಿಂದ ಮದ್ರಾಸ್ ತಲುಪಿ ಅಲ್ಲಿಂದ ಬೆಂಗಳೂರಿಗೆ ಹೋಗುವ ರೈಲು ಹಿಡಿದು ಬಂಗಾರ ಪೇಟೆಯಲ್ಲಿ ಇಳಿದುಕೊಂಡು ಕೆಜಿಎಫ್ ಸೇರಿಕೊಂಡೆವು. ಮೂರು ದಿನಗಳು ಮಾತ್ರ ಉಳಿದುಕೊಂಡಿದ್ದ ನಾನು ಫೀಲ್ಡ್ ಕೆಲಸ ಇರುವುದರಿಂದ ಸುಶೀಲ, ಕ್ರಾಂತಿಯನ್ನು ಕೆಜಿಎಫ್‌ನಲ್ಲೆ ಬಿಟ್ಟು ಮತ್ತೆ ದಿಮಾಪುರ ತಲುಪಿದೆ.

* * *

## 19 ನಾಗಾಗಳ ನಡುವೆ

ಕೆಲವು ಭೂ ವಿಜ್ಞಾನಿಗಳು ಆಗಲೇ ಫೀಲ್ಡ್ ತಲುಪಿದ್ದರು. ಶಾಹು ಮತ್ತು ನಾನು ಡಿಸೆಂಬರ್ ತಿಂಗಳ ಒಂದು ಮಧ್ಯಾಹ್ನ ಒಬ್ಬ ನೇಪಾಳಿ (ಕಾಂಚಾ)ನನ್ನು ಕರೆದುಕೊಂಡು ಕೋಹಿಮಾ ಕಡೆಗೆ ಪ್ರಯಾಣ ಬೆಳೆಸಿದೆವು. ತೊಂಗ್‌ಪಾಂಗ್ ಎಂಬ ಸ್ಥಳೀಯ ಯುವಕ ನಮ್ಮ ಚಾಲಕನಾಗಿದ್ದರಿಂದ ಸ್ವಲ್ಪ ಸಮಾಧಾನವಾಗಿತ್ತು. ಇನ್ಯಾರಾದರೂ ಹಳೆಯ ಕುಡುಕರಾಗಿದ್ದರೆ ಆ ಗುಡ್ಡಗಾಡು ನಾಡಿನಲ್ಲಿ ಯಾವ ಯಾವ ರೀತಿಯ ತೊಂದರೆಗಳಿಗೆ ನಮ್ಮನ್ನು ಸಿಕ್ಕಿಸುತ್ತಿದ್ದರೋ ಏನೋ .. ? ಸ್ಥಳೀಯ ಬುಡಕಟ್ಟು ಚಾಲಕರನ್ನು ಹಿಡಿತದಲ್ಲಿಡುವುದು ಸುಲಭದ ಕೆಲಸವಲ್ಲ.

ಜೀಪು ದಿಮಾಪುರ ಬಿಟ್ಟು ದಕ್ಷಿಣಕ್ಕೆ ಇಪ್ಪತ್ತು ಕಿ.ಮೀಟರ್‌ಗಳ ದೂರ ಸಾಗಿದ್ದೆ ಕೆಳ ಹಿಮಾಲಯ ತಪ್ಪಲುಗಳು ಪ್ರಾರಂಭವಾಗಿದ್ದವು. ದಟ್ಟವಾದ ಹಚ್ಚ ಹಸಿರು ಕಾಡು, ಮಧ್ಯೆ ಮಧ್ಯೆ ಸಳಸಳನೆ ಹರಿಯುವ ಝರಿಗಳು. ಜೀಪು ಚಲಿಸುತ್ತಿದ್ದಂತೆ ತಂಪೇರಿದ ಗಾಳಿ ಮುಖಕ್ಕೆ ರಾಚುತ್ತಿದೆ. ಹೇಳಿ ಕೇಳಿ ಡಿಸೆಂಬರ್ ತಿಂಗಳು ಬೇರೆ. ಇನ್ನೂ ಸರಿಯಾಗಿ ಕೆಳ ತಪ್ಪಲುಗಳನ್ನೇ ತಲುಪಿಲ್ಲ, ಆಗಲೇ ಈ ರೀತಿಯ ಚಳಿಯೆ.. ? ಮನಸ್ಸಿನಲ್ಲಿ ತುಸು ಅಳುಕು ಮೂಡಿದರೂ ಹಿತವಾಗಿತ್ತು. ಪಕ್ಕದಲ್ಲಿದ್ದ ಶಾಹೂ ತಮ್ಮ ಎಂದಿನ ಮಾತು ಮುಂದುವರಿಸಿದ್ದರು.

"ಸಾಲಾ ... ಮಕ್ಕಳಿಗೆ ಏನಾದರೂ ತೊಂದರೆಯಾದರೆ ನೋಡಿ ಕೊಳ್ಳುವವರಿಲ್ಲ. ಡಬ್ಲೂಗೆ (ಮಗ) ಆಗಾಗ ಜ್ವರ ಬರುತ್ತಲೇ ಇರುತ್ತದೆ. ಮೂವರಿಗೂ (ಇಬ್ಬರು ಮಕ್ಕಳು, ಹೆಂಡತಿ) ಟಾನ್ಸಿಲಿಟಿಸ್ ಇದ್ದು ಆಗಾಗ ಇನ್‌ಫೆಕ್ಷನ್ ಆಗುತ್ತಲೇ ಇರುತ್ತದೆ. ಹೇಳಿಕೊಳ್ಳುವುದಕ್ಕೆ ಕೇಂದ್ರ ಸರ್ಕಾರದ ಮೊದಲ ದರ್ಜೆ ಅಧಿಕಾರಿಗಳು ನಾವು. ಒಂದು ಕ್ವಾರ್ಟರ್ಸ್ ಇಲ್ಲ, ಮೆಡಿಕಲ್ ಸೌಕರ್ಯವಿಲ್ಲ, ಒಬ್ಬ ಸೇವಕ ಇಲ್ಲ, ಎಂತಹ ದರಿದ್ರ ಇಲಾಖೆಗೆ ಸೇರಿಕೊಂಡುಬಿಟ್ಟೆವು. ಐವತ್ತು ರೂಪಾಯಿಗಳು ಡಿ.ಎ. ಕೊಟ್ಟರೆ ಬಜಾರಿನಲ್ಲಿ ನೂರಾ ಐವತ್ತು ರೂಪಾಯಿ ಬೆಲೆಗಳು ಏರಿರುತ್ತದೆ."

ಹೀಗೆ ಬಡಬಡನೆ ಶಾಹು ದಾರಿಯೆಲ್ಲಾ ಮಾತನಾಡುತ್ತಾ ಸಾಗಿದ್ದರು. ಕೆಲವು ಕ್ಷಣಗಳಾದ ಮೇಲೆ ಮತ್ತೆ ಈ ದೇಶದ ಬುದ್ಧಿ ಜೀವಿಗಳು ಎನಿಸಿಕೊಂಡ ಜನರು ಹೊಟ್ಟೆಗಾಗಿ, ಬಟ್ಟೆಗಾಗಿ ಹೋರಾಡುತ್ತಲೇ ಸಾಯುತ್ತಾರೆ. ಮೋಸ ವಂಚನೆಯಿಂದ ಕೂಡಿದ ಜನ ಎಲ್ಲಾ

ರೀತಿಯಲ್ಲೂ ಸಮಾಜದ ಸೌಕರ್ಯಗಳನ್ನು ಪಡೆದುಕೊಂಡು ಐಶಾರಾಮವಾಗಿ ಕಾಲ ಕಳೆಯುತ್ತಿದ್ದಾರೆ. ನ್ಯಾಯ ನೀತಿ ಎನ್ನುವ ಮಧ್ಯಮ ವರ್ಗದ ಜನ ಇನ್ನಷ್ಟು ತೊಂದರೆಗಳಿಗೆ ಸಿಲುಕಿಕೊಳ್ಳುತ್ತಲೇ ತಿಣುಕಾಡುತ್ತಿರುತ್ತಾರೆ. ಕೆಳ ವರ್ಗದವರ ಬಗ್ಗೆ ಇನ್ನೂ ಹೇಳುವುದೇ ಬೇಡ"

ಶಾಹು ಹಾಗಿರಲಿ. ಈಗ ಜೀಪು ತಪ್ಪಲುಗಳ ತಿರುವುಗಳಲ್ಲಿ ಓಂದಿದ್ದ ಟೇಲರನ್ನು ಎಳೆದುಕೊಂಡು ಸಾಗುತ್ತಿದೆ. ಹೇರಳವಾದ ಸಸ್ಯರಾಶಿಯನ್ನು ಕಳೆದುಕೊಂಡಿರುವ ತಪ್ಪಲುಗಳು ತಮ್ಮ ಹಿಡಿತವನ್ನು ಕಳೆದುಕೊಂಡು ರಾಶಿ ರಾಶಿ ಕಲ್ಲು ಮಣ್ಣಿನಿಂದ ಕುಸಿದು ಬಿದ್ದಿವೆ. ಆ ತಪ್ಪಲುಗಳ ಸೊಂಟದಿಂದ ಸೊಂಟಕ್ಕೆ ಹಾವಿನಂತೆ ಸಾಗಿರುವ ರಸ್ತೆಯಲ್ಲಿ ಜೀಪು ತನ್ನ ಶಕ್ತಿಯನ್ನೆಲ್ಲಾ ಒಟ್ಟು ಗೂಡಿಸಿಕೊಂಡು ಸಾಗುತ್ತಿದ್ದಂತೆ ತಪ್ಪಲುಗಳು ಬೆಟ್ಟಗಳಾಗುತ್ತ... ಬೆಟ್ಟಗಳು ಶಿಖರಗಳಾಗುತ್ತಾ... ಮುಗಿಲುಗಳು ಹತ್ತಿರವಾಗುತ್ತ ಆಕಾಶದ ಕಡೆಗೆ ನಾವು ಹಾರಿ ಹೋದಂತೆ ಭಾಸವಾಗುತ್ತಿತ್ತು.

ಯಾವ ಕಡೆ ನೋಡಿದರು ಸಮುದ್ರದ ಅಲೆಗಳಂತೆ ಕಾಣುವ ಹಿಮಾಲಯ ಪರ್ವತ ಶ್ರೇಣಿಗಳು. ತುತ್ತ ತುದಿ ಶಿಖರಗಳ ಮೇಲೆ ನಾಗಾ ಬಸ್ತಿಗಳು. ದಾರಿಯ ಮಧ್ಯೆ ಒಂದೆರಡು ಕಡೆ ಇಳಿದು ಬಿಹಾರಿ ಡಾಬಾ ಅಂಗಡಿಗಳಲ್ಲಿ ಚಹಾ ಕುಡಿದು ಮೂರು ಗಂಟೆಗೆಲ್ಲಾ ನಾಗಾ ರಾಜಧಾನಿ ಕೋಹಿಮಾ ಸೇರಿಕೊಂಡೆವು. ಕೋಹಿಮಾ ಒಂದು ಸುಂದರವಾದ ಗಿರಿಧಾಮ. ಇಳಿಜಾರು, ಅಂಕುಡೊಂಕು ರಸ್ತೆಗಳಲ್ಲಿ ಜನ ಮೈತುಂಬ ಬೆಚ್ಚನೆ ಉಡುಪುಗಳನ್ನು ತೊಟ್ಟು ಓಡಾಡುತ್ತಿದ್ದಾರೆ. ಬೆಟ್ಟ ಕಣಿವೆಗಳೆನ್ನದೆ ಮನೆಗಳು ವಿಶಾಲವಾಗಿ ಹರಡಿಕೊಂಡಿವೆ. ಇಳಿಜಾರುಗಳಲ್ಲಿರುವ ಮನೆಗಳಂತೂ ಮುಗಿಲುಗಳ ಮಧ್ಯೆ ತೇಲಾಡುತ್ತಿವೆ.

ನಮ್ಮ ಜೀಪು ಕೋಹಿಮಾ ಜಿಲ್ಲಾಧಿಕಾರಿಯವರ ಕಛೇರಿ ಮುಂದೆ ನಿಂತುಕೊಂಡಿತು. ನಮ್ಮಿಬ್ಬರ ವ್ಹಿಸಿಟಿಂಗ್ ಕಾರ್ಡುಗಳನ್ನು ಹೊರಗಿದ್ದ ಸೇವಕನ ಕೈಗೆ ಕೊಟ್ಟು ಅಲ್ಲೇ ಕುಳಿತುಕೊಂಡೆವು. ಬಾಗಿಲು ಮೇಲೆ ಜ್ರೋನೋ ಜಮೀರ್ ಐಎಎಸ್ ಎಂಬ ಅಕ್ಷರಗಳು ಹೊಳೆಯುತ್ತಿದ್ದವು.

"ಹೆಣ್ಣೋ.. ಗಂಡೋ..?" ಶಾಹುಗೆ ಕೇಳಿದೆ.

"ಏ ತೋ ಔರತ್‌ಹೈ. ಮುಖ್ಯ ಮಂತ್ರಿ ಜಮೀರ್ ಸೊಸೆ" ಎಂದರು. ಅಷ್ಟರಲ್ಲಿ ಒಳಗಿಂದ ಬುಲಾವ್ ಬಂತು. ಇಬ್ಬರೂ ಒಳಕ್ಕೆ ಹೋದೆವು. ಒಂದು ಮುಗುಳು ನಗೆ ಬೀರಿ ಕುಳಿತುಕೊಳ್ಳುವಂತೆ ಆಹ್ವಾನಿಸಿದಳು.

ಗೋಧಿ ಬಣ್ಣ, ಅರೆತೋಳು, ಜಾಕೆಟ್, ಪೂರ್ತಿ ಬ್ಲೆಂಡ್ ಆಗಿರುವ ಇಂಡೋ ಮಂಗಾಲಾಯ್ಡ್ ರೇಸಿನ ಸುಂದರ ಹೆಂಗಸು. ನಾವು ಕೊಟ್ಟ ಪತ್ರವನ್ನು ಓದಿದಳು.

"ಆಯಿತು, ಜೀಪೋಬೋಜೋನಲ್ಲಿರುವ (ಹಳ್ಳಿ) ಇಎಸಿಗೆ ಒಂದು ಪತ್ರ ಕೊಡುತ್ತೇನೆ. ತಾವು ಅದನ್ನು ಅವರಿಗೆ ತೋರಿಸಿ ನಿಮಗೆ ಉಳಿದುಕೊಳ್ಳಲು ವ್ಯವಸ್ಥೆ ಮಾಡುತ್ತಾರೆ" ಎಂದಳು. ಅಷ್ಟರಲ್ಲಿ ಚಹ ಬಂದಿತ್ತು. ಕುಡಿಯುತ್ತಿದ್ದಂತೆ ಪತ್ರ ತಯಾರಾಗಿ ನಮ್ಮ ಕೈ ಸೇರಿತು. ವಂದನೆಗಳನ್ನು ಸಲ್ಲಿಸಿ ಹೊರಕ್ಕೆ ಬಂದೆವು. ಸುಮಾರು ನಾಲ್ಕು ಗಂಟೆಯೂ ಆಗಿಲ್ಲ ಆಗಲೇ ಕತ್ತಲು ಆವರಿಸಿತ್ತು. ಪೆಟ್ರೋಲ್ ತುಂಬಿಸಿಕೊಂಡು 25 ಕಿ.ಮೀಟರ್ ದೂರವಿರುವ ಜೀಪೋಬೋಜೋ ಕಡೆಗೆ ಪ್ರಯಾಣ ಮುಂದುವರೆಸಿದೆವು. ಆಗಲೇ ಮಳೆ ಜಿನುಗುತ್ತಿದ್ದು ಚಳಿಯಿಂದ ಮೈ ನಡುಗಲು ಶುರುವಾಯಿತು.

ರಸ್ತೆ ಅಷ್ಟೇನು ಚೆನ್ನಾಗಿಲ್ಲದ ಕಾರಣ ಜೀಪು ನಿಧಾನವಾಗಿ ಬೆಳಕು ಚೆಲ್ಲುತ್ತಾ ರಸ್ತೆಯನ್ನು ಕಂಡುಕೊಳ್ಳುತ್ತಿತ್ತು. ಅಂತೂ ಇಂತು ಜಿಪೋಬೋಜೋ ಬಸ್ತಿಯನ್ನು ತಲುಪಿ ಹತ್ತಿರದಲ್ಲೇ ಇದ್ದ ಇಎಸಿ ಮನೆಯಲ್ಲಿ ಇಎಸಿಯನ್ನು ಭೇಟಿಮಾಡಿ ಪತ್ರವನ್ನು ತೋರಿಸಿದೆವು. ಇಎಸಿಯೇ ಖುದ್ದಾಗಿ ವಿಶ್ರಾಂತಿ ಗೃಹಕ್ಕೆ ಬಂದು ಇದ್ದ ಎರಡು ಕೊಠಡಿಗಳಲ್ಲಿ ಒಂದನ್ನು ನಮಗೆ ನಿಗದಿ ಪಡಿಸಿ ಇನ್ನೊಂದನ್ನು ಆಗಾಗ ಭೇಟಿ ಕೊಡುವ ಅಧಿತಿಗಳಿಗಾಗಿ ಕಾಯ್ದಿರಿಸುವುದಾಗಿ ತಿಳಿಸಿ ಡ್ರೈವರ್ ಮತ್ತು ಕಾಂಚಾನನ್ನು ಒಳಗಡೆಯೇ ಇದ್ದ ಇನ್ನೊಂದು ಸಣ್ಣ (ಸ್ಟೋರ್)ರೂಮಿನಲ್ಲಿ ಇರುವಂತೆ ಸೂಚಿಸಿದರು.

ಅಷ್ಟು ಸುಲಭವಾಗಿ ವಸತಿ ಸಿಕ್ಕಿದ್ದರಿಂದ ನಮ್ಮ ಅತಿ ಮುಖ್ಯ ಸಮಸ್ಯೆ ಪರಿಹಾರವಾಗಿ ಸಾಮಾನುಗಳನ್ನೆಲ್ಲಾ ಇಳಿಸಿಕೊಂಡ ನಾವು ನಮ್ಮ ಕೋಣೆಯನ್ನು ವ್ಯವಸ್ಥೆಗೊಳಿಸುತ್ತಿದ್ದಂತೆ. ಹೊರಗಡೆ ಇದ್ದ ಅಡಿಗೆ ಮನೆಯಲ್ಲಿ ಕಾಂಚಾ ರಾತ್ರಿಯ ಊಟಕ್ಕೆ ತಯಾರಿ ನಡೆಸುತ್ತಿದ್ದ. ಡ್ರೈವರ್ ತೊಂಗ್ ಪಾಂಗ್ ಕೂಡ ಅದೇ ಕೋಣೆಯ ಇನ್ನೊಂದು ಮೂಲೆಯಲ್ಲಿ ಅಡಿಗೆ ತಯಾರಿಸ ತೊಡಗಿದ.

ಬಿಸಿ ನೀರಿನಲ್ಲಿ ಮೇಲ್ಮೈ ಸ್ನಾನ ಮಾಡಿದ ನಾವು ಸ್ಲೀಪಿಂಗ್ ಚೀಲದೊಳಗೆ ಕುಳಿತು ಕೊಂಡು ನಾಳೆ ಮಾಡಬೇಕಾದ ಕೆಲಸಗಳ ಬಗ್ಗೆ ಪಟ್ಟಿ ಮಾಡಿಕೊಳ್ಳುತ್ತಿದ್ದೆವು. ಒಳಕ್ಕೆ ಬಂದ ಕಾಂಚಾ,

"ಖಾನಾ ಲಗಾವೂ ಸಾಬ್" ಕೇಳಿದ.

"ಲಗಾವ್.. ಲಗಾವ್.. ಖಾಯೇಂಗೇ ಸಾಲಾ" ಸಾಹೂ ಉತ್ತರಿಸಿದರು. ಮನಸ್ಸಿಲ್ಲದೆ ಚೀಲದಿಂದ ಹೊರಕ್ಕೆ ಬಂದ ನಾವು ಮೇಜಿನ ಮುಂದೆ ಕುಳಿತುಕೊಂಡೆವು. ಕಾಂಚಾ ಎಣ್ಣೆಯಿಲ್ಲದ ಫುಲ್ಕಾ ರೊಟ್ಟಿಗಳ ಜೊತೆಗೆ ಅಂಡಾಕರಿ, ಸಬ್ಜೀ ತಂದಿಟ್ಟ. ಅವಸರವಸರವಾಗಿ ತಿಂದು, ಬಿಸಿ ನೀರನ್ನು ಕುಡಿದು, ಕೈ ತೊಳೆದುಕೊಂಡು ಮತ್ತೆ ಸ್ಲೀಪಿಂಗ್ ಚೀಲದ ಒಳಗೆ ಸೇರಿಕೊಂಡೆವು.

ಸ್ಥಳ ಹೊಸದಾದರೂ ತಾಳಲಾರದಷ್ಟು ಚಳಿಯ ಜೊತೆಗೆ ಪ್ರಯಾಣದಿಂದ ಆಯಾಸವಾಗಿದ್ದು ದೀಪವಾರಿಸಿ ಮಲಗಿಬಿಟ್ಟೆವು. ಮೂಲೆಯಲ್ಲಿ ಇಂಗ್ಲಾ ಚೂಲದಲ್ಲಿ ಇದ್ದಿಲು ಕೆಂಡವಾಗಿ ಕೋಣೆಯನ್ನು ಬೆಚ್ಚಗಾಗಿಸುತ್ತಿತ್ತು. ಕೈಗಳಿಗೆ ಉಣ್ಣೆ ಗ್ಲೌಸ್, ತಲೆಗೆ ಸ್ಕಾರ್ಫ್ ಮತ್ತು ಕಾಲುಗಳಿಗೆ ಸಾಕ್ಸ್ ಹಾಕಿ ಮಲಗಿದ ಸುಮಾರು ಹತ್ತು ನಿಮಿಷಗಳಿಗೆ ಮೈಯೆಲ್ಲಾ ಬೆಚ್ಚಗಾಗಿ ಒಂದು ರೀತಿಯ ಆರಾಮ ಸಿಕ್ಕಿತು. ಬೆಳಿಗ್ಗೆ ಎಚ್ಚರವಾದಾಗ ಕಾಂಚಾ ಬಾಗಿಲನ್ನು ಕುಟ್ಟುತ್ತಿದ್ದ. ಶಾಹೂ ಬಾಗಿಲು ತೆಗೆದಿದ್ದೆ ಇಬ್ಬರಿಗೂ ಬೆಡ್ ಚಹ ತಂದುಕೊಟ್ಟ.

"ನಾನು ಚಹ, ಕಾಫಿ ಯಾವುದನ್ನೂ ಬೆಳಿಗ್ಗೆ ಕುಡಿಯುವುದಿಲ್ಲ ನನಗಾಗಿ ಏನೂ ಮಾಡಬೇಡ" ಎಂದು. ಕಾಂಚಾಗೆ ಹೇಳಿದ್ದೆ ಕಾಂಚಾ ಹೇಳಿ ಹೊರಟು ಹೋದ. "ಅಚ್ಛಾ ಸಾಬ್" ಎಂದ.

ಬೆಳಗಿನ ಕೆಲಸಗಳನ್ನು ಮುಗಿಸಿಕೊಂಡು ಇಏಸಿ ಕಛೇರಿಗೆ ತಲುಪಿ ನಾವು ಭೂ ವಿಜ್ಞಾನದ  ಬಗ್ಗೆ ನಡೆಸಬೇಕಾದ ಸಮೀಕ್ಷೆ ಮತ್ತು ಸ್ಥಳಗಳನ್ನು ವಿವರಿಸಿದ ಮೇಲೆ ಇಏಸಿ ಒಂದು ವಿಜ್ಞಾಪನೆ ಪತ್ರವನ್ನು ತಯಾರು ಮಾಡಿದರು. ನಾವು ಭೂಸಮೀಕ್ಷೆ ಮಾಡುವ ಪ್ರದೇಶದಲ್ಲಿ ಬರುವ ಎಲ್ಲಾ ಬಸ್ತಿಗಳ ಗಾವ್ ಬುಡಾಗಳಿಗೆ ಪತ್ರಗಳನ್ನು ಆ ದಿನವೆ ಕಳುಹಿಸಿಕೊಡುವುದಾಗಿ ಇಏಸಿ ತಿಳಿಸಿದ ಮೇಲೆ ಅವರಿಂದ ನಮಗಾಗಿ ಒಂದು ಪ್ರತಿಯನ್ನು ತೆಗೆದುಕೊಂಡು ವಿಶ್ರಾಂತಿ ಗೃಹಕ್ಕೆ ಬಂದೆವು. ನಾಗಾಲ್ಯಾಂಡಿನಲ್ಲಿ ಹೊರಗಿನವರಾಗಲಿ ಸರಕಾರದವರಾಗಲಿ ಯಾರೇ ಆಗಲಿ ಗಾವ್ ಬುಡಾಗಳ ಅಪ್ಪಣೆ ಇಲ್ಲದೆ ಬಸ್ತಿಯ ಒಳಕ್ಕೆ ಪ್ರವೇಶಿಸುವಂತಿಲ್ಲ. ನಾವು ಹೋಗುವ ಎಲ್ಲಾ ಗಾವ್ ಬುಡಾಗಳಿಗೂ ವಿಷಯ ತಿಳಿಯುವುದಕ್ಕೆ ನಾಲ್ಕಾರು ದಿನಗಳಾದರೂ ಬೇಕು. ಈ ನಡುವೆ ವಿಶ್ರಾಂತಿ ಗೃಹದಲ್ಲೇ ಮುಂದಿನ ಕೆಲಸಗಳ ಬಗ್ಗೆ ಯೋಜನೆಗಳನ್ನು ತಯಾರಿ ಮಾಡಿಕೊಂಡೆವು.

* * *

## ಆ ಘೋರರಾತ್ರಿ

ಒಂದು ರಾತ್ರಿ, ಬೆಳಿಗ್ಗೆ ಬೇಗನೆ ಫೀಲ್ಡ್ ಕೆಲಸಕ್ಕೆ ಹೋಗಬೇಕೆಂದು ಇಬ್ಬರೂ ಮಲಗಿಕೊಂಡೆವು. ಆದರೆ ಇಬ್ಬರಿಗೂ ನಿದ್ರೆ ಮಾತ್ರ ಬರಲಿಲ್ಲ, ಮಾತನಾಡುತ್ತಲೇ ಇದ್ದೇವೆ. ಎಲ್ಲೋ ಹುಟ್ಟಿದ್ದು, ಎಲ್ಲೋ ಬೆಳೆದಿದ್ದು, ಎಲ್ಲೋ ಓದಿದ್ದು, ಯಾವುದೋ ಪ್ರದೇಶದಲ್ಲಿ ಮಲಗಿದ್ದೇವೆ. ಹೆಂಡತಿಯಲ್ಲೋ.. ಮಕ್ಕಳೆಲ್ಲೋ.. ಸಂಬಂಧಿಗಳೆಲ್ಲೋ.. ಸುಮಾರು ಹೊತ್ತು ಅದೇ ವಿಷಯದ ಬಗ್ಗೆ ಮಾತನಾಡಿ ಸ್ವಲ್ಪ ತಲೆಕೆಡಿಸಿಕೊಂಡೆವು.

ಹಾಗೆ ಮಾತನಾಡುತ್ತ ಮಾತನಾಡುತ್ತ ನಿದ್ದೆಯೊಳಕ್ಕೆ ಜಾರಿಕೊಂಡಿದ್ದೇ ತಡ ಏನೋ ಸದ್ದು, ಹತ್ತಿರ ಹತ್ತಿರವಾದಂತೆ ನಮ್ಮ ಬಾಗಿಲನ್ನೇ ಯಾರೋ ದಬ ದಬನೆ ಹೊಡೆಯುವ ಸದ್ದು, ಜೊತೆಯಲ್ಲೇ ಇಂಗ್ಲೀಷ್ ಹಾಡುಗಳು. ಇಬ್ಬರೂ ಸರಕ್ಕನೆ ಎದ್ದು ಕುಳಿತುಕೊಂಡೆವು. ಸದ್ದು ಇನ್ನಷ್ಟು ಜೋರಾಯಿತು. ಬಾಗಿಲು ತೆಗೆಯದಿದ್ದರೆ ಇನ್ನೇನು ಮುರಿದು ಬೀಳುವುದೇನೋ ಅಷ್ಟು ಸದ್ದು.

ಸಾಹೂ ದೀಪ ಹಚ್ಚಿ ನಿಧಾನವಾಗಿ ಬಾಗಿಲು ತೆಗೆದಿದ್ದೆ ತಡ. ಇಬ್ಬರು ಹೆಂಗಸರು, ಒಬ್ಬ ಯುವಕ ಒಳಕ್ಕೆ ನುಗ್ಗಿ ಬಂದರು. ಗಂಡಸು ದೊಡ್ಡದಾದ ಟೂಇನ್ ಒನ್ ತಂದು ಮೇಜಿನ ಮೇಲಿಟ್ಟಿದ್ದೆ ಇಂಗ್ಲೀಷ್ ಹಾಡುಗಳು ಕೋಣೆಯ ತುಂಬಾ ಕುಣಿದಾಡಿದವು. ಒಬ್ಬಳು ಇಪ್ಪತ್ತರ ಗಡಿಯಲ್ಲಿರುವ ಸುಂದರ ಯುವತಿಯಾದರೆ, ಇನ್ನೊಬ್ಬಳು ಸುಮಾರು ಮೂವತ್ತರ ಗಡಿಯಲ್ಲಿರುವ ಹೆಂಗಸು. ಜೊತೆಗೆ ಇಪ್ಪತ್ತರ ಗಡಿಯಲ್ಲಿರುವ ಧೃಡಕಾಯ ಯುವಕ. ಮೂವರೂ ಪಾನ ಮತ್ತರಾಗಿ ನಿಲ್ಲಲಾರದೆ ಕೂರಲಾರದೆ ಓಲಾಡುತ್ತಿದ್ದಾರೆ.

ತಣ್ಣನೆಯ ನೀರವರಾತ್ರಿ, ಸುಮಾರು ಹನ್ನೆರಡೂವರೆ ಗಂಟೆ, ಶಾಹೂ ಮತ್ತು ನಾನು ಒಬ್ಬರನ್ನೊಬ್ಬರು ನೋಡಿಕೊಂಡು ಮುಂದೆ ಬರಲಿರುವ ಆಪತ್ತಿನ ಬಗ್ಗೆ ಒಳಗೊಳಗೆ ಆತಂಕಗೊಂಡೆವು. ಹಗಲಾಗಿದ್ದರೆ ಒಮ್ಮೆಲೆ ಹೊರಕ್ಕೆ ಓಡಿಹೋಗಬಹುದಾಗಿತ್ತು. ರಾತ್ರಿ ಅದು ಊರಿನಿಂದ ಅನತಿ ದೂರದಲ್ಲಿರುವ ಒಂದು ಪುಟ್ಟ ದಿಬ್ಬದ ಮೇಲೆ ಪ್ರತ್ಯೇಕವಾಗಿರುವ ವಿಶ್ರಾಂತಿ ಗೃಹ. ಏನು ಮಾಡಬೇಕು.? ಮೂವರೂ ತಮ್ಮ ಸ್ಥಳೀಯ ಹಂಗಾಮಿ ಭಾಷೆಯಲ್ಲಿ ಏನೇನೋ ಮಾತನಾಡಿಕೊಳ್ಳುತ್ತಿದ್ದಾರೆ. ನಾಗಾಮೀಸ್ ಭಾಷೆಯನ್ನೇ ಅರ್ಥಮಾಡಿಕೊಳ್ಳದ ನಾನು ಹಂಗಾಮಿ ಭಾಷೆಯನ್ನು ಅರ್ಥಮಾಡಿಕೊಳ್ಳುವುದಾದರೂ ಹೇಗೆ ?

ಯುವಕ ಹಾಸಿಗೆಯ ಮೇಲೆ ಹಿಂದಕ್ಕೆ ಉರುಳಿಕೊಂಡು ತನ್ನದೇ ಆದ ಲೋಕದಲ್ಲಿ ವಿಹರಿಸುತ್ತಿದ್ದಾನೆ. ಪ್ರೀತಿಯಿಂದ ಮೃದುವಾಗಿ ನಡೆದು ಬಂದ ಒಬ್ಬಳು ನನ್ನ ಪಕ್ಕ

ಕುಳಿತುಕೊಂಡರೆ, ಇನ್ನೊಬ್ಬಳು ಶಾಹೂ ಪಕ್ಕದಲ್ಲಿ ಕುಳಿತುಕೊಂಡಳು. ಸುಮ್ಮನೆ ಕುಳಿತಿದ್ದರೆ ಸಾಕಾಗಿತ್ತು. ಕೈಗಳನ್ನು ಕುಲುಕುವುದರ ಜೊತೆಗೆ ಶುರುವಾದ ಗೆಳೆತನ ಇನ್ನಷ್ಟು ಮುಂದಕ್ಕೆ ಹೋಗಿ ಅಂಗಾಂಗಗಳು ಅಲ್ಲಲ್ಲಿ ಸವರಿಕೊಳ್ಳುತ್ತಿದ್ದವು.

"ಹಾಯ್ ಬೀ ಡಾನ್ಸ್ ಕರೋ.. ಮೋಜ್ ಕರೋ.. ಮಸ್ತೀಕರೋ.. ನಾವೆಲ್ಲ ಗೆಳೆಯರು" ಎನ್ನುತ್ತಾ ಹೆಂಗಸರು ನಮ್ಮಿಬ್ಬರನ್ನು ಎಬ್ಬಿಸಿ ನಿಲ್ಲಿಸಿಯೇ ಬಿಟ್ಟರು. ನಾವು ಎಷ್ಟು ಬೇಡಿಕೊಂಡರೂ ಬಿಡಲಿಲ್ಲ.

ಅಷ್ಟರವರೆಗೂ ಮಂಚದ ಮೇಲೆ ಬಿದ್ದಿದ್ದ ಯುವಕ ಟೂಇನ್ ವನ್‌ನಲ್ಲಿ ಕ್ಯಾಸೆಟ್ ಬದಲಿಸಿ ಕುಣಿಯಲು ತಯಾರಾದ. ಐವರು ಒಬ್ಬರನ್ನೊಬ್ಬರು ಕೈಗಳ ಮುಖಾಂತರ ಪೋಣಿಸಿಕೊಂಡೆವು. ಎಲ್ಲಿಯ ಗ್ರಹಚಾರವೋ? ನಾನು ಕೈಗಳನ್ನು ಆ ಹೆಂಗಸರ ಮೈಮೇಲೆ ಸೋಕಿಯೂ ಸೋಕದಂತೆ ಇಟ್ಟುಕೊಂಡು ಕುಣಿಯುತ್ತಿದ್ದೇನೆ. ಮಧ್ಯದಲ್ಲಿ ನಿಲ್ಲಿಸಿದ ಆ ಹೆಂಗಸರು ನಮ್ಮಿಬ್ಬರನ್ನೂ ಗಟ್ಟಿಯಾಗಿ ಹಿಡಿದುಕೊಳ್ಳುವಂತೆ ತಿಳಿಸಿ ಮತ್ತೆ ಓ..ಂ..ಂ..ಂ..ಅ, ಓ..ಂ..ಂ..ಂ..ಅ, ಎಂದು ಕುಣಿಯತೊಡಗಿದರು.

"Nagas are good friends and bad enemies" ಎಂಬ ಒಂದು ಗಾದೆಯೇ ಇದೆ.

ಎಪ್ಪತ್ತರ ದಶಕದವರೆಗೂ ಈ ಪ್ರದೇಶದಲ್ಲಿದ್ದ ಹೊರಗಿನ ಜನ ನಾಗಾ ಹೆಣ್ಣುಗಳ ಜತೆ ಎಲ್ಲಾ ರೀತಿಯ ಸಂಪರ್ಕಗಳನ್ನು ಹೊಂದಿದ್ದು ಅವರ ಒಳ್ಳೆಯತನವನ್ನು ಆದಷ್ಟು ದುರುಪಯೋಗ ಪಡೆದಿದ್ದರ ಸಲುವಾಗಿ ಪರಿಸ್ಥಿತಿ ಈಗ ಬೇರೆಯೆ ಆಗಿದೆ. ಒಂದು ಕಾಲದಲ್ಲಿ ಲೈಂಗಿಕತೆ ಅಪರಾಧವೆ ಅಲ್ಲದ ಈ ನಾಡಿನಲ್ಲಿ ಈಗ ಹೆಚ್ಚು ಹೆಚ್ಚಾಗಿ ಹೊರಗಿನ ರಾಜ್ಯಗಳಲ್ಲಿ ಓದಿ ಬರುವ ಸ್ಥಳೀಯ ಯುವಕ ಯುವತಿಯರು ಹೊರಗಿನವರ ಕೆಟ್ಟ ಚಾಳಿಗಳಿಗೆ ಪೂರ್ತಿ ಕಡಿವಾಣ ಹಾಕಿರುವುದರ ಜೊತೆಗೆ ಸಿಂಹಸ್ವಪ್ನರಾಗಿಬಿಟ್ಟಿದ್ದಾರೆ. ಆದರೆ ಹೊರಗಿನವರು ಈಗಲೂ ಮುಕ್ತವಾಗಿ ಸ್ಥಳೀಯ ಯುವತಿಯರನ್ನು ಪ್ರೀತಿಸಿಯೋ ಅಥವಾ ಅರೇಂಜ್ ಮದುವೆ ಮಾಡಿಕೊಳ್ಳಬಹುದು. ಆದರೆ ಈಗಿನ ಪರಿಸ್ಥಿತಿಯಲ್ಲಿ ನಾಗಾ ಯುವತಿಯರನ್ನು ಮೋಸ ಮಾಡಿ ತಪ್ಪಿಸಿಕೊಳ್ಳುವುದಂತೂ ಸಾಧ್ಯವಿಲ್ಲ. ಅವರ ಜೊತೆ ಸಂಪರ್ಕ ಬೆಳೆಸಿದ ಮೇಲೆ ಮದುವೆ ಮಾಡಿಕೊಳ್ಳಲೇ ಬೇಕು. ಇತ್ತೀಚೆಗಂತೂ ನಾಗಾ ಯುವತಿಯರು ಹೆಚ್ಚು ಹೆಚ್ಚಾಗಿ ಹೊರಗಿನ ಹುಡುಗರನ್ನು ಮದುವೆಯಾಗಲು ಇಚ್ಛಿಸುತ್ತಾರೆ.

ಎಷ್ಟೋ ಬೆಂಗಾಲಿಗಳು, ಮಲೆಯಾಳಿಗಳು, ಬಿಹಾರಿಗಳು ಇನ್ನೂ ಅನೇಕ ರಾಜ್ಯಗಳ

ಜನ ನಾಗಾ ಯುವತಿಯರನ್ನು ಮದುವೆಯಾಗಿ ಅಲ್ಲಿಯೇ ನೆಲೆಯೂರಿಬಿಟ್ಟಿದ್ದಾರೆ. ಆದರೆ ಹೊರ ರಾಜ್ಯದ ಒಂದು ಹೆಣ್ಣೂ ಕೂಡ ನಾಗಾ ಯುವಕರನ್ನು ಮದುವೆಯಾಗಿರುವ ಪ್ರಸಂಗವನ್ನು ನಾನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ. ನಾಗಾ ಜನ ಎಷ್ಟು ಒರಟು ಮತ್ತು ಎಷ್ಟು ಮುಂಗೋಪಿಗಳೆಂದರೆ ಹೇಳತೀರದು. ಅವರಿಗೆ ಈ ಪ್ರದೇಶದಲ್ಲಿ ಅಡ್ಡವೇ ಇಲ್ಲ. ಅವರು ಏನು ಹೇಳಿದರೂ ಸರಿ, ಹೊರಗಿನವರು ಸರಿ ಎನ್ನಲೇ ಬೇಕು. ಎದುರಾಡಿದರೆ ಅವರ ಕಥೆ ಮುಗಿದೇ ಹೋಗಬಹುದು.

ಈ ಸ್ಥಿತಿಯಲ್ಲಿ ಮುಕ್ತವಾಗಿ ಅವರ ಜೊತೆ ಡ್ಯಾನ್ಸ್ ಆಡುವುದಾದರೂ ಹೇಗೆ ? ಸ್ಥಳೀಯ ಯುವಕ ಯುವತಿಯರ ಮಧ್ಯೆ ಎಲ್ಲಾ ರೀತಿಯ ಸಂಬಂಧಗಳು ಇರುವುದರ ಜೊತೆಗೆ ಯಾವರೀತಿಯ ಅಡ್ಡ ಗೋಡೆಗಳೂ ಇರುವುದಿಲ್ಲ. ಅದೊಂದು ಪಾಶ್ಚಿಮಾತ್ಯ ಸಂಸ್ಕೃತಿಯೇ ಸರಿ. ಆದರೆ ಈ ಚೆಲ್ಲಾಟಗಳೆಲ್ಲ ಮದುವೆ ಆಗುವವರೆಗೆ ಮಾತ್ರ. ಒಮ್ಮೆ ಮದುವೆ ಆಗಿಬಿಟ್ಟರೆ ಅವರ ಲೈಂಗಿಕ ಸಂಬಂಧ ತನ್ನ ಗಂಡನ ಜೊತೆಗೆ ಮಾತ್ರ ಸೀಮಿತವಾಗಿ ಬಿಡುತ್ತದೆ.

ಸುಮಾರು ಇಪ್ಪತ್ತು ನಿಮಿಷಗಳು ಕಾಲ ಕುಣಿದ ನಾವು ಕೊಳದಿಂದ ಹೊರಕ್ಕೆ ಬಿದ್ದ ಮೀನುಗಳಂತೆ ವಿಲವಿಲನೆ ನರಳಾಡುತ್ತಿದ್ದೇವೆ. ಇಬ್ಬರಿಗೂ ಚಳಿ ನೆತ್ತಿಗೇರಿ ಕೆಮ್ಮು ಶುರುವಾಯಿತು.

"ಸಿಸ್ಟರ್. ಕುಣಿತ ಸಾಕು, ಕೆಮ್ಮು ಬರುತ್ತಿದೆ" ಎಂದ ಶಾಹು ಹಾಸಿಗೆಯ ಮೇಲೆ ಕೆಮ್ಮುತ್ತಾ ಕುಳಿತುಕೊಂಡರು. ನಾನೂ ನನ್ನ ಹಾಸಿಗೆಯಮೇಲೆ ಕುಳಿತುಕೊಂಡೆ.

ಹಾಸಿಗೆಯ ಮೇಲೆ ಹಿಂದಕ್ಕೆ ಉರುಳಿಕೊಂಡ ಯುವಕ ಕಣ್ಣು ಮುಚ್ಚಿ ಮಲಗಿದ. ಒಬ್ಬಳು ಶಾಹು ತೊಡೆಯಮೇಲೆ ಕುಳಿತುಕೊಂಡರೆ, ಇನ್ನೊಬ್ಬಳು ನನ್ನ ತೊಡೆಯಮೇಲೆ ಕುಳಿತುಕೊಂಡಳು. ಕುಳಿತುಕೊಂಡವರು ಸುಮ್ಮನೆ ಇರದೆ ಲಲ್ಲೆಗರೆಯುತ್ತಾ, ಸಣ್ಣ ಮಕ್ಕಳನ್ನು ಮುದ್ದಿಸುವಂತೆ ಮಾತನಾಡತೊಡಗಿದರು. ನಾಚಿ ನೀರಾಗಿ ಹೋಗಿದ್ದರು ಶಾಹು. ನನ್ನ ಗತಿಯೂ ಅದೆ ಆಗಿತ್ತು. ಶಾಹು.

"ದೀದಿ, ಛೋಡ್ದಿ, ಛೋಡ್ದಿ," ಎಂದು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ನನ್ನ ಸ್ಥಿತಿಯೂ ಅಷ್ಟೆ. ಗ್ರಹಚಾರ, ಯಾವ ಜನ್ಮದಲ್ಲಿ ಏನು ಪಾಪ ಮಾಡಿದ್ದೆವೋ ಏನೋ? ಸುಂದರ ಹೆಣ್ಣುಗಳು ಮೇಲೆ ಮೇಲೆ ಮುಗಿಬಿದ್ದರೂ ಬಿಸಿ ತುಪ್ಪ ಬಾಯಿಗೆ ಬಿದ್ದಂತಾಗಿತ್ತು ನಮ್ಮ ಸ್ಥಿತಿ.

ಎಲ್ಲಾ ರೀತಿಯ ದೃಶ್ಯಗಳಿಗೂ ಒಂದಲ್ಲಾ ಒಂದು ರೀತಿಯ ಮುಕ್ತಾಯ ಇರಲೇಬೇಕಲ್ಲವೇ? ಹೆಂಗಸರು ಈಗ ನೇರವಾಗಿ ವಿಷಯಕ್ಕೆ ಬಂದಿದ್ದರು.

ಒಮ್ಮೆಲೆ "ಐನೂರು ರೂಪಾಯಿ ಕೊಡಿ" ಎಂದು ಕೊಕ್ಕೆ ಹಾಕಿದರು. ತಬ್ಬಿಬ್ಬಾದ ನಾವು ಒಬ್ಬರೊನ್ನೊಬ್ಬರು ನೋಡಿಕೊಂಡೆವು. ಮತ್ತೆ ಮತ್ತೆ ಅದೇ ಕೋರಿಕೆ. ಧೈರ್ಯ ತಂದುಕೊಂಡ ಶಾಹ, ಐನೂರು ರೂಪಾಯಿಗಳು "ಏತಕ್ಕೆ" ಎಂದು ಪ್ರಶ್ನಿಸಿದರು.

"ನಾಳಿದ್ದು ನಮಗೆ ಕ್ರಿಸ್‌ಮಸ್ ಹಬ್ಬ, ಎಲ್ಲಾ ರೀತಿಯ ತಯಾರಿ ಮಾಡಿಕೊಂಡಿದ್ದೇವೆ. ಈಗ ಬಿಯರ್ ಮಾತ್ರ ಕೊಂಡುಕೊಳ್ಳಬೇಕಿದ್ದು ಕನಿಷ್ಠ ಎರಡು ಮೂರು ಕ್ರೇಟ್‌ರ್‌ಗಳಷ್ಟು ಬಿಯರ್ ಬೇಕಿದೆ. ನೀವು ಹಣ ಕೊಟ್ಟರೆ ತಂದು ಬಿಡುತ್ತೇವೆ. ಖಂಡಿತ ನೀವೂ ಬರಬೇಕು" ಎಂದು ಆಹ್ವಾನಿಸಿದರು.

ಅರ್ಧ ಗಂಟೆಯಿಂದ ತಲೆ ಬರುಡೆಯಲ್ಲಿ ಕುದಿಯುತ್ತಿದ್ದ ಪ್ರಶ್ನೆಗಳಿಗೆ ಉತ್ತರವೇನೋ ಸಿಕ್ಕಿತು. ಆದರೆ ಐನೂರು ರೂಪಾಯಿಗಳು ಹೆಚ್ಚಾಯಿತಲ್ಲವೇ?

ನಮ್ಮಲ್ಲಿ ಅಷ್ಟು ಹಣವಿಲ್ಲ, ಡಿ.ಡಿ., ಚೆಕ್‌ಗಳಿವೆ ಇನ್ನೂ ಏನೇನೋ ಸಬೂಬುಗಳನ್ನು ಹೇಳಿಕೊಂಡೆವು. ತರಕಾರಿ ಅಂಗಡಿಯಲ್ಲಿ ಗಂಗಾರಾಂ ಕಂಜೂಸಿ ಮಾಡಿದ ಹಾಗೆ ಮಾಡಿನೋಡಿದೆವು. ಹು. ಹು. ಜಗ್ಗಲಿಲ್ಲ. ಕುಣಿತ ಅರ್ಧಗಂಟೆಯಾದರೆ, ಕಂಜೂಸಿ ಇನ್ನರ್ಧ ಗಂಟೆ ನಡೆಯಿತು. ಕೊನೆಗೂ ಇನ್ನೂರಾಐವತ್ತು ರೂಪಾಯಿಗಳನ್ನು ಕೊಟ್ಟು ಸಾಗಾಕಿ ಬಾಗಿಲು ಮುಚ್ಚಿ ಉಸಿರಾಡತೊಡಗಿದೆವು. ಮೈ ಮೂಳೆಗಳನ್ನೆಲ್ಲಾ ಯಾರೋ ತಟ್ಟಿ ಹೋದಂತಾಗಿತ್ತು.

* * *

ಅದೊಂದು ದಿನ ಬೆಳಿಗ್ಗೆ ಏಳು ಗಂಟೆಯಿಂದ ಸಾಯಂಕಾಲ ನಾಲ್ಕು ಗಂಟೆಯವರೆಗೂ ಕಡಿದಾದ ಕಣಿವೆ ಬೆಟ್ಟಗಳನ್ನು ಅಲೆದಲೆದು ಉಸಿರುಬಿಡುತ್ತಾ ವಿಶ್ರಾಂತಿ ಗೃಹ ಸೇರಿಕೊಂಡು ರಾತ್ರಿಯ ಊಟಕ್ಕಾಗಿ ಕಾಯುತ್ತಿದ್ದೇವೆ. ಅಷ್ಟರಲ್ಲಿ ಅಡಿಗೆ ಮನೆಯಿಂದ ಏನೋ ಸದ್ದು ಕೇಳಿಬಂದು ಆ ಕಡೆಗೆ ಕಿವಿ ಕೊಡುತ್ತಿದ್ದಂತೆ ಬಾಗಿಲು ತಳ್ಳಿ ಒಳಕ್ಕೆ ಬಂದ ಕಾಂಚ "ಸಾಬ್ ನಿಮ್ಮನ್ನು ಯಾರೋ ಕರೆಯುತ್ತಿದ್ದಾರೆ" ಎಂದ ಏನೋ ಗೃಹಚಾರ ಮನೆ ಬಾಗಿಲಿಗೆ ಹುಡುಕಿಕೊಂಡು ಬಂದಂತಾಗಿ ಇಬ್ಬರು ಸ್ಲೀಪಿಂಗ್ ಚೀಲಗಳಿಂದ ಹೊರಗೆ ಬಂದು ಅಡಿಗೆ ಕೋಣೆಗೆ ಹೋದೆವು.

ಒಬ್ಬ ಮಧ್ಯ ವಯಸ್ಸಿನ ನಾಗಾ ಇಬ್ಬರನ್ನು ದುರುಗುಟ್ಟಿ ಕೆಳಗಿನಿಂದ ಮೇಲಕ್ಕೆ

ನೋಡಿದ. ಎಲ್ಲಾ ಕ್ಷುದ್ರ ಗ್ರಹಗಳು ಒಟ್ಟಾಗಿ ಸೇರಿ ಆಪತ್ತು ಬಾಗಿಲಲ್ಲೆ ನಿಂತಿದೆ. ಅಮಲೇರಿದ ಕಣ್ಣುಗಳು, ಕೋಪ ಹೆಪ್ಪುಗಟ್ಟಿದ ಮುಖ, ಕೆದರಿದ ತಲೆಕೂದಲು ಇನ್ನೇನು ನಮ್ಮ ಮೇಲೆ ಹಾರಿ ಚಿಂದಿ ಚಿಂದಿ ಮಾಡಿ ಬಿಡುವ ಆವೇಶ.

ನಾಗಾಮೀಸ್ ಅಲ್ಪ ಸ್ವಲ್ಪ ತಿಳಿದಿದ್ದ ಶಾಹೂ ಮುಂದೆ, ನಾನು ಹಿಂದೆ ನಿಂತುಕೊಂಡೆವು.

"ಯಾರು ನೀನು.. ? ಯಾವೂರು"? ಕೇಳಿದ.

"ನನ್ನ ಹೆಸರು ಶಾಹೂ ಅಂತ ಒರಿಸ್ಸಾ ರಾಜ್ಯದವನು ಸೆಂಟ್ರಲ್ ಸರ್ವಿಸ್‌ನಲ್ಲಿ ಜಿ.ಎಸ್.ಐ.ನಲ್ಲಿ ಜಿಯಾಲಜಿಸ್ಟ್" ಅನ್ನುವುದರೊಳಗೆ

"ಘಂಟಾಲಜಿಸ್ಟ್, ಬೆಳಗ್ಗೆ ಏ.ಕೆ.ತಕ್ಕೋಗುತ್ತೇನೆ, ಆಗ ಬಂದು ನೋಡು ಬೇಕಾದಷ್ಟು ಗೋಲ್ಡ್ ಸಿಗುತ್ತದೆ. ಇಂಡಿಯಾದಿಂದ ಇಲ್ಲಿಗ್ಯಾಕೆ ಬಂದೆ..? ನಮ್ಮ ಕೆಲಸ ನಾವು ಮಾಡಿಕೊಳ್ಳುತ್ತೇವೆ. ನಮ್ಮ ನಾಗಾಲ್ಯಾಂಡಿನಲ್ಲಿ ಏನಿದೆ ಏನಿಲ್ಲ ಎಲ್ಲಾ ನಮಗೆ ಗೊತ್ತು ಮುಚ್ಚಿಕೊಂಡು ಇಲ್ಲಿಂದ ಜಾಗ ಖಾಲಿ ಮಾಡಿ. ಬಯಲು ನಾಯಿಗಳೆ" ಯದ್ವಾ ತದ್ವ ಬೈಯ್ಯತೊಡಗಿದ.

"ನೋಡಿ ನಾವೆಲ್ಲ ಒಂದೇ ದೇಶದವರು, ಗೆಳೆಯರು" ಪರಿಸ್ಥಿತಿಯನ್ನು ತಿಳಿಯಾಗಿಸಲು ಶಾಹು ನಗು ಮುಖದಿಂದ ಹೇಳಿದರು.

"ಹಸ್ತಾ ಹೈ (ನಗುತ್ತೀಯಾ) ಸಾಲಾ, ತಪ್ಪಡ್ ಮರೇಗಾ" ಎಂದು ಹೊಡೆಯಲು ಕೈ ಎತ್ತಿಯೇ ಬಿಟ್ಟ. ಹತ್ತಿರವಿದ್ದಿದ್ದರೆ ಹೊಡೆದೇ ಬಿಡುತ್ತಿದ್ದನೋ ಏನೋ..? ಅದೃಷ್ಟವಶಾತ್ ಸ್ವಲ್ಪ ದೂರವೇ ನಿಂತಿದ್ದೆವು. ಪರಿಸ್ಥಿತಿ ಏಕೋ ಕೈ ಮೀರಿ ಹೋಗುವ ಲಕ್ಷಣಗಳು ಕಾಣ ತೊಡಗಿ ಶಾಹೂ ಅವರನ್ನು ಕರೆದುಕೊಂಡು ಕೋಣೆಯ ಒಳಕ್ಕೆ ಬಂದು ಬಿಟ್ಟೆ.

"ನಾಳೆ ಬೆಳಿಗ್ಗೆ ಕೋಹಿಮಾಗೆ ಹೋಗಿ ಮತ್ತೆ ಬರುತ್ತೇನೆ ಅಷ್ಟರೊಳಗೆ ಜಾಗ ಖಾಲಿ ಮಾಡಿದ್ದರೆ ಸರಿ ಇಲ್ಲದಿದ್ದರೆ ಶೂಟ್ ಮಾಡಿ ಬಿಡುತ್ತೇನೆ" ಹಿಂದಿನಿಂದ ಎಚ್ಚರಿಕೆ ಕೊಟ್ಟ. ಬಹಳ ನೊಂದು ಕೊಂಡ ಸಾಹೂ

"ಸಾಲಾ ನಮ್ಮದು ಒಂದು ಕೆಲಸವೆ ?" ಎಂದು ಮಂಚದ ಮೇಲೆ ಕುಕ್ಕುರು ಕುಳಿತರು. ಭಯದ ಮೋಡಗಳು ನಮ್ಮ ಸುತ್ತಲೂ ಕುಣಿಯ ತೊಡಗಿದವು.

ಈ ಜಗಳದ ಇನ್ನೊಂದು ಮುಖ ಆಮೇಲೆ ತಿಳಿಯಿತು. ಅವನೊಬ್ಬ ಪಕ್ಕದ ಹಳ್ಳಿಯ ಪುಡಾರಿಯಾಗಿದ್ದು ಹೆಂಡತಿಯ ಜೊತೆಗೆ ಕೋಹಿಮಾದಿಂದ ಟುಇನ್ ಸಾಂಗ್‌ಗೆ ಹೋಗುತ್ತಿರಲು ಕತ್ತಲ ಜತೆ ಕುಡಿತದ ಮತ್ತೇರಿ ಜೀಪನ್ನು ನಡೆಸಲಾಗದೆ ಅತಿಥಿ ಗೃಹದಲ್ಲಿ ಉಳಿದುಕೊಳ್ಳಲು ಬಂದನಂತೆ. ಇ.ಎಸಿ.ಯನ್ನು ಸಂಧಿಸಿ ಕೋಣೆಯನ್ನು ಕೇಳಲು ಇಬ್ಬರು ಅಧಿಕಾರಿಗಳು ಈಗಾಗಲೆ ಒಂದು ಕೋಣೆಯಲ್ಲಿ ತಂಗಿದ್ದು ಉಳಿದಿರುವ ಕೋಣೆಯಲ್ಲಿ ನೀವಿರಬಹುದು. ಎಂದರಂತೆ. ಆ ಕೋಣೆ ನನಗೆ ಬೇಕಾಗಿಲ್ಲ. ಅವರಿರುವ ಕೋಣೆಯೇ ಬೇಕೆಂದು ಹಟ ಹಿಡಿದಾಗ ಇಎಸಿ ಹೊರಕ್ಕೆ ದಬ್ಬಿದನಂತೆ.

ನಾನು ಸ್ಥಳೀಯ ನನಗಿಲ್ಲದ ಆಧ್ಯತೆ ಬಯಲು ಇಂಡಿಯಾದವರಿಗೇಕೆ ? ಎಂದು ಕಿಡಿ ಕಾರುತ್ತಾ ನೇರವಾಗಿ ಅಡಿಗೆ ಮನೆಯೊಳಕ್ಕೆ ಬಂದು ರೋಟಿಗಳನ್ನು ಮಾಡುತ್ತಿದ್ದ ಕಾಂಚಾನನ್ನು.. ಯಾರಿಗೆ ಈ ರೋಟಿಗಳು..? ಕೇಳಿದನಂತೆ. ಕಾಂಚಾ ನಮ್ಮ ಸಾಬರಿಗೆ ಎಂದಿದ್ದ. ಏಯ್ ನನಗೆ. ನಾನು ತಿನ್ನುತ್ತೇನೆ. ಎಂದು ನಾಗ ಹೇಳಿದಾಗ. ಇಲ್ಲ ನಮ್ಮ ಸಾಬರಿಗೆ ಎಂದು ಕಾಂಚ ತಡೆದನಂತೆ. ಕೋಪಗೊಂಡ ನಾಗ ಯಾರು ನಿಮ್ಮ ಸಾಬ್ ಕರಿ ಎಂದನಂತೆ. ಬಹುಶಃ ಅವನು ರೋಟಿಗಳನ್ನು ಕೇಳಿದಾಗ ಕೊಟ್ಟುಬಿಟ್ಟಿದ್ದರೆ ಅಷ್ಟು ರಂಪಾಟ ಆಗುತ್ತಿರಲಿಲ್ಲವೇನೋ.

ಬೆಳಿಗ್ಗೆ ನಾವು ಏಳುವುದಕ್ಕಿಂತ ಮುಂಚೆಯೇ ಅವನು ಹೊರಟು ಹೋಗಿದ್ದು ನಮಗೆ ಸ್ವಲ್ಪ ಸಮಾಧಾನವಾಯಿತು. ಅನಂತರ ಇ.ಎ.ಸಿಯನ್ನು ಸಂಧಿಸಿ ವಿಷಯವನ್ನು ತಿಳಿಸಿದೆವು. ನೀವೇನು ಭಯಪಡಬೇಡಿ. ಅವನು ಬರುವುದಿಲ್ಲ. ಬಂದರೂ ನಾನು ನೋಡಿಕೊಳ್ಳುತ್ತೇನೆ. ಕುಡಿದು ಜಾಸ್ತಿಯಾಗಿರಬೇಕು. ಇಷ್ಟಕ್ಕೆಲ್ಲ ಹೆದರಿಕೊಂಡರೆ ಹೇಗೆ ? ಎಂದು ಧೈರ್ಯ ಹೇಳಿದರು. ಅವರು ಸ್ಥಳೀಯರು ಎಷ್ಟೋ ಧೈರ್ಯ ಹೇಳಿದರೂ ರಿಸ್ಕ್ ತೆಗೆದುಕೊಳ್ಳಬೇಕಾದವರು ನಾವೆ ತಾನೆ.. ? ಆಸ್ಥಳ ನಮ್ಮ ಕೆಲಸಕ್ಕೆ ಸರಿ ಹೊಂದುವ ಸ್ಥಳವಾಗಿದ್ದರಿಂದ ಅಲ್ಲೇ ಉಳಿದುಕೊಳ್ಳಲು ತೀರ್ಮಾನಿಸಿದೆವು.

ಇದರ ನಡುವೆ ನಾವಿದ್ದ ಅತಿಥಿ ಗೃಹದಲ್ಲಿ ಇನ್ನೊಂದು ಪೀಕಲಾಟ ಪ್ರಾರಂಭವಾಗಿತ್ತು. ರಾತ್ರಿ ಸುಮಾರು ಹನ್ನೆರಡು ಗಂಟೆ ದಾಟಿದ ಮೇಲೆ ಅತಿಥಿ ಗೃಹದ ಹಾಲು, ಸ್ಥಳೀಯ ಪ್ರೇಮಿಗಳ ಸರಸ ಸಲ್ಲಾಪದ ತಂಗುದಾಣವಾಗಿ ಬಿಡುತ್ತಿತ್ತು. ಯೂರೋಪಿಯನ್ ಸಂಸ್ಕೃತಿಯ ಈ ಯುವ ಜನತೆ ಬೀರು, ಬ್ರಾಂದಿ ಮಾದಕ ವಸ್ತುಗಳ ಸಮೇತ ಲೈಂಗಿಕ ಚಟುವಟಿಕೆಗಳಲ್ಲೂ ತೊಡಗಿ ಬಿಡುತ್ತಿದ್ದರು. ಅದು ಒಂದೊಂದು ಜೋಡಿಯಲ್ಲ. ಒಂದೇ ಸಲಕ್ಕೆ ಗುಂಪು ಗುಂಪಾಗಿ ಎಂಗೇಜಾಗಿಬಿಡುತ್ತಿದ್ದರು.

ಮತ್ತೆ ಬೆಳಗ್ಗೆ ಐದು ಗಂಟೆಗೆಲ್ಲಾ ಯಾರೂ ಇರುತ್ತಿರಲಿಲ್ಲ. ಕೆಲವೊಂದು ಸಲ ಎದ್ದು ಹೋಗಲಾರದೆ ಕಿಕ್ ಆಗಿ ಕೆಲವರು ಅಲ್ಲಿಯೇ ಬಿದ್ದಿರುತ್ತಿದ್ದರು. ನನಗಂತೂ ಅವರ ಚಟುವಟಿಕೆಗಳನ್ನು ನೋಡಿ ಹೊಟ್ಟೆ ಉರಿದು ಹೋಗುತ್ತಿತ್ತು. ನಮ್ಮ ಚಾಲಕ ಅವನಿಗೆ ಬೇಕಾದ ವ್ಯವಸ್ಥೆಯನ್ನು ಆಗಲೆ ಮಾಡಿಕೊಂಡಿದ್ದ ಎನ್ನುವುದಾಗಿ ನಮ್ಮ ಕಾಂಚಾ ವರದಿ ಮಾಡಿದ್ದ. ಜೊತೆಯಲ್ಲಿದ್ದ ಒಂದಿಬ್ಬರು ಲೇಬರುಗಳು

"ಆವೋ ಸಾಬ್ ಬಸ್ತಿಮೆ ಮೀಟ್‌ಕಾವೋ.. ಮದು ಪೀಯೋ.. ಲಡಕಿಕ ಸಾತ್ ಬಾತ್ ಕರೋ... ಮೋಜ್ ಕರೋ" ಎಂದು ಹುರಿದುಂಬಿಸುತ್ತಿದ್ದರು. ನಮ್ಮ ಸಾಹೂ ಅವರು ಹೋದ ಹಿಂದೆಯೇ

"ಸಾಲಾ ಕ್ಯಾ ಹಮ್ ಲೋಗ್ ಮರ್‌ನಾ ಹೈ ಕ್ಯಾ"? ಎಂದು ಪೆಚ್ಚು ಮೋರೆ ಹಾಕಿಕೊಂಡು ನಗುತ್ತಿದ್ದರು.

* * *

## 17 ಖೇರಿಮಾ ಜಿಬಿ, ಅಡಿಗೆ ಮನೆ ಮತ್ತು ಕತ್ತಲು

ದಕ್ಷಿಣ ಭಾರತದ ಬೆಟ್ಟಗಳಿಗಿಂತ ಎಷ್ಟೋ ಮಿಲಿಯ ವರ್ಷಗಳಷ್ಟು ಕಿರಿಯ ವಯಸ್ಸಿನ ಈ ಹಿಮಾಲಯ ಬೆಟ್ಟಗಳು ಇನ್ನೂ ಮೊನಚು ಶಿಖರಗಳಾಗಿ ಎತ್ತರಕ್ಕೆ ನಿಂತಿದ್ದರೆ, ನದಿಗಳು ಬೆಟ್ಟಗಳ ಆಳಕ್ಕೆ ಕೊರೆದು ರಭಸದಿಂದ ಮಿಡಿ ನಾಗರಗಳಂತೆ ಓಡುತ್ತಿವೆ. ಈ ಹಿಮಾಲಯದಲ್ಲಿ ಕೇವಲ ಸಾವಿರ ಮೀಟರುಗಳನ್ನು ಏರಿದರೂ ಸರಿ, ಇಲ್ಲ ಇಳಿದರೂ ಸರಿ ಕೈ ಕಾಲುಗಳು ಸೆಳೆತಗೊಂಡು ಬಿರುಸಾಗಿಬಿಡುತ್ತವೆ. ಒಂದು ದಿನ ಬೆಳಿಗ್ಗೆ ನಾವಿರುವ ಹಳ್ಳಿಯಿಂದ ಸುಮಾರು ಹದಿನೈದು ಕಿ.ಮೀಟರ್‌ಗಳು ದೂರವಿರುವ ಖೇರಿಮಾ ಹಳ್ಳಿಯನ್ನು ತಲುಪಿದೆವು.

ಬೆಟ್ಟದ ತುತ್ತ ತುದಿಯಲ್ಲಿರುವ ಆ ಊರಿನ ಜಿಬಿ ಎದುರಿಗೆ ಸಿಕ್ಕಿ ತನ್ನ ಮನೆಯ ಕಡೆಗೆ ಕರೆದುಕೊಂಡು ನಡೆದ. ಹತ್ತಿ ಇಳಿದು ಸುತ್ತಿ ಬಳಸಿ ಹೋಗುತ್ತಿದ್ದಂತೆ ಅಲ್ಲಿ ಇಲ್ಲಿ ಹೆಂಗಸರು ಮತ್ತು ಮಕ್ಕಳು ಇಣುಕಿ ಇಣುಕಿ ನೋಡುತ್ತಿದ್ದಾರೆ. ಮರದ ಕಂಬಗಳ ಆಧಾರದಿಂದ ರೂಪಿಸಿರುವ ಮನೆಗಳ ಮೇಲೆ ಹುಲ್ಲಿನ ಹೊದಿಕೆ ಇದ್ದರೆ, ಕೆಳಗೆ ಹಂದಿ ಕೋಳಿಗಳ ಸಂಸಾರ. ಉತ್ತರ ಈಶಾನ್ಯದ ಒಳನಾಡಿನಲ್ಲಿ ಅದರಲ್ಲೂ ತುಂಬಾ ಹಿಂದುಳಿದ ಪ್ರದೇಶಗಳಲ್ಲಿ ಇದೇ ರೀತಿಯ ಮನೆಗಳಲ್ಲಿ ಜೀವನ ನಡೆಸುವ ಜನ ಮೇಲಿಂದ ಉಚ್ಚೆ ಹೇಲು ಮಾಡುತ್ತಿರಲು ಕೆಳಗಡೆ ಹಂದಿ ಕೋಳಿಗಳು ಸಂಸಾರ ಮಾಡುತ್ತಿರುತ್ತದೆ. ಈ ರೀತಿಯ ದೃಶ್ಯಗಳು ಟ್ಯುಯಿನ್ ಸಾಂಗ್‌ನ ಜಿಲ್ಲೆಯ ಹಳ್ಳಿಗಳಲ್ಲಿ ಹೇರಳವಾಗಿ ಕಾಣಸಿಗುತ್ತವೆ. ಆದರೆ ಇಲ್ಲಿ ಸಧ್ಯಕ್ಕೆ ಹಾಗಿರಲಿಲ್ಲ.

ನಾಗಾ ಗಂಡಸರು ಸಾಮಾನ್ಯವಾಗಿ ಪ್ಯಾಂಟು, ನಿಕ್ಕರ್, ಅಂಗಿ ಧರಿಸಿ ನಾಗಾ ಶಾಲುಗಳನ್ನು ಹೊದ್ದಿರುತ್ತಾರೆ. ಒಂದೊಂದು ಉಪ ಬುಡಕಟ್ಟಿಗೂ ಒಂದೊಂದು ಪ್ರತ್ಯೇಕ ಕುಸುರಿ ಬಿಡಿಸಿರುವ ಬಣ್ಣದ ಶಾಲು ಇರುತ್ತದೆ. ಆ ಶಾಲುಗಳನ್ನು ನೋಡಿದ ತಕ್ಷಣವೇ ಅವರ ಪಂಗಡವನ್ನು ಗುರುತಿಸಬಹುದು. ಹೆಂಗಸರು ಸಾಮಾನ್ಯವಾಗಿ ತಾವೇ ಹೆಣೆದ ಉಣ್ಣೆ ಶಾಲುಗಳನ್ನು ನಡುಗಳಿಗೆ ಲುಂಗಿಯಂತೆ ಸುತ್ತಿಕೊಂಡು, ಮೇಲೆ ದೊಗಲು ಕುಪ್ಪಸ ಅಥವಾ ಒಂದು ರೀತಿಯ ಅಂಗಿಗಳನ್ನು ಧರಿಸಿರುತ್ತಾರೆ. ಸ್ವಲ್ಪ ಮಾಡರ್ನ ಹೆಣ್ಣುಗಳು ಗಂಡು ಹುಡುಗರಂತೆ ಪ್ಯಾಂಟು ಮತ್ತು ಅಂಗಿಗಳನ್ನೇ ಧರಿಸುತ್ತಾರೆ.

ಸುತ್ತಿ ಬಳಸಿ ಜಿಬಿ ಮನೆ ತಲುಪುವುದರೊಳಗೆ ಆ ಊರಿನ ಎಲ್ಲಾ ಮನೆಗಳ

ಮುಂದೆಯೂ ಒಂದು ಸಾಮಾನ್ಯ ದೃಶ್ಯ ಕಂಡು ಬಂದಿತು. ಮಿಥುನ್, ಕರಡಿ, ಜಿಂಕೆ, ಕಾಡು ಹಂದಿ, ಕೋತಿ, ನಾಯಿ, ನರಿ, ಹಸು, ಎಮ್ಮೆ ಹೀಗೆ ಎಲ್ಲಾ ರೀತಿಯ ಪ್ರಾಣಿಗಳ ತಲೆ ಬುರುಡೆ, ಕೊಂಬು ಮತ್ತು ಕೆಲವು ಕಳೇಬರಗಳನ್ನು ಮನೆಯ ಮುಂದಿನ ಗೋಡೆಗಳಿಗೆ ಗೆದ್ದು ತಂದ ಟ್ರೋಫಿಗಳಂತೆ ನೇತು ಹಾಕಿದ್ದಾರೆ. ಅದೆಲ್ಲ ಅವರು ಸವಿದಿರುವ ಗತ ವೈಭವದ ಕುರುಹುಗಳು.

ಹಿಂದೊಮ್ಮೆ ಎದುರಾಳಿಗಳನ್ನು ಬೇಟೆಯಾಡಿ ತರುತ್ತಿದ್ದ ಮನುಷ್ಯರ ತಲೆ ಬುರುಡೆಗಳನ್ನು ಹೀಗೆಯೇ ಮನೆಗಳ ಮುಂದೆ ಪ್ರದರ್ಶಿಸುತ್ತಿದ್ದರಂತೆ. ಜಿಬಿ ನೇರವಾಗಿ ತನ್ನ ಅಡಿಗೆ ಮನೆಯ ಒಳಕ್ಕೆ ನಮ್ಮನ್ನು ಕರೆದೊಯ್ದ. ಒಳಗಿದ್ದ ಹೆಂಗಸು ಬಹುಶಃ ಜಿಬಿ ಹೆಂಡತಿ, ನಮ್ಮನ್ನು ನೋಡಿದ್ದೆ, ಒಲೆಯ ಮುಂದೆ ಸಣ್ಣ ಮಣೆಗಳನ್ನು ಹಾಕಿದಳು. 15x15 ಅಡಿಗಳ ಗುಡಿಸಲೆನ್ನಬಹುದಾದ ಅಡಿಗೆ ಮನೆ. ಮಧ್ಯದಲ್ಲಿ ಅಗಲವಾದ ನಾಲ್ಕು ಕಲ್ಲುಗಳ ಒಲೆ. ಕಲ್ಲುಗಳ ಮೇಲೆ ಎರಡು ಉದ್ದವಾದ ಕಬ್ಬಿಣ ಸಲಾಕೆಗಳು. ಕೆಳಗೆ ಉರಿಯುತ್ತಿರುವ ಬೆಂಕಿ. ಅದರ ಮೇಲೆ ಒಂದು ದೊಡ್ಡ ಅಲ್ಯೂಮಿನಿಯಂ ಪಾತ್ರೆ ಪಾತ್ರೆ ಒಳಗೆ ಕುದಿಯುತ್ತಿರುವ ಯಾವುದೋ ಪ್ರಾಣಿಯ ದೊಡ್ಡ ದೊಡ್ಡದಾದ ಮೂಳೆ ಮಾಂಸದ ತುಂಡುಗಳು. ಒಲೆಗೆ ಸುಮಾರು ನಾಲ್ಕೈದು ಅಡಿಗಳ ಎತ್ತರದಲ್ಲಿ, ಸೌದೆಯಲ್ಲಿ ಮಾಡಿರುವ ಒಂದು ಸಣ್ಣ ಛಾವಣಿ. ಛಾವಣಿಯ ಮೇಲೆ ಕೆಳಗಿನ ಹೊಗೆಯನ್ನು ಹೀರಿಕೊಳ್ಳುತ್ತಿರುವ ಒಂದೆರಡು ದೊಡ್ಡದಾದ ಎಮ್ಮೆಯ ತೊಡೆಗಳು. ಅದಕ್ಕಿಂತ ಮೇಲೆ ಮಾಡಿನಲ್ಲಿ ಯಾವುದೋ ಒಣಗಿದ ಎಲೆಗಳಲ್ಲಿ ಪೊಟ್ಟಣ ಕಟ್ಟಿ ಸಿಕ್ಕಿಸಿರುವ ಸಾಲು ಸಾಲು ನಾಗಾ ಉಪ್ಪು ಪೊಟ್ಟಣಗಳು.

ಸುತ್ತಲು ಗೋಡೆಗಳ ಮೇಲೆ ಕಪ್ಪಾಗಿ ಹೊಗೆಯನ್ನೆಲ್ಲಾ (smoked meat) ಹೀರಿಕೊಂಡು ನೇತಾಡುತ್ತಿರುವ ತೊಡೆ, ಕಾಲು, ಎದೆ, ತಲೆ, ಹೀರಲು, ಪುಪ್ಪುಸ, ಮೂಳೆ, ಚರ್ಮ, ಬಾಲ, ನಾಲಿಗೆ, ಸೀಳಿದ ಅಂಡಗಳು ಇನ್ನೂ ಏನೇನೋ ಮಾಂಸದ ಮುದ್ದೆಗಳು. ಒಂದೆರಡು ನಿಮಿಷ ಬೆಕ್ಕಸ ಬೆರಗಾಗಿ ಅವುಗಳನ್ನೆಲ್ಲಾ ನೋಡುತ್ತಲೆ ಇದ್ದುಬಿಟ್ಟೆ. ನನ್ನ ಆಶ್ಚರ್ಯದ ಕಣ್ಣುಗಳನ್ನು ಗಮನಿಸಿದ ಜಿಬಿ. "ಊಹೋ" ಎಂದು ಪೀಠಿಕೆ ಹಾಕಿದ.

"ಹೋದ ವಾರ ನನ್ನ ಮಗಳ ಮದುವೆಯಾಯಿತು. ಮದುವೆಯಲ್ಲಿ ತಿಂದು ಉಳಿದದ್ದೇ ಈ ಮಾಂಸ" ಎಂದ. ಪಕ್ಕದಲ್ಲೇ ಇದ್ದ ಹೆಂಗಸು ಸೌಟಿನಿಂದ ಕುದಿಯುತ್ತಿದ್ದ ಮಾಂಸವನ್ನು ತಿರುವಿಹಾಕುತ್ತಾ ಅದರ ಪಕ್ಕದಲ್ಲೇ ಇನ್ನೊಂದು ಪಾತ್ರೆ ಇಟ್ಟು ಚಹ ಮಾಡ ತೊಡಗಿದಳು.

"ಕುದಿಯುತ್ತಿರುವುದು ಏನು ಮಾಂಸ?" ನಿಗೂಢತೆಯನ್ನು ತಡೆದುಕೊಳ್ಳಲಾರದೆ ಕೇಳಿದೆ.

"ಮೊಲದ ಮಾಂಸ್ಸ್. ಬಹಳ ಅಪರೂಪವಾಗಿ ಬಹಳ ದಿನಗಳ ನಂತರ ನಮ್ಮ ಹುಡುಗರು ಹಿಡಿದು ತಂದಿದ್ದಾರೆ. ಕಾಯಬೋ?" ಬಿಜ ಕೇಳಿದ.

"ತಿನ್ನುತ್ತೇವೆ. ಆದರೆ ಸಧ್ಯಕ್ಕೆ ಬೇಡ" ಎಂದೆ.

"ನಾಯಿ ಕೂಡ ತಿನ್ನುತ್ತೀರಾ?" ಎಂದವನೆ ಅಲೆಅಲೆಯಾಗಿ ನಕ್ಕ.

"ಕುರಿ, ಮೇಕೆ, ಕೋಳಿ, ಮೀನು ಮಾತ್ರ ತಿನ್ನುತ್ತೇವೆ" ಶಾಹೂ ಹೇಳಿದರು.

"ಸ್ವಲ್ಪ ಮೊಲದ ಮಾಂಸ್ಸ್ ತಿನ್ನಿ" ಆಹ್ವಾನಿಸಿದ.

"ಇಲ್ಲ ನಾವು ಹೊಟ್ಟೆ ತುಂಬಾ ಊಟ ಮಾಡಿ ಜೊತೆಗೆ ಬುತ್ತಿ ಕೂಡ ತಂದಿದ್ದೇವೆ" ಎಂದೆವು.

"ಹಾಗಾದರೆ ನಾನು ತಿನ್ನುತ್ತೇನೆ" ಎಂದ ಜಿಬಿ ತಿನ್ನುತ್ತಾ ಹೋದ.

"ನಮ್ಮ ಜೊತೆಗೆ ಯಾರಾದರು ಇಬ್ಬರೋ ಮೂವರೋ ಗಂಡಸರನ್ನು ಕಳುಹಿಸಿಕೊಟ್ಟರೆ ನಾವು ಕೆಲಸಕ್ಕೆ ಹೊರಡುತ್ತೇವೆ" ಸಾಹು ಹೇಳಿದರು.

"ನಾವೇ ಇಬ್ಬರು ಬರಬಹುದಲ್ಲವೆ ?" ಎದುರಿಗೆ ಕುಳಿತಿದ್ದ ಇನ್ನೊಬ್ಬನ ಕಡೆ ನೋಡಿ ಹೇಳಿದ ಜಿಬಿ.

"ಒಳ್ಳೆಯದೆ ಆಯಿತು" ಶಾಹು ಹೇಳಿದರು.

"ಹೌದು ನೀವು ಯಾವ ಕಡೆಗೆ ಹೋಗಬೇಕಾಗಿದೆ ? ನೋಡಬೇಕಾಗಿರುವುದಾದರೂ ಏನು?" ಪ್ರಶ್ನಿಸಿದ. ಅವರ ಊರಿನ ಉತ್ತರಕ್ಕೆ ಹರಿಯುತ್ತಿರುವ ಒಂದು ನದಿಯ ಹೆಸರನ್ನು ಹೇಳಿ,

"ಆ ಊರಿನ ಉದ್ದಗಲಕ್ಕೂ, ಕಲ್ಲಿದ್ದಲು ಮತ್ತು ಪೆಟ್ರೋಲ್ ಸಿಗುವ ಕುರುಹುಗಳೇನಾದರೂ ಇದೆಯೋ ನೋಡಬೇಕು. ಎಲ್ಲಾದರೂ ಕಲ್ಲಿದ್ದಲೋ ಅಥವಾ ಎಣ್ಣೆ ಸೂಸುವ ಬುಗ್ಗೆಗಳೇನಾದರೂ ನೋಡಿದ್ದೀರಾ ?" ಶಾಹು ಕೇಳಿದರು.

ಅನ್ನದ ಜೊತೆ ಕುದಿ ಬಿಸಿ ಬಿಸಿ ಮಾಂಸ ತಿನ್ನುತ್ತಿದ್ದ ಜಿಬಿ,

"ಹೋಯ್... ಹೋಯ್... ಅದಾ ವಿಷಯ. ಒಂದೆರಡು ಕಡೆ ಕಪ್ಪು ಕಪ್ಪಾದ

ಇದ್ದಿಲು ಕಲ್ಲುಗಳೇನೋ ಇವೆ. ಆದರೆ ಎಣ್ಣೆ ಸೂಸುವ ಚಿನ್ಹೆಗಳು ಮಾತ್ರ ಕಂಡಿಲ್ಲವಲ್ಲ..." ದೀರ್ಘ ತೆಗೆದ, ಜಿಬಿ.

ಅಷ್ಟರಲ್ಲಿ ನಾಗಾ ಚಹ ತುಂಬಿಕೊಂಡ ಚಹ ಬಟ್ಟಲುಗಳು ನಮ್ಮ ಮುಂದೆ ಕುಳಿತುಕೊಂಡವು. ಹಾಲಿಲ್ಲದ ಕಂದುಬಣ್ಣದ ನಾಗಾ ಚಹ ಕುಡಿಯುತ್ತಿದ್ದರೆ ಚಳಿಯ ಜೊತೆಗೆ ಚಹ ತನ್ನದೇ ಆದ ಒಂದು ಹಿತವಾದ ಒಪ್ಪಂದ ಮಾಡಿಕೊಂಡಂತಿತ್ತು.

ಮಧ್ಯ ಮಧ್ಯ ಜಿಬಿ, "ಹೋಯ್, ಹೋಯ್, ಕೀ ಚಾಬೋ, ಆಯಿಲೇ, ಹೋಯಿಲೇ..." ಎಂದು ಹ್ಹೂ ಗುಡುತ್ತಾ ತಿನ್ನುತ್ತಲೇ ಇದ್ದ. ಆ ಮಾಂಸ ಸಾಲದೆಂಬಂತೆ ನೇತಾಕಿ ಹೊಗೆ ಕಟ್ಟಿ ಹೋಗಿದ್ದ ಕೆಂಪು ಮಿಶ್ರಿತ ಕಪ್ಪು ತೊಡೆಗಳಿಂಡ ಕತ್ತರಿಸಿದ ತುಂಡುಗಳು ಎಣ್ಣೆಯಲ್ಲಿ ಕರಿದುಕೊಂಡು ಅವನ ತಟ್ಟೆಯಲ್ಲಿ ಬೀಳುತ್ತಲೇ ಇವೆ. ನಮಗೆ ಸಮಯದ ಬಗ್ಗೆ ಆತಂಕ ಮೂಡುತ್ತಿದೆ.

ಈ ದಿನ ತೆಗೆದುಕೊಳ್ಳಲಿರುವ ಟ್ರಾವರ್ಸ್ ಸುಮಾರು ದೂರವಿದ್ದು, ಕೆಲವು ಮುಖ್ಯ ಭೂಭಾಗಗಳನ್ನು ನೋಡಲೇ ಬೇಕೆಂದು ನಿರ್ಧಾರ ಮಾಡಿಯೇ ಬಂದಿದ್ದೇವೆ. ಈ ಹಿಮಾಲಯದ ತಪ್ಪಲುಗಳಲ್ಲಿ ಕೆಲವು ಭೂಭಾಗಗಳನ್ನು ತಲುಪಬೇಕೆಂದರೆ ಯಾವುದೇ ಅಡ್ಡ ದಾರಿಯಲ್ಲಿ ಹೋದರೂ ದೂರ ನಡೆಯಲೇ ಬೇಕಾಗುತ್ತದೆ. ಒಮ್ಮೆ ಹೋದರೆ ಸಾಧ್ಯವಾದಷ್ಟು ದೂರದ ಭಾಗಗಳನ್ನು ಒಮ್ಮೆಲೇ ನೋಡಿ ಹಿಂದಕ್ಕೆ ಬಂದು ಬಿಡಬೇಕು. ಇಲ್ಲದಿದ್ದರೆ ಒಂದು ತಳ (base) ಶಿಬಿರವನ್ನು ಸ್ಥಾಪಿಸಿ ಅಲ್ಲಿಂದ ಹಂತ ಹಂತವಾಗಿ ಸಣ್ಣ ಸಣ್ಣ ಶಿಬಿರಗಳನ್ನು ಹಾಕಿಕೊಳ್ಳುತ್ತಾ ಹಿಮಾಲಯದ ಶಿಖರಗಳಿಗೆ ಹೋಗುವ ಯಾತ್ರಿಗಳಂತೆ ಮುಂದಕ್ಕೆ ಹೋಗಬೇಕು. ಅದಕ್ಕೆಲ್ಲಾ ಸುಮಾರು ಹಣ ಬೇಕಾಗುತ್ತದೆ.

ಜಿಬಿ ಒಂದು ಸಣ್ಣ ಚೀಲವನ್ನು ಹೆಗಲಿಗೆ ನೇತಾಕಿಕೊಂಡು ತಯಾರಾದರೆ, ಇನ್ನೊಬ್ಬ ನೇರವಾಗಿ, ಎದ್ದುನಿಂತ. ಶ್ರೀಮತಿ ಜಿಬಿಗೆ ಕೃತಜ್ಞತೆಗಳನ್ನು ಸಲ್ಲಿಸಿ ಆ ಶಿಖರದ ಹಳ್ಳಿಯಿಂದ ಕೆಳಕ್ಕೆ ಇಳಿಯತೊಡಗಿದೆವು. ಸಮತಟ್ಟಾದ ನೆಲದಲ್ಲಿ ಬಿದಿರು ಮರಗಳ ಮೇಲೆ ಕಟ್ಟಿರುವ ಪುಟ್ಟ ಪುಟ್ಟ ಚಾವಣಿ ಗುಡಿಸಲುಗಳು. ಗುಡಿಸಲುಗಳ ಎಲ್ಲಾ ಬಾಗಿಲುಗಳನ್ನೂ ಮುಚ್ಚಿ ಬೀಗ ಹಾಕಿದ್ದು, ಅಲ್ಲಿ ಮನುಷ್ಯರ ಸುಳಿವೇ ಇಲ್ಲದ ಕಾರಣ ಏನಿರಬಹುದೆಂಬ ಕುತೂಹಲದಿಂದ,

"ಆ ಗುಡಿಸಲುಗಳಲ್ಲಿ ಏನಿದೆ?" ಕೇಳಿದೆ.

"ಆ ಗೋರ್‌ಗಳಲ್ಲಿ (ಮನೆಗಳು) ದವಸಿ ಧಾನ್ಯಗಳನ್ನು ಸಂಗ್ರಹಿಸಿಟ್ಟಿದ್ದೇವೆ"

"ಕಳ್ಳತನ ಆಗುವುದಿಲ್ಲವೆ...?" ಮತ್ತೆ ಕೇಳಿದೆ.

"ಇಲ್ಲಿ ಯಾವಾಗಲೂ ಆಗಿಲ್ಲ ಆಗುವುದೂ ಇಲ್ಲ" ಅವನ ಮಾತುಗಳಲ್ಲಿ ಧೃಡತೆ ತುಂಬಿಕೊಂಡಿತ್ತು.

ಆ ಊರು, ಆ ಗುಡಿಸಲುಗಳು, ಎದುರು ಬದುರು ನಿಂತಿರುವ ಹುಲ್ಲು ಮನೆಗಳು, ಆಟವಾಡುತ್ತಿರುವ ಪುಟ್ಟ ಮಕ್ಕಳು, ಮನೆಗಳ ಮೇಲೆ ಹೊರ ಹೊಮ್ಮುತ್ತಿರುವ ಹೊಗೆ, ಸುತ್ತ ಮುತ್ತಲ ಕಾಡು, ನೀಲಾಕಾಶ, ಎಲ್ಲವೂ ಯಾವಾಗಲೋ ನ್ಯಾಷನಲ್ ಜಿಯಾಗ್ರಫಿಯಲ್ಲಿ ನೋಡಿದ್ದ ಆಫ್ರಿಕಾ ಖಂಡದ ಒಂದು ದೃಶ್ಯವನ್ನು ಹೋಲುವಂತಿತ್ತು.

ಗುಡಿಸಲುಗಳನ್ನು ದಾಟಿ ಕೆಳಕ್ಕೆ ಇಳಿಯುತ್ತಿದ್ದಂತೆ ಇಳಿಜಾರಿನಲ್ಲಿ ಒಂದು ಮರ ತನ್ನ ಬುಡದ ಬೇರುಗಳನ್ನು ಆಕ್ಟೋಪಸ್‌ನಂತೆ ಒಟ್ಟುಗೂಡಿಸಿಕೊಂಡು ನೆಲದಿಂದ ಹೊರಕ್ಕೆ ಬಂದು ಮಕ್ಕರಿಯಂತೆ ಎತ್ತರವಾಗಿ ಎದ್ದು ನಿಂತಿದೆ. ಮರದ ಕೆಳಗಡೆ ಒಂದು ಕಲ್ಲು ಕಟ್ಟೆ. ಕಟ್ಟೆಯ ಹೃದಯವನ್ನು ಬೇದಿಸಿ ಛಿದ್ರ ಛಿದ್ರವಾಗಿಸಿರುವ ಬೇರುಗಳು ಆ ಕಟ್ಟೆಯ ಸುತ್ತಲೂ ಕುಳಿತು, ಮಲಗಿ ನಿಂತಿರುವ ಗೋರಿ ಕಲ್ಲುಗಳು, ಐಮೀನ್ ಆ ಊರಿನ ಆತ್ಮಗಳು. ಸುತ್ತಲು ಹರಡಿಕೊಂಡಿವೆ. ಕೆಲವು ಕ್ರಿಸ್ತರ ಶಿಲುಬೆ ಆಕಾರದ ಕಲ್ಲುಗಳಾಗಿದ್ದರೆ, ಇನ್ನೂ ಕೆಲವು ಹಿಂದೂ ಸ್ಮಶಾನದಲ್ಲಿರುವ ಗೋರಿ ಕಲ್ಲುಗಳಂತಿದ್ದವು.

ಆ ಗೋರಿ ಕಲ್ಲುಗಳ ಬಗ್ಗೆ ಕೇಳಿದಾಗ ಜಿಬಿ

"ಹೆಚ್ಚೂ ಕಡಿಮೆ ಊರಿನ ಎಲ್ಲಾ ಕುಟುಂಬಗಳು ಕ್ರೈಸ್ತರಾಗಿದ್ದು ಸತ್ತಾಗ ಶವಗಳನ್ನು ಮರದ ಪೆಟ್ಟಿಗೆಯಲ್ಲಿಟ್ಟು ಸಮಾಧಿ ಮಾಡುತ್ತಾರೆ" ಎಂದ.

"ಎಲ್ಲರೂ ಕ್ರೈಸ್ತರಾದರೆ ಎಲ್ಲಾ ಗೋರಿ ಕಲ್ಲುಗಳು ಶಿಲುಬೆಯಾಕಾರದ ಕಲ್ಲುಗಳಾಗಿಲ್ಲವಲ್ಲ ?" ಎಂದಿದ್ದಕ್ಕೆ,

"ಕೆಲವರು ಈಗಲೂ ಸಮಾಧಿಗಳ ಮೇಲೆ ಹಳೆಯ ರೀತಿಯ ಗೋರಿ ಕಲ್ಲುಗಳನ್ನೇ ಇಡಲು ಇಷ್ಟ ಪಡುತ್ತಾರೆ" ಎಂದ.

ಇಳಿಜಾರಿನಲ್ಲಿ ಇಳಿದು ಹೋಗುತ್ತಿದ್ದಂತೆ ಅಲ್ಲೊಬ್ಬರು ಇಲ್ಲೊಬ್ಬರು ಹೆಂಗಸರು ಗಂಡಸರು ತಮ್ಮ ಮರದ ಬುಟ್ಟಿಗಳಲ್ಲಿ ಸೌದೆ, ಸೊಪ್ಪು, ದವಸ ಧಾನ್ಯಗಳನ್ನು ಹೊತ್ತು ಕೊಂಡು ಒಂದು ರೀತಿಯಲ್ಲಿ ಆಯಾಸ ನಿವಾರಿಸಿಕೊಳ್ಳುವ ಅಥವಾ ಕಷ್ಟವನ್ನು ಮರೆಯಲು

ಪ್ರಯತ್ನಿಸುವ ಧ್ವನಿಯಲ್ಲಿ ಹೋಯ್ಹ್ ಹೊಹ್, ಹೋಯ್ಹ್.. ಹೊಹ್, ಹೂಃ ಹುಃ ಹಾಯ್ ..ಆಹ್ ಹಾಯ್ ಆಹ್, ಎನ್ನುತ್ತಾ ಸಾಗುತ್ತಿದ್ದಾರೆ. ಆ ಜನ ಆ ಬೆಟ್ಟ ಕಣಿವೆಗಳ ಪ್ರದೇಶಗಳಲ್ಲಿ ಅದು ಹೇಗೆ ದಿನವೂ ಹತ್ತಾರು ಸಲ ಏರಿ ಇಳಿಯುತ್ತಾರೋ? ನೆನೆಸಿಕೊಂಡರೆ ವಿಸ್ಮಯವಾಗುತ್ತದೆ.

ಇಳಿಜಾರು, ಕಣಿವೆ ಪ್ರದೇಶಗಳಲ್ಲಿ ಹುಲ್ಲು ಗಿಡ ಮರಗಳು ಸಮೃದ್ಧವಾಗಿ ಬೆಳೆದು ನಿಂತಿರುವುದರಿಂದ ದೂರ ದೂರಕ್ಕೆ ಶಿಲೆಗಳು ಕಾಣಿಸುತ್ತಿರಲಿಲ್ಲ. ಆದರೆ ಶಿಖರಗಳ ತುತ್ತ ತುದಿಗಳಲ್ಲಿ, ನದಿಯ ಕೊರಕಲುಗಳಲ್ಲಿ ಶಿಲೆಗಳು ದೈತ್ಯಾಕಾರವಾಗಿ ಚಿತ್ರ ವಿಚಿತ್ರವಾಗಿ ಪದರು ಪದರಾಗಿ  ಪುಸ್ತಕದ ಹಾಳೆಗಳಂತೆ ತೆರೆದುಕೊಂಡಿವೆ. ನಮಗೆ ಬೇಕಾದ ವಿವರಗಳನ್ನು ದಾಖಲಿಸಿಕೊಳ್ಳುತ್ತ..ಶಿಲೆಗಳನ್ನು ಪರೀಕ್ಷಿಸುತ್ತಾ ... ಮುಂದಕ್ಕೆ ಸಾಗುತ್ತಿದ್ದೇವೆ. ನಕ್ಷೆ ಮತ್ತು ಉತ್ತರ ಮುಖಿಯ ಸಹಾಯದಿಂದ ನಾವಿರುವ ಸ್ಥಳವನ್ನು ಸರಿಯಾಗಿ ಗುರುತಿಸಿಕೊಂಡು ಹೋಗಬೇಕಾಗಿರುವ ದಾರಿಯಲ್ಲೇ ಹೋಗುತ್ತಿದ್ದೇವೆ. ಕಣಿವೆಗಳಲ್ಲಿ ಇಳಿದು, ಶಿಖರಗಳನ್ನು ಹತ್ತಿ ನಾವು ತಲುಪಬೇಕಾದ ಮುಖ್ಯ ನದಿ ತಲುಪಿ ಕೈ ಗಡಿಯಾರ ನೋಡಿಕೊಂಡಾಗ ಸಮಯ ಒಂದೂವರೆ ಗಂಟೆಯಾಗಿದೆ. ಸೂರ್ಯನು ಶಿಖರಗಳ ಮೇಲೆ ಮುಸುಕು ಮುಸುಕು ಮೋಡಗಳ ಮರೆಯಿಂದ ಕೆಳಕ್ಕೆ ಇಣುಕಿ ನೋಡುತ್ತಿದ್ದಾನೆ.

ಆಗಲೆ ಸುಮಾರು ಆಯಾಸಗೊಂಡಿದ್ದ ನಾವು, ನದಿಯ ದಡದಲ್ಲಿದ್ದ ಒಂದು ತೋಟದ ಗುಡಿಸಲ ಮುಂದೆ ಕುಳಿತುಕೊಂಡೆವು. ಆ ನದಿಯ ಎರಡೂ ದಡಗಳಲ್ಲಿ ಭತ್ತದ ಕಟಾವು ಆಗಲೆ ಮುಗಿದಿದ್ದು, ಗುಡಿಸಲ ಒಳಗೆ ಭತ್ತದ ಚೀಲಗಳನ್ನು ಪೇರಿಸಿಟ್ಟಿದ್ದಾರೆ. ತೋಟದಲ್ಲಿ ನಾಲ್ಕಾರು ರೀತಿಯ ಗೆಡ್ಡೆ ಗೆಣಸು, ಸೊಪ್ಪು ಬೆಳೆದು ನಿಂತಿದ್ದು ಅವುಗಳಲ್ಲಿ ಯಾವುದೂ ಗೊತ್ತಿರಲಿಲ್ಲ. ಗೊತ್ತಿರುವ ತರಕಾರಿ ಎಂದರೆ ನಾಗಾ ಧನಿಯ ಮತ್ತು ನಾಗಾ ಟೊಮೋಟೊ ಮಾತ್ರ. ನಾಗಾ ಟೊಮೇಟೊ ಹೊಲಗಳಲ್ಲಿ ಬಿಡುವ ಸಣ್ಣ ಸಣ್ಣ ಕೆಂಪು ಟೊಮೆಟೊ ತರಹ ಇದ್ದರೆ, ಧನಿಯ ಸೇವಂತಿಗೆ ಎಲೆಗಳಂತಿದೆ. ಆದರೆ ವಾಸನೆ ಮಾತ್ರ ತೇಟ್ ಧನಿಯಾ ವಾಸನೆಯೆ.

ಶಿಖರಗಳ ಸುತ್ತ ಮೋಡಗಲು ಜಮಾಯಿಸುತ್ತಿದ್ದಂತೆ ಹೃದಯದೊಳಗೆ ಯಾವುದೋ ಒಂದು ರೀತಿಯ ಅಳುಕು ತುಂಬಿಕೊಳ್ಳುತ್ತಿತ್ತು. ಪರೋಟ ಮತ್ತು ಆಲೂಗಡ್ಡೆ ಪಲ್ಯವನ್ನು ನಾವು ತಿನ್ನುತ್ತಿದ್ದರೆ. ಜಿಬಿ ಮತ್ತು ಅವನ ಸಂಗಡಿಗ ನಾಗಾ ಅಕ್ಕಿಯ ಅನ್ನ ಮತ್ತು ಕರಿದ ಮಾಂಸದ ತುಂಡುಗಳನ್ನು ಎಲೆಗಳಲ್ಲಿ ಹಾಕಿಕೊಂಡು ತಿನ್ನುತ್ತಿದ್ದಾರೆ. ಊಟ ಮುಗಿಸುತ್ತಿದ್ದಂತೆ ಬಂದ ದಾರಿಯಲ್ಲೇ ಹಿಂದಕ್ಕೆ ಹೋಗುವುದೋ ಅಥವಾ ನದಿಯ

ಮುಖಾಂತರವೇ ಮುಂದಕ್ಕೆ ಹೋಗಿ ಇನ್ನಷ್ಟು ಭೂ ಮಾಹಿತಿ ಸಂಗ್ರಹಿಸುವುದೋ... ಚರ್ಚೆ ಮಾಡುತ್ತಿದ್ದೇವೆ. ಎರಡರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಿತ್ತು. ಹಿಂದಕ್ಕೆ ನಡೆದರೆ ಕೆಲಸ ಸುಲಭ ವಾಗುತ್ತದೆ, ಆದರೆ ನಮ್ಮ ಉದ್ದೇಶ ಮಾತ್ರ ಸಫಲವಾಗುವುದಿಲ್ಲ.

ಶಾಹು ನನ್ನ ಕಡೆಗೆ ಒಮ್ಮೆ ನೋಡಿ,

"ಚಲೀಯೆ ಸ್ವಾಮಿ ಸಾಬ್, ದೇಖಾ ಜಾಯೇಗಾ ಸಾಲಾ..." ಎಂದು ಮೈ ಕೊಡವಿಕೊಂಡು ಎದ್ದು ನಿಂತರು. ಆಗಲೇ ನಾವಿಬ್ಬರು ಒಂದೊಂದು ಊರುಗೋಲನ್ನು ತಯಾರಿ ಮಾಡಿಕೊಂಡಿದ್ದೆವು. ನಕ್ಷೆಯನ್ನು ಇನ್ನೊಮ್ಮೆ ಪರೀಕ್ಷಿಸಿ ನೋಡಿ ಹಾವಿನಂತೆ ಹರಿಯುತ್ತಿದ್ದ ನದಿಗೆ ವಿರುದ್ಧವಾಗಿ ನಡೆಯತೊಡಗಿದೆವು. ನಾಗಾಲ್ಯಾಂಡಿನ ಎಳಸು ನದಿಗಳು ಎಷ್ಟೊಂದು ಚೆಲ್ಲು ಚೆಲ್ಲು, ಕೊರಕಲು, ಕಂದರ ಮತ್ತು ಆಳ ಎನ್ನುವುದನ್ನು ನೋಡಿಯೇ ತಿಳಿಯಬೇಕು.

ಸ್ವಲ್ಪ ಅಗಲವಾಗಿದ್ದ ನದಿ ಹೋಗುತ್ತಾ ಹೋಗುತ್ತಾ ಸಂಕುಚಿತಗೊಂಡು ದಾರಿಯೇ ಇಲ್ಲದಂತಾಗಿ ನೀರಿನಲ್ಲಿ ಇಳಿಯಬೇಕಾಯಿತು. ನೀರಿನಲ್ಲಿ ಸ್ವಲ್ಪದೂರ ಮುಂದಕ್ಕೆ ಸಾಗಿದ್ದೇ ಮತ್ತೆ ಅನಿರೀಕ್ಷಿತವಾಗಿ ನದಿ ವಿಶಾಲವಾಗಿ ತೆರೆದುಕೊಂಡಿತು. ಎರಡು ನದಿಗಳು ಘರ್ಜನೆಗೊಂಡು, ಒಟ್ಟುಗೂಡಿರುವ ಸ್ಥಳ. ಬೆಟ್ಟಗಳೇ ಯುದ್ಧಮಾಡಿ ಪಾಳು ಬಿದ್ದಿರುವಂತಹ ಪ್ರದೇಶ. ಎಂತಹವರೂ ದಿಗಿಲು ಗೊಳ್ಳುವಂತಹ ದೃಶ್ಯ. ನದಿಯ ಭುಜಗಳಮೇಲೆ ನಿಂತು ಕೆಳಕ್ಕೆ ಇಣಿಕಿನೋಡುತ್ತಿರುವ ಎತ್ತರೆತ್ತರದ ಮರಗಳು. ಸಧ್ಯಕ್ಕೆ ಹೆಚ್ಚು ನೀರಿಲ್ಲದೆ ಉಸಿರಾಡುವ ಯೋಗ.

ಅಂತಹ ಸ್ಥಳಗಳಲ್ಲಿ ಮಳೆ ನೀರೇನಾದರೂ ಒಮ್ಮೆಲೆ ನುಗ್ಗಿ ಬಂದರೆ..? ಅಳುಕು, ಭಯ ಒಟ್ಟಿಗೆ ಮೂಡಿ, ಆದಷ್ಟು ಬೇಗ ಈ ಸ್ಥಳದಿಂದ ದೂರ ಹೋಗಿಬಿಡುವ ಮನಸ್ಸಾಯಿತು. ಪುಸ್ತಕದ ಹಾಳೆಯಂತೆ ತೆರೆದು ಕೊಂಡಿರುವ ಶಿಲೆಗಳಲ್ಲಿ ಖಜಾನೆ ಏನೂ ಇಲ್ಲ. ಬರೀ ಬುರುಜು ಕಲ್ಲುಗಳು. ಎಲ್ಲೋ ಬರ್ಫ್‌ಗಡ್ಡೆಗಳ ಮಧ್ಯೆ ನಿಂತಿರುವ ಅನುಭವ. ಆಗಲೇ ಹಲವಾರು ಕಡೆ ನೀರಿನಲ್ಲಿ ಇಳಿದು ಹತ್ತಿ, ಎದ್ದು ಬಿದ್ದು, ತೊಯ್ದು ತೊಪ್ಪೆಯಾಗಿ ನಡುಕ ಪ್ರಾರಂಭವಾಗಿತ್ತು.

ಮೇಲೆ ಕಪ್ಪು ಕಪ್ಪಾದ ಹೆಬ್ಬಂಡೆ ಮೋಡಗಳು ಗಟ್ಟಿಯಾಗುತ್ತಾ ನಮ್ಮತ್ತ ಇಳಿದು ಬರುತ್ತಿವೆ. ಒಟ್ಟಿನಲ್ಲಿ ಈ ದಿನ ಏನೋ ಗ್ರಹಚಾರ ಕಾದಿದೆ ಎನ್ನುವ ಅಳುಕು ಮನಸ್ಸಿನಲ್ಲಿ ದೊಡ್ಡದಾಗುತ್ತಾ ಹೋಗುತ್ತಿದೆ.

"ಮಳೆ ಬಂದರೆ ನೀರು ಹರಿದು ಬರಬಹುದು, ಅದಕ್ಕಿಂತಾ ಮುಂಚಿತವಾಗಿಯೇ ನದಿಯಿಂದ ಮೇಲಕ್ಕೆ ಹೋಗಿಬಿಡಬೇಕು" ಜಿಬಿ ಮೊದಲ ಬಾರಿಗೆ ಎಚ್ಚರಿಕೆ ನೀಡಿದ.

ನಕ್ಷೆಯನ್ನು ಮಡಿಚಿ ಚೀಲದಲ್ಲಿ ಹಾಕಿಕೊಂಡು ನದಿಯ ಮುಖಾಂತರವೇ ಹೋಗುತ್ತಿದ್ದೇವೆ. ನದಿ ದಂಡೆಯನ್ನು ಬಿಟ್ಟು ಪಕ್ಕಕ್ಕೆ ಹೋಗಿಬಿಡೋಣ ಎಂದರೆ ದಾರಿಯೇ ಇಲ್ಲ. ದಟ್ಟವಾದ ಕಾಡು. ಎದ್ದು ಬಿದ್ದು ಅವಸರ ಅವಸರವಾಗಿ ನದಿಯ ಪಕ್ಕದಲ್ಲೇ ಹೋಗುತ್ತಿದ್ದೇವೆ ಸಮಯ ಇನ್ನೂ ಮೂರು ಗಂಟೆ. ಆಗಲೇ ಸಾಯಂಕಾಲ ಆದಂತೆ ಕಾಣಿಸುತ್ತಿದೆ. ದೊಡ್ಡ ದೊಡ್ಡ ಮರಗಳು ಉರುಳಿಬಿದ್ದಿವೆ. ನದಿಗೆ ಅಡ್ಡ ಬಿದ್ದಿರುವ ಮರಗಳ ಮೇಲೆ ಎರಡು ಪುಟ್ಟ ಪುಟ್ಟ ಗುಡಿಸಿಲುಗಳು ಕಾಣಿಸಿಕೊಂಡವು. ಇವರ್‍ಯಾರಪ್ಪಾ ಇಲ್ಲಿ ಎಂದುಕೊಳ್ಳುವಷ್ಟರಲ್ಲಿ ನಮ್ಮ ಜೊತೆಗಿದ್ದ ನಾಗಾಗಳು ಅವರನ್ನು,

"ಹೋಯ್, ಹೋಯ್ ಆಯಿಲೇ... ಕೀ ಕೋಯ್" ಎಂದು ಮಾತನಾಡಿಸಿದರು.

ಅಷ್ಟರಲ್ಲಿ ಬಿರುಗಾಳಿ ಜೋರಾಗಿ ಬೀಸುತ್ತಾ ಆಲಿಕಲ್ಲುಗಳು ಮರದ ಎಲೆಗಳನ್ನು ಸೀಳಿಕೊಂಡು ರಭಸವಾಗಿ ಪಟಪಟನೆ ಬೀಳತೊಡಗಿದವು. ಬೆಳ್ಳನೆ ಬಿಳುಪಾದ ಕಲ್ಲುಗಳು, ಸಣ್ಣ ಉಪ್ಪುಕಲ್ಲು ಗಳಿಂದ ಹಿಡಿದು, ಗಾಲ್ಫ್ ಚೆಂಡಿನ ಆಕಾರದವರೆಗೂ ಒಂದೇ ಸಮನೆ ಬೀಳುತ್ತಿವೆ. ನಮ್ಮ ಜೊತೆಯಲ್ಲಿದ್ದ ನಾಗಾಗಳಿಬ್ಬರೂ ಆಗಲೇ ಮರದ ಮೇಲಿದ್ದ ಛಾವಣಿ ಗುಡಿಸಲು ಏರಿ ನಮ್ಮನ್ನು,

"ಇಥಿ ಆಯಿಬಿ, ಇಥಿ ಆಯಿಬಿ" ಎಂದು ಕರೆಯುತ್ತಿದ್ದಾರೆ. ಹತ್ತುವಾಗ ಜಾರಿದರೆ ಎಲ್ಲಿ ನೀರುಪಾಲಾಗಿ ಬಿಡುತ್ತೇವೋ.. ಧೈರ್ಯ ಸಾಲದೆ, ನಾನು, ಶಾಹು ನದಿಯ ದಡದಲ್ಲೇ ಇದ್ದ ಇನ್ನೊಂದು ಅರೆ ಗುಡಿಸಲನ್ನು ಸೇರಿಕೊಂಡೆವು. ನೋಡು ನೋಡುತ್ತಿದ್ದಂತೆ ಆರ್ಭಟಿಸುವ ಗುಡುಗು ಮಿಂಚುಗಳ ಜೊತೆಗೆ ಗಿಡ, ಮರ, ತಪ್ಪಲು ಆಲಿ ಕಲ್ಲುಗಳಿಂದ ಬೆಳ್ಳಗೆ ಬಿಳುಪಾಯಿತು.

ನಾವಿದ್ದ ಗುಡಿಸಲಲ್ಲಿದ್ದ ಒಬ್ಬ ನಾಗಾ ಮತ್ತು ಶಾಹು ನಾಗಾಮೀಸ್‌ನಲ್ಲಿ ಮಾತನಾಡುತ್ತಿದ್ದಾರೆ. ಶಾಹು ಪ್ರಶ್ನೆಗೆ ನಾಗ,

"ನಾವು ಮರಗಳನ್ನು ಕಡೆಯುವವರು ಊರಿಗೆ ವಾರಕ್ಕೋ ಹದಿನೈದು ದಿನಕ್ಕೋ ಒಮ್ಮೆ ಹೋಗಿ ಬರುತ್ತೇವೆ. ಮರಗಳನ್ನು ಕಡಿದು ಒಣಗಿಸಿ ಲಾರಿ ಬರುವ ಸ್ಥಳದವರೆಗೂ ಸಾಗಿಸುತ್ತೇವೆ. ಹಣ ಆಯಾ ಊರಿನ ಸರಹದ್ದಿಗೆ ಸೇರಿದ ಜಿಬಿ ಗಳಿಗೆ ಸೇರುತ್ತದೆ. ನಮಗೂ ಬೇಕಾದಷ್ಟು ಹಣ ಕೊಡುತ್ತಾರೆ" ಹೀಗೆ ಏನೇನೋ ಹೇಳುತ್ತಿದ್ದಾಗ ಶಾಹು,

"ಯಾರು ಅಡಚಣೆ ಮಾಡುವುದಿಲ್ಲವೆ ?" ಎಂದಿದ್ದಕ್ಕೆ ಸ್ವಲ್ಪ ರಿಯಾಕ್ಟ್ ಆದಂತೆ

"ಯಾರು ಮಾಡುತ್ತಾರೆ. . ? ಇದೆಲ್ಲ ನಮ್ಮದು, ನಾಗಾಗಳದ್ದು... ಸಾಲಾ ನಮ್ಮದು ಜೀವನ ನಡೆಯಬೇಕಲ್ಲವೆ?" ಪ್ರಶ್ನಿಸಿದ.

ಆಲಿಕಲ್ಲು ಸುತ್ತಲು ರಾಶಿ ರಾಶಿಯಾಗಿ ಹಾಸಿಕೊಂಡಿದ್ದು, ನಮಗೆ ಸಣ್ಣಗೆ ನಡುಕ ಪ್ರಾರಂಭವಾಯಿತು. ಒಳಗಿದ್ದ ಪುಳ್ಳೆ ಕಡ್ಡಿಗಳನ್ನು ಒಂದುಗೂಡಿಸಿ ಮೂಲೆಯಲ್ಲಿ ಬೆಂಕಿ ಹೊತ್ತಿಸಲು ನಾಗಾ ಪ್ರಯತ್ನಿಸುತ್ತಿದ್ದಾನೆ. ಅದೆಲ್ಲಾ ತೊಯ್ದು ತೊಪ್ಪೆಯಾಗಿದ್ದರಿಂದ ಜಪ್ಪಯ್ಯ ಎಂದರೂ ಹೊತ್ತಿಕೊಳ್ಳಲಿಲ್ಲ.

"ಸಾಲಾ ಮರ್‌ಗಯಾ" ಶಾಹು ಪರಿಸ್ಥಿತಿಗೆ ಒಂದು ಜಕಂ ಕೊಟ್ಟಂತೆ ಉದ್ಗರಿಸಿದರು. ಸುಮಾರು ಒಂದೂವರೆ ಗಂಟೆ ಒಂದೇ ಸಮನೆ ಸುರಿದ ಅಲಿಕಲ್ಲು ಮಳೆಯಿಂದ ಸುಮಾರು ಆರು ಇಂಚುಗಳಷ್ಟು ಬಿಳಿ ಪರದೆ ಎಲ್ಲೆಲ್ಲೂ ಹಾಸಿ ಕೊಂಡಿದೆ. ಈಗ ಬರೀ ಮಳೆ ಹನಿಗಳು ಮಾತ್ರ ಬೀಳುತ್ತಿದ್ದು ಆಲಿಕಲ್ಲುಗಳು ನಿಧಾನವಾಗಿ ಕರಗುತ್ತಿವೆ. ಸಮಯ ನಾಲ್ಕೂವರೆ ಆಗಿದ್ದು ಹೆಚ್ಚೂ ಕಡಿಮೆ ಕತ್ತಲೆಯಾಗಿದೆ. ಕತ್ತಲು ಆಗುವುದರೊಳಗೆ ಎದ್ದು ಬಿದ್ದು ಹಳ್ಳಿ ಸೇರಬೇಕೆಂದುಕೊಂಡಿದ್ದ ನಮ್ಮ ಊಹೆ ತಿರುಗು ಮುರುಗಾಗಿ ಇನ್ನೂ ನದಿಯ ದಡದಲ್ಲೆ ಇದ್ದೇವೆ. ಮಳೆ ಕಡಿಮೆಯಾಗಿದ್ದೇ ಮರಗಳಿಂದ ಮಂಗಗಳಂತೆ ಜಿಬಿ ಮತ್ತು ಅವನ ಸಹಾಯಕ ಇಳಿದು ಬಂದರು.

"ಊರಿಗೆ ತಲುಪಬೇಕಾದರೆ ಎಷ್ಟು ಸಮಯವಾಗಬಹುದು.?" ಎಂದು ಕೇಳಿದ್ದಕ್ಕೆ

"ಒಂದೆರಡು ಗಂಟೆ ಆಗಬಹುದು' ಎಂಬ ಉತ್ತರ ಬಂತು. ಒಂದೆರಡು ಗಂಟೆಯೆಂದರೆ ಇವರ ಲೆಕ್ಕದಲ್ಲಿ ಎಷ್ಟೋ ನನಗೆ ತಲೆ ಗಿರ್ರನೆ ತಿರುಗಿತು. ಅಲ್ಲೇ ಉಳಿಯುವುದಂತೂ ಸಾಧ್ಯವಿಲ್ಲ. ಹಳ್ಳಿ ಮುಟ್ಟುವುದಂತೂ ದೇವರೇ ಬಲ್ಲ. ಸ್ವಲ್ಪ ದೂರ ನಡೆದಾದ ಮೇಲೆ ನದಿ ಸ್ವಲ್ಪ ಅಗಲವಾಯಿತು. ಅಲ್ಲಿಂದ ಇನ್ನೊಂದು ಉಪನದಿಯನ್ನು ಹಿಡಿದು ಅದನ್ನು ದಾಟಿ ಕಡಿದಾದ ಬೆಟ್ಟವನ್ನು ಹತ್ತಲು ಪ್ರಾರಂಭಮಾಡಿದೆವು. ಆಗಲೇ ಆ ಬೆಟ್ಟದ ತುತ್ತ ತುದಿಯ ಆ ಕಡೆಗೆ ಕಾಣಿಸುತ್ತಿದ್ದ ಇನ್ನೊಂದು ಬೆಟ್ಟದ ಮೇಲಿನ ಹಳ್ಳಿಯಲ್ಲಿ ವಿದ್ಯುತ್ ದೀಪಗಳು ಬೆಳಗುತ್ತಿವೆ. ಆ ದೀಪಗಳು ಎಷ್ಟು ಎತ್ತರದಲ್ಲಿವೆ ಎಂದರೆ ನಮಗೆ ಆಕಾಶದಲ್ಲಿರುವ ನಕ್ಷತ್ರಗಳಂತೆ ಮಿಣುಕ್ ಮಿಣುಕ್ ಎಂದು ಕಾಣಿಸುತ್ತಿವೆ.

ಆಗಲೇ ಕೈ ಕಾಲುಗಳಲ್ಲೆಲ್ಲ ನೋವು ಶುರುವಾಗಿದ್ದು ಹತ್ತಿಪ್ಪತ್ತು ಮೀಟರುಗಳಷ್ಟು ಎತ್ತರ ಹತ್ತಿದ ತಕ್ಷಣ ನಮ್ಮ ಶಾಹು ಏದೆಯುಸಿರು ಬಿಡುತ್ತ,

"ಸಾಲಾ... ಜಿಂದಗಿ ಬರ್‌ಬಾದ್ ಹೋಗಯಾ" ಎಂದು ಕುಸಿದು ಕುಳಿತು

ಕೊಳ್ಳುತ್ತಾರೆ. ಅವರಿಗಿನ್ನ ವಯಸ್ಸಿನಲ್ಲಿ ಐದಾರು ವರ್ಷ ಎಳೆಯನಾದ ನಾನೂ ಅವರು ಕುಸಿದು ಕುಳಿತುಕೊಳ್ಳುವುದನ್ನೇ ಕಾಯುತ್ತಾ ಅವರ ಹಿಂದೆಯೇ ಕುಸಿದು ಮೈ ಚೆಲ್ಲುತ್ತೇನೆ. ಒಂದೊಂದೇ ಗುಟುಕು ನೀರು ಕುಡಿದರೂ ಯಾವಾಗಲೋ ಮುಗಿದು ಹೋಗಿದೆ. ಈಗ ಪೂರ್ತಿ ಕತ್ತಲು, ಕೊರಕಲುಗಳಲ್ಲಿ ಎಚ್ಚರಿಕೆಯಿಂದ ನಡೆಯುತ್ತಿದ್ದೇವೆ. ತುಸುವೇ ಹೆಚ್ಚು ಕಡಿಮೆ ಯಾದರೂ ಸಾಕು ಎಲ್ಲಿಗೆ ಹೋಗುತ್ತೇವೋ... ವಿಳಾಸ ಇರುವುದಿಲ್ಲ.

ಒಬ್ಬರ ಹೆಜ್ಜೆಯಲ್ಲಿ ಇನ್ನೊಬ್ಬರು ಹೆಜ್ಜೆ ಇಡುತ್ತ ನಡೆಯುತ್ತಿದ್ದೇವೆ. ಜೀರುಂಡೆಗಳ ನಾದ, ಥಂಡಿ ಗಾಳಿ, ಆಗಾಗ ಉದುರುವ ಮಳೆಹನಿಗಳು, ಎಡವಿ ಬೀಳುವ ಹೆಜ್ಜೆಗಳು, ಹಾವಿನ ತಿರುವುಗಳು, ಏಣಿಯ ಮೇಲೆ ಏರುವಂತಹ ಕಡಿದಾದ ತಪ್ಪಲುಗಳು ಇದೆಲ್ಲದರ ಮೇಲೆ ನೋವು , ದಾಹ, ಕತ್ತಲು, ಸುಸ್ತು. ಹೊರಗೆ ಒಂದೇ ಚಳಿ ಒಳಗೆ ಬೆವರು. ಇನ್ನೇನು ಕತ್ತಲಲ್ಲಿ ನಮ್ಮಿಂದ ಸಾಧ್ಯವೇ ಇಲ್ಲವೆನ್ನುವಂತಾಗಿದೆ. ಇನ್ನೆಷ್ಟು ದೂರ. ಇನ್ನೆಷ್ಟು ದೂರ..? ಎಂದು ಕೇಳಿ ಕೇಳಿ ಕೊನೆಗೆ ನಮಗೇ ಸಾಕಾಗಿ ಕೇಳುವುದನ್ನೇ ಬಿಟ್ಟಿದ್ದೇವೆ. ನಮ್ಮ ಸ್ಥಿತಿ ಎಷ್ಟೊಂದು ಕೆಟ್ಟಿತ್ತೆಂದರೆ, ನಾನು ಶಾಮ ಮಾತನಾಡುವುದನ್ನೇ ಬಿಟ್ಟಿದ್ದೆವು. ಮಾತನಾಡುವಷ್ಟು ಶಕ್ತಿ ಇಲ್ಲದೆ ಪ್ರಾಣ ಉಳಿಸಿಕೊಳ್ಳುವುದಕ್ಕೆ ಉಸಿರಾಡುವಂತಿತ್ತು.

ಜೆಬಿ ಮತ್ತು ಅವನ ಸಹಾಯಕ ನಮ್ಮ ಜೊತೆ ಜೊತೆಯೇ ನಡೆದು ಬರುತ್ತಾ ಇನ್ನು ಸ್ವಲ್ಪವೇ ದೂರ, ಆಯಿತು, ಮುಗಿಯಿತು ಎಂದು ಸ್ವಾಂತನ ನೀಡುತ್ತಿದ್ದಾರೆ, ಆ ಕತ್ತಲಲ್ಲಿ ಅವರ ಸ್ಥಿತಿ ಹೇಗಿತ್ತೋ ಏನೋ ನಮಗಿನ್ನ ಉತ್ತಮ ಸ್ಥಿತಿಯಲ್ಲಿರುವುದು ಮಾತ್ರ ಅವರ ಮಾತುಗಳಿಂದಲೇ ಗೊತ್ತಾಗುತ್ತಿತ್ತು. ಹೇಗಾದರೂ ಅವರು ಗುಡ್ಡಗಾಡು ಜನರಲ್ಲವೇ.. ? ಬೆಟ್ಟಗುಡ್ಡಗಳೇ ಅವರ ಉಸಿರಲ್ಲವೇ..? ಒಂದು ಕಡೆ ಯಥಾಪ್ರಕಾರ ಮೈ ಚೆಲ್ಲಿದ್ದೇವೆ. ವಿಪರೀತವಾದ ಕತ್ತಲು. ಕಣ್ಣಿಗೆ ಏನೂ ಕಾಣಿಸುತ್ತಿಲ್ಲ. ಇದ್ದಕ್ಕಿದ್ದಂತೆ ಬೆಳಕಿನ ಕಿರಣಗಳ ಗುಚ್ಛವೊಂದು ದಿಢೀರನೆ ನಮ್ಮ ಮೇಲೆ ಬಿದ್ದಿತು. ಸತ್ತವರಿಗೆ ಪ್ರಾಣ ಬಂದಂತೆ ಬೆಳಕಿನ ಕಡೆಗೆ ನೋಡುತ್ತೇವೆ ಜೆಬಿ ನಗುತ್ತಾ ಪಾಕೆಟ್ ಟಾರ್ಚ್‌ನ್ನು ಕೈಯಲ್ಲಿ ಹಿಡಿದು ಸುತ್ತಲೂ ನೋಡುತ್ತಿದ್ದಾನೆ. ಎಲಾ ಇವನ, ಇಷ್ಟೊತ್ತು ಕತ್ತಲಲ್ಲಿ ಸತ್ತು ಸುಣ್ಣವಾದರೂ ಟಾರ್ಚ್‌ನ್ನು ತೆಗೆಯದೇ ಈಗ ತೆಗೆದಿದ್ದಾನಲ್ಲಾ, ಚೆನ್ನಾಗಿ ಬೈಯ್ಯಬೇಕೆಂದು ಕೊಂಡರೂ ನಾಗಾಗಳನ್ನು ಅದೂ ಅವರ ರಾಜ್ಯದಲ್ಲೇ ಬೈಯ್ಯಲು ಸಾಧ್ಯವೇ...? ಬಂದ ಯೋಚನೆಯನ್ನು ಹಾಗೇ ನುಂಗಿಕೊಂಡೆ. ಈಗ ಅವನೇ ಹೇಳುತ್ತಿದ್ದಾನೆ.

"ಇದರಲ್ಲಿರುವುದು ಛೋಟಾ ಸೆಲ್. ಅದೂ ಯಾವಾಗಲೋ ಪ್ರಾಣ ಕಳೆದುಕೊಂಡಿದೆ. ಆದರೂ ಇರಲಿ ಎಂದು ತಂದೆ" ಎನ್ನುತ್ತಾ ಮಿಣಕ್ ಮಿಣಕ್ ಎಂದು ಗಿಡಗಳಮೇಲೆ ಬೆಳಕು ಚೆಲ್ಲಿದ.

ಕೊನೆಗೆ ಆ ಮಿಣಕ್ ಮಿಣಕ್ ಬೆಳಕಿನ ಸಹಾಯದಿಂದಲೇ ಶಿಖರದ ಮೇಲಿದ್ದ ಬಸ್ತಿಯನ್ನು ತಲುಪಿದೆವು. ಹಸಿವು, ದಣಿವು, ಚಳಿಯಿಂದ ನಡುಗುತ್ತಿದ್ದ ದೇಹಗಳನ್ನೊತ್ತು ಬಂದ ನಾವು, ಜಿಬಿ ಅಡಿಗೆ ಮನೆಯಲ್ಲಿ ಕುಳಿತು ಬೆಚ್ಚಗೆ ನಾಗಾ ಚಹ ಕುಡಿಯುತ್ತಿದ್ದೇವೆ. ಸಧ್ಯಕ್ಕೆ ಎಲ್ಲವನ್ನೂ ಮರೆತು ಅಲ್ಲೇ ಕೈಕಾಲು ಚೆಲ್ಲಿ ಮಲಗಿ ಬಿಡಬೇಕೆನ್ನಿಸುತ್ತಿದೆ.

ಶಾಹು, ಇಬ್ಬರ ಸಹಿಗಳನ್ನು ಪಡೆದುಕೊಂಡು, ಒಬ್ಬೊಬ್ಬರಿಗೂ ನೂರು ರೂಪಾಯಿಗಳನ್ನು ನೀಡಿ, ಧನ್ಯವಾದಗಳನ್ನು ಹೇಳಿದರು. ಅನಂತರ ಜೀಪಿನ ಹತ್ತಿರಕ್ಕೆ ಬಂದು ನೋಡುತ್ತೇವೆ. ಜೀಪಿನಲ್ಲಿ ಯಾರೂ ಇಲ್ಲ, ಅನಾಥವಾಗಿ ನಿಂತಿದೆ. ಡ್ರೈವರನ್ನು ಹುಡುಕುವುದಾದರೂ ಎಲ್ಲಿ? ತೊಂಗ್‌ಪಾಂಗ್.. ತೊಂಗ್‌ಪಾಂಗ್ ಎಂದು ಎಷ್ಟು ಕೂಗಿದರೂ ಆ ನಿಶ್ಯಬ್ಧ ರಾತ್ರಿ ಕಿವಿಗೆ ಹಚ್ಚಿಕೊಳ್ಳಲಿಲ್ಲ. ಜಿಬಿ ಮತ್ತು ಅವನ ಸಹಾಯಕ ಮನೆ ಮನೆ ಬಾಗಿಲನ್ನು ತಟ್ಟಿ ನಿಶ್ಯಬ್ಧ ಪರದೆಯ ಮೇಲೆ ಕಲ್ಲುಗಳನ್ನೆಸೆಯುತ್ತಾ ತೊಂಗ್‌ಪಾಂಗ್‌ನನ್ನು ಹುಡುಕುತ್ತಿದ್ದಾರೆ.

ನಾಗಾ ಬಿಯರ್ ಕುಡಿದು ಬೆಚ್ಚಗೆ ಮನೆಯೊಂದರಲ್ಲಿ ಮಲಗಿದ್ದ ತೋಂಗ್‌ಪಾಂಗ್ ಕೊನೆಗೂ ಸಿಕ್ಕಿಬಿದ್ದು ಕತ್ತಲಲ್ಲಿ ಓಡೋಡಿ ಜೀಪಿನ ಹತ್ತಿರಕ್ಕೆ ಬಂದ. ಜಿಬಿ ಮತ್ತು ಅವನ ಸಹಾಯಕನ ಕೈ ಕುಲುಕಿ ಶಿಖರದಿಂದ ಬೀಳ್ಕೊಂಡೆವು. ಜೀಪು ದಾರಿ ತಪ್ಪಿದ ಒಂಟಿ ಸಲಗದಂತೆ ಘೀಳಿಡುತ್ತಾ ಶಿಖರಗಳನ್ನು ಸುತ್ತಿ ಬಳಸಿ, ಹತ್ತಿ ಇಳಿದು ವಿಶ್ರಾಂತಿ ಗೃಹವನ್ನು ತಲುಪಿದಾಗ ರಾತ್ರಿ ಹನ್ನೊಂದು ಗಂಟೆ. ಕಾಂಚಾ ಬಿಸಿನೀರು ಕೊಟ್ಟು ಅಡಿಗೆಯನ್ನು ಬಿಸಿಮಾಡ ತೊಡಗಿದ. ನಾವು ಹೆಸರಿಗೆ ಕೈ ಕಾಲು ಮುಖ ತೊಳೆದು, ನಿದ್ದೆಯ ಚೀಲದ ಒಳಕ್ಕೆ ಸೇರಿಕೊಂಡೆವು. ಅನಂತರ ಅದರ ಒಳಗೆಯೇ ಕುಳಿತು ಊಟ ಮುಗಿಸಿ ಮಲಗಿಬಿಟ್ಟೆವು.

ಬೆಳಿಗ್ಗೆ ಜ್ಞಾಪಕ ಬಂದಾಗ ಹತ್ತುಗಂಟೆ. ಎದ್ದು ನಿಂತರೆ ನಿಂತುಕೊಳ್ಳಲು ಆಗುತ್ತಿಲ್ಲ, ನಡೆದರೆ ನಡೆಯಲು ಆಗುತ್ತಿಲ್ಲಾ, ಸ್ನಾಯುಗಳೆಲ್ಲಾ ಸೆಟೆದುಕೊಂಡು ಬಿಟ್ಟಿವೆ. ಇನ್ನು ಮುಂದೆ ನಡೆದ ಘಟನೆಗಳು ಅಷ್ಟೊಂದು ಸ್ವಾರಸ್ಯಕರವಾಗಿಲ್ಲದ ಕಾರಣ ಈ ವರ್ಷದ ಫೀಲ್ಡ್ ಕೆಲಸವನ್ನು ಇಲ್ಲಿಗೇ ಮುಗಿಸಿ ದಿಮಾಪುರ ಸೇರಿಕೊಳ್ಳುತ್ತೇನೆ, ತಾತ್ಕಾಲಿಕವಾಗಿ, ಮತ್ತೆ ಇನ್ನಷ್ಟು ಕುತೂಹಲ ವಿಷಯಗಳನ್ನು ಮುಂದೆ ನೋಡೋಣ.

* * *

## 18 ಟುಯಿನ್ ಸಾಂಗ್ ಸುತ್ತ ಮುತ್ತ

ಹೊಸ ವರ್ಷದ ಫೀಲ್ಡ್ ಸಂಶೋಧನೆಗಳು ಶುರುವಾಗಿದ್ದು ಮತ್ತೆ ಶಾಹು ಮತ್ತು ತೋಂಗ್‌ಪಾಂಗ್ ಜೊತೆಗೆ ಬರ್ಮಾಗಡಿಯ ಟುಯಿನ್ ಸಾಂಗ್ ಜಿಲ್ಲೆಗೆ ಹೋಗಬೇಕಾಗಿತ್ತು.

ಟುಯಿನ್‌ಸಾಂಗ್ ಜಿಲ್ಲೆ ಉತ್ತರ ಈಶಾನ್ಯದಲ್ಲಿಯೇ ಅತ್ಯಂತ ಹಿಂದುಳಿದ ಜಿಲ್ಲೆ. ಸ್ಥಳೀಯ ಕಾನ್ವೆಂಟ್ ಶಾಲೆಯಲ್ಲಿ ಓದುತ್ತಿದ್ದ ಕ್ರಾಂತಿಗೆ ಆಗಲೇ ಎರಡು ತಿಂಗಳು ರಜಾ ಶುರುವಾಗಿದ್ದು ಕ್ರಾಂತಿ ಮತ್ತು ಸುಶೀಲಾಳನ್ನು ಫೀಲ್ಡ್‌ಗೆ ಕರೆದುಕೊಂಡು ಹೋಗಲು ತಯಾರಿ ಮಾಡಿಕೊಂಡೆ. ಶಾಹು ಮಕ್ಕಳು ಕೇಂದ್ರೀಯ ವಿದ್ಯಾಲಯದಲ್ಲಿ ಓದುತ್ತಿದ್ದು ಅವರಿಗೆ ಇನ್ನೂ ರಜಾ ಬಂದಿಲ್ಲದ ಕಾರಣ ಅವರ ಪರಿವಾರ ದಿಮಾಪುರದಲ್ಲೇ ಉಳಿದು ಕೊಳ್ಳಬೇಕಾಯಿತು.

ಡಿಸೆಂಬರ್ ತಿಂಗಳ ಒಂದು ಬೆಳಗ್ಗೆ ಸಾಮಾನುಗಳನ್ನೆಲ್ಲಾ ಟ್ರೇಲರ್‌ನಲ್ಲಿ ತುಂಬಿ ಟಾರ್ಪಾಲಿನ್ ಹೊದಿಸಿ, ಹಗ್ಗ ಬಿಗಿದು, ಸುಶೀಲಳನ್ನು ಹಿಂದೆ ಕುಳಿತುಕೊಳ್ಳುವಂತೆ ಹೇಳಿದೆ. ಆದರೆ ಸಾಹು ನೀವಿಬ್ಬರೂ ಮುಂದೆ ಕುಳಿತುಕೊಳ್ಳಿ ಎಂದೇಳಿ ಸಾಮಾನುಗಳನ್ನು ಸರಿಸಿ ಹಿಂದಿನ ಆಸನದಲ್ಲಿ ಕುಳಿತೇಬಿಟ್ಟರು.

ತೋಂಗ್‌ಪಾಂಗ್ ಕೀ ತಿರುಗಿಸಿ ಇಗ್ನೀಷನ್ ಕೊಟ್ಟು ಕ್ಲಚ್ ತುಳಿದುಕೊಂಡು ಹಿಂದಕ್ಕೆ ಒಮ್ಮೆ ನೋಡಿ ಮೃದುವಾಗಿ ಸಡಿಲಿಸಿದ. ಜೀಪು ಸದ್ದು ಮಾಡುತ್ತಾ ಮುಂದಕ್ಕೆ ನಿಧಾನವಾಗಿ ಚಲಿಸ ತೊಡಗಿತು. ಶ್ರೀಮತಿ ಶಾಹು ಮತ್ತು ಅವರ ಮಕ್ಕಳು ಗಾಳಿಯಲ್ಲಿ ಕೈ ಬೀಸುತ್ತಾ ಯಾವುದೋ ದೂರದ ಪ್ರದೇಶದಲ್ಲಿ ಒಂಟಿಯಾಗುತ್ತಾ ದೂರಕ್ಕೆ ಸಾಗಿ ಹೋಗುತ್ತಿದ್ದರು.

ಜೀಪು ನೇರವಾಗಿ ಸರ್ಕ್ಯುಲರ್ ರಸ್ತೆಯಲ್ಲಿ ಸಾಗಿ ಒಂದು ಅಂಗಡಿಯ ಮುಂದೆ ನಿಂತುಕೊಂಡಿತು. ಮೊದಲೇ ಪ್ಯಾಕ್ ಮಾಡಿಸಿಟ್ಟಿದ್ದ ಅಡಿಗೆ ಸಾಮಾನುಗಳನ್ನು ಮತ್ತು ತರಕಾರಿಯನ್ನು ತುಂಬಿಕೊಂಡು ಮತ್ತೆ ಅಲ್ಲಿಂದ ಪೂರ್ವಕ್ಕೆ ಅಂದರೆ ಅಸ್ಸಾಂನ ಗೋಲಾಘಾಟ್ ಕಡೆಗೆ ಜೀಪು ಚಲಿಸಿತು.

ದಿಮಾಪುರದ ಗಡಿ ಬಿಟ್ಟಿದ್ದೇ ತಡ ಹಚ್ಚನೆಯ ಹಸಿರು ತುಂಬಿರುವ ದಿಬ್ಬಗಳು, ದಿಬ್ಬಗಳ ಮೇಲೆ ನೀಟಾಗಿ ಕ್ರಾಪ್ ಮಾಡಿಕೊಂಡಿರುವ ಸಾಲು ಸಾಲು ಟೀ ಗಿಡಗಳು. ಗಿಡಗಳ

ನಡುವೆ ಎತ್ತರೆತ್ತರ ಮರಗಳು. ಬಯಲೆಲ್ಲಾ ರಾಶಿ ರಾಶಿ ಬತ್ತದ ಬಯಲುಗಳು. ಮೇಲೆ ನೀಲಿ ಆಕಾಶ, ಕೆಳಗೆ ಗುಂಪುಕಟ್ಟಿ ಹಾರಾಡುತ್ತಿರುವ ಬಿಳಿ ಹಕ್ಕಿಗಳು. ದೂರದಲ್ಲಿ ಕಲೆಗಾರ ಚಿತ್ರಿಸಿದಂತೆ ಕಾಣುವ ಹಿಮಾಲಯ ತಪ್ಪಲುಗಳು.

ಉತ್ತರ ಮತ್ತು ದಕ್ಷಿಣಕ್ಕೆ ಹಿಮಾಲಯ ತಪ್ಪಲುಗಳು ಕಾಣಿಸುತ್ತಿದ್ದರೆ, ಮಧ್ಯದಲ್ಲಿ ವಿಶಾಲವಾದ ಬ್ರಹ್ಮಪುತ್ರಾ ನದಿಯ ಮೆಕ್ಕಲು ಜೌಗು ಪ್ರದೇಶ ಹರಡಿಕೊಂಡಿದೆ. ನಾವು ನಾಗಾಲ್ಯಾಂಡಿನಿಂದ ಪ್ರಯಾಣ ಪ್ರಾರಂಭಿಸಿ ಗೋಲಾಘಾಟ್ ಮತ್ತು ಮರಿಯಾಣಿ ದಾಟಿ ಮತ್ತೆ ನಾಗಾಲ್ಯಾಂಡಿನ ಮೊಖಕ್ ಚುಂಗ್ ಜಿಲ್ಲೆಯಲ್ಲಿ ಬರುವ ಕಣಿವೆ, ಬೆಟ್ಟಗಳನ್ನು ಹತ್ತಿ ಶಿಖರಗಳ ಮೇಲೆ ಹಾದು 450 ಕಿ. ಮೀಟರುಗಳ ದೂರದ ಟುಯಿನ್‌ಸಾಂಗ್ ತಲುಪಬೇಕಿದೆ.

ಜೀಪು ಇನ್ನೂ ಗೋಲಾಘಾಟ್ ಕೂಡಾ ತಲುಪಲಿಲ್ಲ. ಮಧ್ಯೆ ಮಧ್ಯೆ ದಟ್ಟವಾದ ಸಸ್ಯರಾಶಿ, ಚಿಲ್ಲನೆ ಬೀಸುವ ತಣ್ಣನೆಗಾಳಿ, ಹಸಿರು ಗದ್ದೆಗಳು, ಗದ್ದೆಗಳಲ್ಲಿ ಕಾಲೂರಿ ಕೆಲಸ ಮಾಡುತ್ತಿರುವ ಅಸ್ಸಾಂ ಹೆಣ್ಣುಗಳು. ಗಾಳ ಮತ್ತು ಬಲೆಗಳನ್ನು ಹಾಕಿ ಮೀನುಗಳನ್ನು ಹಿಡಿಯುತ್ತಿರುವ ಗಂಡಸರು. ಗಾಳಿಯಲ್ಲಿ ಲಾಗಾ ಹಾಕುತ್ತಿರುವ ಹಕ್ಕಿ, ಬೆಳ್ಳಕ್ಕಿಗಳು, ಒಟ್ಟಿನಲ್ಲಿ ಸುಂದರ ಅಸ್ಸಾಮಿನ ಚಿತ್ರಣಗಳು.

ಸುಶೀಲ ಕೂಡ ಆಗಾಗ ಎಷ್ಟು ಚೆನ್ನಾಗಿದೆ ಈ ನೀರು... ಈ ತೋಟಗಳು... ಈ ಮನೆಗಳು ಎನ್ನುತ್ತಾ ಕವಯಿತ್ರಿಯ ಶೈಲಿಯಲ್ಲಿ ಒಂದೆರಡು ಸಲ ಹುರುಪಿನಿಂದ ಪುಳಕಗೊಂಡಳು. ಕ್ರಾಂತಿ ತೊಡೆಯಮೇಲೆ ಕುಳಿತುಕೊಂಡು ರಸ್ತೆ ಮತ್ತು ಸ್ಟೀರಿಂಗನ್ನು ನೋಡುತ್ತಲೇ ಇದ್ದಾನೆ.

39ನೇ ರಾಷ್ಟ್ರೀಯ ಹೆದ್ದಾರಿಯಿಂದ ಸೀಳಿಕೊಂಡ ಗೋಲಾಘಾಟ್ ರಸ್ತೆ ಸಮತಟ್ಟಾದ ಗದ್ದೆಗಳನ್ನು ಸೀಳಿಕೊಂಡು ಚಲಿಸುತ್ತಿರುವ ಹಾವಿನಂತೆ ಕಾಣಿಸುತ್ತಿದೆ. ಜೀಪು ತನ್ನ ವೇಗವನ್ನು ಮಿತಗೊಳಿಸಿಕೊಂಡು ಧೂಳನ್ನು ಎಬ್ಬಿಸುತ್ತಾ, ತಾನೂ ಕುಲುಕುತ್ತಾ ತನ್ನ ಒಡಲಲ್ಲಿರುವವರನ್ನು ಕುಲುಕಿಸುತ್ತ ಸಾಗುತ್ತಿದೆ. ಹಿಂದೆ ಧೂಳು ನುಂಗುತ್ತಾ ಸುಮ್ಮನೆ ಕುಳಿತುಕೊಂಡಿರುವ ಶಾಹು ಬಗ್ಗೆ ಕನಿಕರವಾಗಿ, ಏನೆಂದು ಮಾತನಾಡಿಸುವುದು ಎಂದು ಯೋಚಿಸುವಷ್ಟರಲ್ಲಿ ಅವರೇ,

"ಏ ತೋಂಗ್‌ಪಾಂಗ್ ಅಲ್ಲೆಲ್ಲಾದರೂ ನಿಲ್ಲಿಸು, ಚಹ ಕುಡಿಯೋಣ" ಎಂದರು.

ಗೋಲಾಘಾಟ್ ನಾನು ನಿರೀಕ್ಷಿಸಿದಷ್ಟು, ದೊಡ್ಡದಲ್ಲದಿದ್ದರೂ, ಸುಮಾರು

ದೊಡ್ಡದಾದ ಪಟ್ಟಣ. ಬೀದಿಗಳ ತುಂಬಾ ಜನರು. ಒಂದು ರೀತಿಯಲ್ಲಿ ಬಿಹಾರ ಮತ್ತು ಉತ್ತರ ಪ್ರದೇಶದ ಮಧ್ಯಮ ವರ್ಗದ ಪಟ್ಟಣದಂತೆ ಕಾಣಿಸುತ್ತಿತ್ತು. ಧೂಳಿದ್ದ ರಸ್ತೆಗಳು ಪೆಟ್ಟಿಗೆ ಅಂಗಡಿಗಳು ಸೈಕಲ್ ರಿಕ್ಷಾಗಳು ಮತ್ತು ಮನೆಗಳ ಮುಂದೆ ಉದ್ದುದ್ದ ಅಡಿಕೆ ತೆಂಗಿನಮರಗಳು ಬೆಳೆದು ನಿಂತಿವೆ. ಜೊತೆಗೆ ಅಲ್ಲಿನ ಮುಖ್ಯ ಉದ್ಯಮೆಗಳಲ್ಲಿ ಒಂದಾದ ಕೇನ್ ಪೀಠೋಪಕರಣಗಳು ಮಾತ್ರ ಎಲ್ಲೆಂದರಲ್ಲಿ ತುಂಬಿಕೊಂಡಿವೆ. ಕಾಂಚಾನನ್ನು ಜೀಪಿನ ಹತ್ತಿರ ಕಾವಲಿರಿಸಿ ಹೋಟೆಲೊಂದರಲ್ಲಿ ಊಟಮಾಡಿ ಮತ್ತೆ ರಸ್ತೆಗೆ ಬಂದೆವು. ಸುಶೀಲಾ "ಏನಾದರೂ ಕೊಡಿಸಿ, ಈ ಊರಿನ ಜ್ಞಾಪಕ ಇರುತ್ತದೆ" ಎಂದಳು. ಯಾವಾಗಲೂ ಹಣದ ಬಗ್ಗೆ ಸ್ವಲ್ಪ ಬಿಗಿಯಾಗಿರುತ್ತಿದ್ದ ನಾನು "ಅಂತಹ ವಸ್ತುಗಳೇನೂ ಇಲ್ಲವಲ್ಲಾ, ವಾಪಸ್ ಬರುವಾಗ ಕೇನ್ ಕುರ್ಚಿಗಳನ್ನು ಕೊಂಡುಕೊಳ್ಳೋಣ" ಎಂದು ಸಮಾಧಾನ ಪಡಿಸಿದೆ. ಆದರೂ ಬಿಡಲಿಲ್ಲ. ಏನೋ ಸಣ್ಣ ಪುಟ್ಟ ವಸ್ತುಗಳನ್ನು ಕೊಂಡುಕೊಂಡಳು.

ಮತ್ತೆ ಪ್ರಯಾಣ ಶುರುವಾಯಿತು. ಗೋಲಾಘಾಟ್ ಬಿಟ್ಟಮೇಲೆಯೂ ಸುತ್ತಲ ದೃಷ್ಯ ಸುಂದರವಾಗಿ ಕಾಣುತ್ತಿದ್ದರೂ ರಸ್ತೆಮಾತ್ರ ಹಳ್ಳಕೊಳ್ಳಗಳಿಂದ ತುಂಬಿದ್ದು ಮೈ ಕೈಗಳಲ್ಲಿ ನೋವು ಕಾಣಿಸಿಕೊಂಡಿತು.

ಕೆಳ ಹಿಮಾಲಯದ ಇಳಿಜಾರುಗಳಲ್ಲಿ ಜಾರಿ ಹಬ್ಬಿಕೊಂಡಿದ್ದ ಮರಿಯಾಣಿ ಪಟ್ಟಣದ ಸುತ್ತಲೂ ಹಚ್ಚನೆ ಟೀ ತೋಟಗಳು ಹಾಸಿಕೊಂಡಿವೆ.

ಮರಿಯಾಣಿ, ಅಸ್ಸಾಂ-ನಾಗಾ ರಾಜ್ಯಗಳ ಗಡಿಯಲ್ಲಿರುವ ಒಂದು ಪಟ್ಟಣ. ಅದರ ದಕ್ಷಿಣಕ್ಕೆ ಕೆಳ ಹಿಮಾಲಯಗಳ ಜೊತೆ ಜೊತೆಗೆ ನಾಗಾ ರಾಜ್ಯದ ಗಡಿ ಪ್ರಾರಂಭಗೊಂಡಿತು. ನಾಗಾಲ್ಯಾಂಡ್ ಗಡಿ ತಲುಪಿದ್ದೆ ನಾಗಾ ಪೋಲೀಸರು ಜೀಪು ನಿಲ್ಲಿಸಿ ನಮ್ಮ ಒಳರೇಖೆಯ ಪರ್ಮಿಟ್‌ಗಳನ್ನು ಪರೀಕ್ಷಿಸಿ ಒಳಕ್ಕೆ ಬಿಟ್ಟರು.

ಹೇರಳವಾದ ಕಾಡು... ಏರು ತಪ್ಪಲುಗಳು... ಹರಿವ ಜುಳು ಜುಳು ಝರಿಗಳು... ತಣ್ಣಗೆ ಬೀಸುವ ಗಾಳಿ ಎಲ್ಲವೂ ನಮ್ಮನ್ನ ಒಂದು ರೀತಿಯಲ್ಲಿ ಹುರುಪುಗೊಳಿಸುವುದರ ಜೊತೆಗೆ ತುಸು ಭಯವು ಆವರಿಸಿಕೊಳ್ಳುತ್ತಿತ್ತು. ನಾಗಾಜನ, ನಾಗಾ ರಾಜ್ಯ ಎಂದರೆ ಎಲ್ಲವೂ ಅವರು ಹೇಳಿದಂತೆಯೇ ಜೀಪು ತನ್ನಲ್ಲಿದ್ದ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿಕೊಂಡು, ಹಿಂದಿದ್ದ ಟ್ರೇಲರನ್ನು ಎಳೆದುಕೊಂಡು ಮುಂದೆ ದೀಪ ಹಚ್ಚಿಕೊಂಡು ನಿಧಾನವಾಗಿ ಸಾಗುತ್ತಿದೆ. ಅದೇ ದಿನ ಸಾಯಂಕಾಲದ ಒಳಗೆ ಟುಯಿನ್‌ಸಾಂಗ್ ಸೇರಕೊಳ್ಳುವ ನಮ್ಮ ಬಯಕೆ ಈಡೇರದೆ ಇನ್ನೂ ಮೋಬ್‌ಕ್ ಚುಂಗ್‌ಗಿಂತ ಬಹಳ ದೂರವೇ ಉಳಿದಿದ್ದೇವೆ. ಮೋಬ್‌ಕ್ ಚುಂಗ್

ಮತ್ತು ಟುಯಿನ್‌ಸಾಂಗ್ ಮಧ್ಯೆ 90 ಕಿ. ಮೀಟರ್‌ಗಳ ದಾರಿಯಿದೆ. ಪೂರ್ಣ ಕತ್ತಲಾದ್ದರಿಂದ ಜೀಪಿನ ವೇಗ ಪೂರ್ತಿ ಕಡಿಮೆಯಾಗಿ, ಈ ರಾತ್ರಿಗೆ ಯಾವ ತೊಂದರೆಯೂ ಇಲ್ಲದೆ ಮೋಖ್‌ಕ್ ಚುಂಗ್ ಸೇರಿಕೊಂಡರೆ ಸಾಕೆನಿಸಿಬಿಟ್ಟಿದೆ. ಮೋಖ್‌ಚುಂಗ್ ತಲುಪಿದಾಗ ರಾತ್ರಿ ಏಳುಗಂಟೆ. ಹೋಟೆಲಾಗಲೀ, ಮನೆಯಾಗಲೀ, ಅಂಗಡಿಯಾಗಲಿ ಯಾವುದೂ ತೆರೆದಿಲ್ಲ. ಎಲ್ಲಾ ಬಗಿಲುಗಳೂ ಮುಚ್ಚಿವೆ.

ಬಹುಶಃ ಎಲ್ಲರೂ ಬೆಚ್ಚಗೆ ಒಲೆಗಳ ಮುಂದೆ ಕುಳಿತಿರಬಹುದು ಅಥವಾ ಮಲಗಿರಬಹುದು. ಬೀದಿಗಳೆಲ್ಲ ಹುಡುಕಿ ಕೊನೆಗೆ ಒಂದು ಬಿಹಾರಿ ದಬಾ ಹೋಟೆಲ್ ಬಾಗಿಲನ್ನು ತಟ್ಟಿದೆವು. "ಬರೀ ಅನ್ನ ದಾಲ್ ಬೇಕಾದರೆ ಬಡಿಸುತ್ತೇವೆ" ಎಂದರು. ಅಷ್ಟು ಹೇಳಿದ್ದೇ ತಡ ಒಳ ನುಗ್ಗಿದ ನಾವು ಒಂದು ಮೂಲೆಯಲ್ಲಿ ಮುದುರಿ ಕುಳಿತುಕೊಂಡೆವು. ಹೋಟೆಲಿನವರು ಆಗತಾನೆ ಸ್ಟೌವ್ ಹಚ್ಚಿ ಏನೋ ಮಾಡತೊಡಗಿದರು. ಸುಮಾರು ಅರ್ಧ ಗಂಟೆಗೆ ಅನ್ನ ದಾಲ್ ಜೊತೆಗೆ ಆಮ್ಲೆಟ್‌ಕೂಡ ಮಾಡಿಕೊಟ್ಟರು.

ಅಷ್ಟರಲ್ಲಿ ಶಾಹು ಒಂದು ಹೋಟೆಲ್ ಹುಡುಕಿ ಮಲಗಿಕೊಳ್ಳುವುದಕ್ಕೆ ವ್ಯವಸ್ಥೆ ಮಾಡಿಬಂದಿದ್ದರು. ಆದರೆ ನಾವು ಮೂವರಿಗೂ ಒಂದೇ ಮಂಚ ಒಂದೇ ಕಂಬಳಿ ಸಿಕ್ಕಿತ್ತು. ನಮ್ಮ ಹಾಸಿಗೆ, ಬಟ್ಟೆಯೆಲ್ಲಾ ಟ್ರೇಲರ್‌ನಲ್ಲಿ ಸಿಕ್ಕಿಕೊಂಡಿದ್ದು ಟ್ರೇಲರ್ ಬಿಚ್ಚಲು ಸಮಯವೂ ಇಲ್ಲ, ಸ್ಥಳವೂ ಇಲ್ಲ. ಮಳೆ ಒಂದೇ ಸಮನೆ ಜಿನುಗುತ್ತಿತ್ತು.

ಸುಶೀಲ ಆ ಕಂಬಳಿಯನ್ನು ನೋಡಿದ್ದೆ,

"ಅವರ್‍ಯಾರು ಹೊದ್ದುಕೊಂಡಿದ್ದರೋ ಏನೋ?" ಎಂದು ದೂರ ಎಸೆದು, ಸೀರೆಯನ್ನೇ ಸುತ್ತಿಕೊಂಡು, ಮೇಲೆ ಶಾಲೂ ಒಂದನ್ನು ಹೊದ್ದು ಮಲಗಿದಳು. ಕ್ರಾಂತಿಗೆ ಕಂಬಳಿ ಹೊದಿಸಿ, ನಾನು ಬೂಟುಗಳನ್ನು ಮಾತ್ರ ಬಿಚ್ಚಿ ಲೆದರ್ ಜಾಕೆಟ್ ತೆಗೆದು ಮೇಲೆ ಹಾಕಿಕೊಂಡು ಮುದುರಿಕೊಂಡೆ. ರಾತ್ರಿಯೆಲ್ಲಾ ಏನೋ ಭಯ, ಹಸಿವು, ನಡುಗುವ ಚಳಿ. ಬೆಳಿಗ್ಗೆ ಆರುಗಂಟೆಗೆಲ್ಲಾ ಎದ್ದು ಮುಖತೊಳೆದುಕೊಂಡು, ಆ ನರಕದಿಂದ ಪರಾರಿಯಾಗಿ ಬಿಟ್ಟೆವು. ಆ ಊರನ್ನು ಬಿಟ್ಟು ದೂರ ಹೋದಮೇಲೆ ಸ್ವಲ್ಪ ಉಸಿರಾಡುವಂತಾಯಿತು.

ಅದೇ ಕಾಡು, ಬೆಟ್ಟ, ಕಣಿವೆ, ರಸ್ತೆಗಳು. ಹನ್ನೊಂದು ಗಂಟೆಗೆಲ್ಲಾ ಟುಯಿನ್ ಸಾಂಗ್ ಪಟ್ಟಣ ಸೇರಿಕೊಂಡೆವು. ಅತಿಥಿ ಗೃಹಕ್ಕೆ ತಲುಪಿ, ಕಮರಾಗಳ ಬಗ್ಗೆ ವಿಚಾರಿಸಿದೆವು. ಇದ್ದ ನಾಲ್ಕು ಕಮರಾಗಳಲ್ಲಿ ಅಸಿಸ್ಟೆಂಟ್ ಕಮೀಷನರ್ (ಎಡಿಸಿ) ಒಂದನ್ನ ಶಾಶ್ವತವಾಗಿ

ಸ್ವಾಧೀನ ಪಡಿಸಿಕೊಂಡಿದ್ದರೆ. ಇನ್ನೊಂದರಲ್ಲಿ ಸ್ಥಳೀಯ ಎಂಎಲ್‌ಎ ಒಬ್ಬರು ಮಲೇರಿಯ ಖಾಯಿಲೆ ಬಂದು ಸುಧಾರಿಸಿ ಕೊಳ್ಳುತ್ತಿದ್ದರು. ಸಧ್ಯಕ್ಕೆ ಎರಡು ಕಮರಾಗಳು ಖಾಲಿ ಇದ್ದು ಟ್ರೇಲರ್‌ನ್ನು ಅಲ್ಲಿಯೇ ಬಿಟ್ಟು ಸುಶೀಲಾ ಮತ್ತು ಕ್ರಾಂತಿಯನ್ನ ಹಾಲಿನಲ್ಲಿ ಕೂರಿಸಿ. ಸಾಹು ಮತ್ತು ನಾನು ಎಡಿಸಿ ಕಛೇರಿಗೆ ತಲುಪಿದೆವು. ಬಾಗಿಲ ಮೇಲೆ ಮಿಸ್ ಡಿ. ವಸಂತಾ ಐ.ಎ.ಎಸ್ ಎಂಬ ಫಲಕ. ಅಪ್ಪಣೆ ಪಡೆದು ಒಳಕ್ಕೆ ಹೋಗುತ್ತೇವೆ ಗೋಧಿ ಬಣ್ಣದ ಸುಂದರವಾದ ಕೋಲುಮುಖದ, ನೀಳ ಮೂಗಿನ, ಮಳೆಯಾಳಿಯಂತೆ ಕಾಣುವ ಯುವತಿ. ಮೊದಲ ನೋಟದಲ್ಲೇ ಆಕರ್ಷಿಸಬಲ್ಲ ಬೆಡಗಿ. ಮದುವೆ ಕೂಡ ಆಗಿಲ್ಲ. ಕುರ್ಚಿಗಳನ್ನು ತೋರಿಸಿದಳು. ಕುಳಿತುಕೊಂಡೆವು. ಸಾಹು ತಮ್ಮಲ್ಲಿದ್ದ ಪತ್ರ ತೋರಿಸಿದರು. ಸರಳವಾದ ಇಂಗ್ಲಿಷ್‌ನಲ್ಲಿ ವಿಚಾರ ವಿನಿಮಯವಾದ ಮೇಲೆ,

"ಒಂದೆರಡು ದಿನಗಳಿಗಾದರೆ ತೊಂದರೆ ಇಲ್ಲ. ಆಗಾಗ ಯಾರ್‍ಯಾರೋ ವಿ.ಐ.ಪಿಗಳು ವ್ಹಿಸಿಟ್ ಮಾಡುತ್ತಲೇ ಇರುತ್ತಾರೆ. ಸಾಧ್ಯವಾದಷ್ಟು ದಿನ ಕೊಡಲು ಪ್ರಯತ್ನಿಸುತ್ತೇನೆ" ಎಂದಳು.

"ಆಯಿತು ಮೇಡಂ, ಸಧ್ಯಕ್ಕೆ ಹಾಗೇ ಆಗಲಿ, ಆದರೆ ಬೇರೆ ಯಾವುದಾದರೂ ಸರಕಾರಿ ಕ್ವಾರ್ಟರ್ಸ್‌ಗಳು ಇದ್ದರೆ ಒಂದೆರಡು ತಿಂಗಳಿಗೆ ಕೊಟ್ಟರೆ ಚೆನ್ನಾಗಿರುತ್ತದೆ" ಎಂದೆವು.

ಸ್ವಲ್ಪ ಯೋಚಿಸಿದ ಅವರು, "ಒಂದು ಕ್ವಾರ್ಟರ್ಸ್ ಖಾಲಿ ಇದೆ. ಆದರೆ ಅದು ಸಧ್ಯಕ್ಕೆ ಬೇರೆಯವರಿಗೆ ಅಲಾಟ್ ಆಗಿದೆಯಲ್ಲಾ.. ನಾಳೆ ಡಿಎಂ ಬರುತ್ತಾರೆ, ಅವರನ್ನು ವಿಚಾರಿಸಿ ಕ್ವಾರ್ಟರ್ಸ್‌ನ್ನು ಸ್ವಾಧೀನ ಪಡಿಸಿಕೊಳ್ಳುವುದನ್ನು ಒಂದೆರಡು ತಿಂಗಳು ಮುಂದಕ್ಕೆ ಹಾಕಿಸಿ ನಿಮಗೆ ಕೊಡಿಸಲು ಪ್ರಯತ್ನಿಸುತ್ತೇನೆ. ಯಾವುದಕ್ಕೂ ನಾಳೆ ಬನ್ನಿ" ಎಂದರು.

ತಾತ್ಕಾಲಿಕವಾಗಿ ಆಪತ್ತಿನಿಂದ ಪಾರಾದ ನಾವು. ಟೀ ಕುಡಿದು ಅಲ್ಲಿಂದ ಅತಿಥಿ ಗೃಹಕ್ಕೆ ಬಂದಿದ್ದೆ ಎರಡು ಕಮರಾಗಳಲ್ಲಿ ಸೇರಿಕೊಂಡೆವು. ಬಂದಿದ್ದ ಒಂದು ಹೊರ ಮನೆಯಲ್ಲಿ ತೋಂಗ್‌ಪಾಂಗ್ ಮತ್ತು ಕಾಂಚಾ ಠಿಕಾಣಿ ಹೂಡಿದರು.

ಒಳ್ಳೆ ಕೋಣೆ, ಒಳ್ಳೆ ಮಂಚಗಳು. ಬಿಸಿನೀರು ಎಲ್ಲಾ ಇದ್ದು ಖುಷಿಯೇನೋ ಆಯಿತು, ಆದರೆ ಎಷ್ಟು ದಿನಕ್ಕೆ..?

ಅದೆಲ್ಲಾ ಒಂದು ಕಡೆಗಿರಲಿ, ಈ ಎಡಿಸಿ ವಸಂತ ಬಂದು ಈ ಬೆಟ್ಟ ಕಣಿವೆಗಳಲ್ಲಿ ಸಿಕ್ಕಿ ಕೊಂಡಿರುವುದು ಮಾತ್ರ ನನಗೇಕೋ ಸರಿಯೆನಿಸಲಿಲ್ಲಾ. ನಾನೂ ಐ.ಎ.ಎಸ್ಸೇ.

ಕೆ.ಎ.ಎಸ್ಸೋ ಮಾಡಿದ್ದರೆ ಚೆನ್ನಾಗಿತ್ತು ಎನಿಸಿತು. ಅದಕ್ಕೆ ಮುಂಚೆಯೂ ಎಷ್ಟೋಸಲ ಹಾಗೆ ಅನಿಸಿದ್ದುಂಟು. ಆದರೆ, ಎಂ.ಎಸ್.ಸಿ ಮುಗಿಸಿದ್ದೆ ಮದುವೆ ಮಾಡಿಕೊಂಡು ಒಂದು ದೊಡ್ಡ ತಪ್ಪು ಮಾಡಿದೆ ಅನಿಸಿತ್ತು. ಈಗ ಅದೆಲ್ಲ ಯೋಚಿಸಿ ಪ್ರಯೋಜನವಿಲ್ಲ. ಸುಮ್ಮನೆ ಮರೆಯಲು ಪ್ರಯತ್ನಿಸಿದೆ.

ಪಕ್ಕಾ ಮನೆ ಸಿಗುವವರೆಗೂ ಫೀಲ್ಡ್ ಕೆಲಸ ಶುರು ಮಾಡುವ ಉದ್ದೇಶ ನಮಗಿರಲಿಲ್ಲ. ಅದರಮಧ್ಯೆ ಬೇರೆ ಬೇರೆ ಸರಕಾರಿ ಕಛೇರಿಗಳಲ್ಲೂ ಕ್ವಾರ್ಟರ್ಸ್‌ಗಳ ಬಗ್ಗೆ ವಿಚಾರಿಸಿ ನೋಡಿದೆವು. ಆದರೆ ಒಂದೂ ಸಿಗಲಿಲ್ಲ. ಡಿಎಂ ಸಿಕ್ಕಾಗ ಎಡಿಎಂ ಸಿಗುತ್ತಿರಲಿಲ್ಲ. ಎಡಿಎಂ ಸಿಕ್ಕಾಗ ಡಿಎಂ ಸಿಗುತ್ತಿರಲಿಲ್ಲ. ಇಬ್ಬರೂ ಸಿಕ್ಕಾಗ ಮನೆ ಅಲಾಟ್ ಆಗಿರುವ ಅಧಿಕಾರಿ ಸಿಗುತ್ತಿರಲಿಲ್ಲ. ಹೀಗಾಗಿ ದಿನಗಳು ತಳ್ಳುತ್ತಲೇ ಹೋಗುತ್ತಿದ್ದವು. ದಿನಾ ಬೆಳಿಗ್ಗೆ ಮನೆ ಹುಡುಕುವುದು, ಮಧ್ಯಾಹ್ನ ಊಟಮಾಡುವುದು, ಸಾಯಂಕಾಲ ಪಟ್ಟಣವನ್ನು ಸುತ್ತುಹಾಕುವುದು ಟಿವಿ ನೋಡುವುದು ಇದೇ ನಡೆದಿತ್ತು.

ಟುಯಿನ್‌ಸಾಂಗ್ ಜಿಲ್ಲೆಯಲ್ಲಿ ಮುಖ್ಯವಾಗಿ ಚಾಂಗ್ ಎಂಬ ಬುಡಕಟ್ಟು ಜನರಿದ್ದು, ಜೊತೆಗೆ ಇನ್ನೂ ಕೆಲವು ಉಪ ಬುಡಕಟ್ಟುಗಳ ಜನರೂ ಇದ್ದರು. ಅದೇ ಕಣ್ಣುಗಳು, ಅದೇ ಮೂಗು, ಅದೇ ಮುಖಗಳು, ಅದೇ ಬಣ್ಣ. ಹುಡುಗಿಯರಂತೂ ಸಣ್ಣ ಸಣ್ಣ ಕಣ್ಣುಗಳ ಜೊತೆಗೆ ಸುಂದರವಾಗಿ ಕಂಗೊಳಿಸುತ್ತಿದ್ದರು.

ಮಧ್ಯೆ ಮಧ್ಯೆ ದೃಷ್ಟಿಯೆಂಬಂತೆ ಸುಂದರವಾದ ಮುಖಗಳ ಮೇಲೆ ಚೆಕ್ಕುಮೀಸೆ, ಹಕ್ಕಿಗರಿ, ಕೋರೆ ಹಲ್ಲುಗಳಂತೆ ಹಚ್ಚೆ ಹಾಕಿಕೊಂಡಿರುವ ಮಧ್ಯವಯಸ್ಸಿನ ಹೆಂಗಸರು ಮತ್ತು ಮುದುಕಿಯರು ಅಷ್ಟ ಸಿಗುತ್ತಿದ್ದರು. ಉಣ್ಣೆ ಶಾಲುಗಳನ್ನು ನಡುಗಳಿಗೆ ಸುತ್ತಿಕೊಂಡು ಫುಲ್ ಶರ್ಟ್‌ಗಳ ಮೇಲೆ ಸ್ವೆಟರ್‌ಗಳನ್ನು ಧರಿಸಿ, ಬೆನ್ನು ಮೇಲಿನ ಬುಟ್ಟಿಗಳಲ್ಲಿ ಸೌದೆಯನ್ನೋ, ಧವಸ ಧಾನ್ಯಗಳನ್ನೋ, ತರಕಾರಿಯನ್ನೋ ಹೊತ್ತು ಸಾಗುತ್ತಿದ್ದರು. ಭುಜಕ್ಕೆ ಅಡ್ಡವಾಗಿ ಸುತ್ತಿದ ಶಾಲುವಿನಲ್ಲಿ ಪುಟ್ಟ ಪುಟ್ಟ ಮಕ್ಕಳು ಗೊಂಬೆಗಳಂತೆ ಪಿಳಿ ಪಿಳಿ ಕಣ್ಣು ಬಿಟ್ಟು ನೋಡುತ್ತಿದ್ದವು.

ಅಂಗಡಿಗಳೆಲ್ಲ ಬಿಹಾರಿ ಯು.ಪಿ. ಮತ್ತು ಮಾರ್ವಾಡಿಗಳದ್ದಾಗಿದ್ದು. ಹೋಟೆಲ್‌ಗಳು, ಶಾಲೆಗಳು ಮತ್ತು ಆಸ್ಪತ್ರೆಗಳು ಮಲೆಯಾಳಿ,ಒರಿಯಾ, ಬಿಹಾರಿಗಳದ್ದಾಗಿವೆ. ನಮ್ಮನ್ನು ಬೀದಿಗಳಲ್ಲಿ ಯಾರೂ ಆಶ್ಚರ್ಯವಾಗಿ ನೋಡುತ್ತಿರಲಿಲ್ಲವಾದ್ದರಿಂದ ಲೀಲಾಜಾಲವಾಗಿ ಓಡಾಡುತ್ತಿದ್ದೆವು.

ಎ.ಡಿ.ಎಂ ವಸಂತಾ ಅವರನ್ನು ಆಗಾಗ್ಗೆ ಸಂಧಿಸಿ ಮನೆಯ ಬಗ್ಗೆ ಒತ್ತಾಯ ಮಾಡುತ್ತಲೇ ಇದ್ದೆವು. ಒಂದು ದಿನ ನಾನು,

"ನಿಮಗೆ ಇಲ್ಲಿ ಹೇಗೆನಿಸುತ್ತದೆ ಮೇಡಮ್? ಏನೂ ತೊಂದರೆ ಇಲ್ಲ ತಾನೆ..?" ಕೇಳಿದೆ.

"ಅಯ್ಯೋ ಬಿಡಿ, ಅದೆಲ್ಲಾ ಏತಕ್ಕೆ? ನೀವೇ ನೋಡುತ್ತಿದ್ದೀರಲ್ಲ.. ಇಲ್ಲಿ ಪುಢಾರಿಗಳು, ಅಧಿಕಾರಿಗಳು ಅನ್ನುವ ಅಂತರವೇ ಇಲ್ಲ. ಎಲ್ಲರೂ ನೇರವಾಗಿ ಕಛೇರಿಗಳ ಒಳಕ್ಕೆ ನುಗ್ಗಿ ಬರುತ್ತಾರೆ. ಕೆಲವೊಂದು ಸಲ ನಾನೇ ಹೊರಕ್ಕೆ ಹೋಗಿಬಿಡುತ್ತೇನೆ. ಇದು ಎಷ್ಟೋ ಮೇಲು, ಅತಿಥಿಗೃಹದಲ್ಲಿ ಯಾವಾಗಲಾದರೂ ಸಮಾರಂಭಗಳು ನಡೆದರೆ, ನನಗೆ ತಲೆ ಕೆಟ್ಟು ಹೋಗುತ್ತದೆ. ಒಂದು ದಿನ ಏನಾಯಿತೆಂದರೆ ಸಮಾರಂಭ ಮಧ್ಯ ರಾತ್ರಿಯವರೆಗೂ ನಡೆಯುತ್ತಿದ್ದು, ನನ್ನಿಂದ ನಿದ್ದೆ ತಡೆದುಕೊಳ್ಳಲಾಗದೆ ಮಂಚದ ಮೇಲೆ ಮಲಗಿಬಿಟ್ಟೆ. ಬೆಳಿಗ್ಗೆ ಎದ್ದು ನೋಡುತ್ತೇನೆ, ಕೋಣೆ ತುಂಬಾ ಜನ, ಮಲಗಿ ನಿದ್ದೆ ಮಾಡುತ್ತಿದ್ದಾರೆ. ಕಾಲಿಡಲೂ ಸ್ಥಳವಿಲ್ಲ" ಎಂದು ಜೋರಾಗಿ ನಕ್ಕಳು. ಎಂತಹವರನ್ನೂ ಆಕರ್ಷಿಸಬಲ್ಲ ಮೋಹಕ ನಗು. ಮತ್ತೆ ಮುಂದುವರಿಸಿದಳು.

"ಒಂದು ಮೆಚ್ಚಿಕೊಳ್ಳುವ ವಿಷಯವೆಂದರೆ ಅವರಿಗೆ ಕೆಟ್ಟ ಉದ್ದೇಶಗಳೇನೂ ಇರುವುದಿಲ್ಲ, ಏನು ಮಾಡಿದರೂ ನೇರವಾಗಿಯೇ ಮಾಡುತ್ತಾರೆ. ಕಾನೂನುಗಳೆಲ್ಲ ನಾಗಾಲ್ಯಾಂಡಿನ ಗಡಿಗಳಿಗಾಚೆಯೆ. ಇಷ್ಟೆಲ್ಲಾ ನಡೆದರೂ ಹೊರಗಿನವರು ಯಾರೂ ತಮ್ಮ ಸ್ಥಳಗಳನ್ನು ಖಾಲಿ ಮಾಡುವುದಿಲ್ಲ. ಬೇಕಾದಷ್ಟು ಹಣ ಬರುತ್ತಿದ್ದರೆ ಯಾರಿಗೆ ತಾನೆ ಬೇಡ. ಯಾವುದಕ್ಕೂ ಏನೂ ಮಿತಿಯಿಲ್ಲ ನಿಮಗೊಂದು ವಿಷಯ ಗೊತ್ತೆ..? ನಾಗಾಗಳಿಗೆ ಮುಖ್ಯವಾಗಿ ಮೂರು ಮಹತ್ವಾಕಾಂಕ್ಷೆಗಳಿರುತ್ತವೆ. ಒಂದು, ಪ್ರತಿಯೊಬ್ಬ ನಾಗಾ ಗಂಡಸಿಗೂ ಒಂದು ಆವೊ (ನಾಗಾಗಳಲ್ಲೇ ಉತ್ತಮವಾದ ಬುಡಕಟ್ಟು) ಹೆಂಡತಿ. ಎರಡು, ದಿಮಾಪುರದಲ್ಲೊಂದು ಮನೆ. ಮೂರು, ತಿನ್ನಲು, ಕುಡಿಯಲು ಹೇರಳವಾದಷ್ಟು ಮಾಂಸ ಮತ್ತು ಡ್ರಿಂಕ್ಸ್" ಇನ್ನೊಮ್ಮೆ ನಕ್ಕಳು, ಅದೇ ನಗು.

"ಹ, ಇನ್ನೊಂದು ವಿಷಯ, ನಿಮಗೆ ಹೇಳಬೇಕಾಗಿದ್ದನ್ನೇ ಮರೆತು ಬಿಟ್ಟೆ. ನಾಳಿದ್ದು ಮಿನಿಸ್ಟರ್ ಬರಲಿದ್ದಾರೆ, ನೀವು ಎರಡು ದಿನ ಅತಿಥಿಗೃಹವನ್ನು ಖಾಲಿ ಮಾಡಬೇಕಾಗುತ್ತದೆ. ಸಧ್ಯದಲ್ಲೇ ನಿಮಗೆ ಮನೆ ಏರ್ಪಾಡಾಗುತ್ತದೆ. ಒಂದೆರಡು ದಿನ ಹೇಗಾದರೂ ವ್ಯವಸ್ಥೆ ಮಾಡಿಕೊಳ್ಳಿ" ಎಂದು ಬಿಟ್ಟರು. ನಮ್ಮ ಜಂಘಾಬಲವೆ ಉಡುಗಿಹೋಯಿತು.

ಆ ದಿನವೇ ಒರಿಯಾ ಡಾಕ್ಟರ್ ಒಬ್ಬರ ಸಹಾಯದಿಂದ ಶಾಹು. ಬಿಹಾರಿ

ಅಧಿಕಾರಿಯ ಕುಟುಂಬ ಪಾಟ್ನಾದಲ್ಲಿದ್ದು, ಅವರಿಗೆ ಒಂದು ಕೋಣೆ ಸಾಕಾಗಿದ್ದು ಮಿಕ್ಕ ಕೋಣೆಗಳನ್ನು ನಮಗೆ ಬಿಟ್ಟು ಕೊಟ್ಟರು.

ಅಷ್ಟೇ ಸಾಕೆಂದು ಆ ಮನೆಗೆ ಆ ಮಧ್ಯಾಹ್ನವೇ ಸಮಾನುಗಳನ್ನು ಸಾಗಿಸಿ ಮರುದಿನದಿಂದಲೇ ಫೀಲ್ಡ್ ಕೆಲಸವನ್ನು ಶುರುಮಾಡಿಬಿಟ್ಟೆವು. ಬೆಳಗ್ಗೆ ಏಳು ಗಂಟೆಗೆಲ್ಲ ತಿಂಡಿ ತಿಂದು ಮಧ್ಯಾಹ್ನಕ್ಕೆ ಬುತ್ತಿಯನ್ನು ಕಟ್ಟಿಕೊಂಡು ಜೊತೆಗೆ ನಾಲ್ಕೈದು ಆಳುಗಳನ್ನು ಕರೆದುಕೊಂಡು ಹೊರಟು ಬಿಡುತ್ತಿದ್ದೆವು.

ಅದೇ ಕಣಿವೆ, ಬೆಟ್ಟ, ಶಿಖರಗಳು, ಗಿಡ, ಮರ, ಕಾಡು, ತೊರೆ, ನದಿಗಳು. ಮಧ್ಯೆ ಮಧ್ಯೆ ಶಿಲೆಗಳಲ್ಲಿ ಅಲ್ಲೊಂದು ಇಲ್ಲೊಂದು ಎಲೆ ಮುದ್ರೆಗಳಿರುವ ಪಳೆಯುಳಿಕೆಗಳು ಮಾತ್ರ ಸಿಗುತ್ತಿದ್ದವು.

ಈ ಬೆಟ್ಟಗಳೆಲ್ಲ ಟರ್ಶರಿ ಶಿಲೆಗಳಿಗೆ ಸೇರಿರುವ ಜಲಜ ಶಿಲೆಗಳಾಗಿದ್ದು ಒಂದು ರೀತಿಯಲ್ಲಿ ಏಕಪ್ರಕಾರದ ಶಿಲೆಗಳಾಗಿದ್ದವು. ಬೆಟ್ಟ ಕಣಿವೆಗಳನ್ನು ಹತ್ತಿ ಇಳಿದ ಮೇಲೆ ಏನೇ ಸಿಗಲಿ, ಸಿಗದೆ ಹೋಗಲಿ ಸಾಯಂಕಾಲದ ಹೊತ್ತಿಗೆ ನಮ್ಮ ಕೈಕಾಲುಗಳೆಲ್ಲ ಸೋತು ಸುಸ್ತಾಗಿ ಬಿಡುತ್ತಿದ್ದವು.

* * *

## ಎರಡು ಶಿಖರಗಳು ಅಪ್ಪಿಕೊಂಡಾಗ

ಒಂದು ದಿನ ಫೀಲ್ಡ್‌ನಿಂದ ವಾಪಸ್ ಬರುವಾಗ ಕೂಲಿಕಾರರು ನಾವ್ಯಾರೂ ನಾಳೆ ಕೆಲಸಕ್ಕೆ ಬರುವುದಿಲ್ಲ ಎಂದರು. ವಿಷಯ ಏನೆಂದು ವಿಚಾರಿಸಿದಾಗ ಎರಡು ವೈರಿ ಹಳ್ಳಿಗಳು ನಾಳೆ ಒಂದಾಗಲಿದ್ದು ತಪ್ಪು ಮಾಡಿದ್ದ ಹಳ್ಳಿಯವರು ಇನ್ನೊಂದು ಹಳ್ಳಿಯವರನ್ನು ಆಹ್ವಾನಿಸಿ ಅವರಿಗೆ ಸಕಲ ಮಾರ್ಯಾದೆಗಳ ಜೊತೆಗೆ ಒಂದು ದೊಡ್ಡ ಹಬ್ಬವನ್ನೇ ಆಚರಿಸುವುದಾಗಿ ತಿಳಿಯಿತು.

ಎರಡೂ ಹಳ್ಳಿಗಳ ಜನ ಬಹಳ ವರ್ಷಗಳಿಂದಲೂ ಕಡು ವೈರಿಗಳಾಗಿದ್ದು, ಒಂದು ಹಳ್ಳಿಯವರು ಇನ್ನೊಂದು ಹಳ್ಳಿಗೆ ಹೋಗುತ್ತಿರಲಿಲ್ಲವಂತೆ. ಅಷ್ಟೇ ಅಲ್ಲ, ಅವರ ನೆಲವನ್ನು ಇವರು, ಇವರ ನೆಲವನ್ನು ಅವರು ತುಳಿಯುವಂತೆಯೂ ಇಲ್ಲ ನಾವ್ಯಾರಾದರೂ ಜೀಪಿನಲ್ಲಿ ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹೋಗಬೇಕಾದರೆ ಆ ಹಳ್ಳಿಯವರನ್ನು ಅವರ ಗಡಿಗಳಲ್ಲೇ ಬಿಟ್ಟು ಬರುವಾಗ ವಾಪಸ್ ಕರೆದು ತರಬೇಕಾಗಿತ್ತು.

ನಾಪಿದ್ದ ಹಳ್ಳಿಯವರು ಮತ್ತು ಎ.ಡಿ.ಸಿ ಅವರು ಸಮಾರಂಭಕ್ಕೆ ನಮ್ಮನ್ನೂ ಆಹ್ವಾನಿಸಿದರು. ಅವರ ಆಹ್ವಾನಕ್ಕಿಂತ ಹೆಚ್ಚಾಗಿ ಹೇಗೆ ಆಚರಿಸುತ್ತಾರೋ ನೋಡಲು ನಾನು ಮತ್ತು ಸಾಹು ಹೊರಟೆವು. ಇಡೀ ಹಳ್ಳಿಯ ಜನ ಸಂಭ್ರಮದಿಂದ ತಮ್ಮ ಸಂಪ್ರದಾಯದ ಬಣ್ಣ ಬಣ್ಣದ ಉಡುಗೆ ತೊಡುಗೆಗಳನ್ನು ಧರಿಸಿ ಸಾಲಾಗಿ ನಿಂತಿದ್ದಾರೆ. ಹೆಂಗಸರು, ತಮ್ಮ ಸಂಪ್ರದಾಯ ಉಣ್ಣೆ ಶಾಲುಗಳನ್ನು ಸೊಂಟಗಳಿಗೆ ಸುತ್ತಿಕೊಂಡು, ದೊಗಳೆ ಕುಪ್ಪಸಗಳನ್ನು ಧರಿಸಿ ಕೂದಲನ್ನು ನೀಳವಾಗಿ ಹಿಂದಕ್ಕೆ ಬಾಚಿ, ತಲೆಗೆ ಒಂದು ಪಟ್ಟಿಯನ್ನು ಕಟ್ಟಿಕೊಂಡಿದ್ದಾರೆ. ಅಗಲವಾದ ಅಂಗವಸ್ತ್ರ ಸೊಂಟ, ಎದೆ ಮತ್ತು ಬೆನ್ನನ್ನು ಸುತ್ತಿಕೊಂಡಿದೆ. ನುಣುಪಾದ ಕೈಕಾಗಳು ಕುಣಿಯಲು ತವಕಿಸುವಂತೆ ಕಾಣುತ್ತಿವೆ.

ಗಂಡಸರು, ಹೆಚ್ಚೂ ಕಡಿಮೆ ಬರಿ ಮೈಯಲ್ಲಿದ್ದಾರೆ ಕಪ್ಪಾದ ಯಾವುದೋ ಪ್ರಾಣಿಯ ಕೂದಲಿನಲ್ಲಿ ಹೆಣಿಗೆ ಮಾಡಿರುವ ಕುಲಾಯಿ, ಅದರಲ್ಲಿ ಸಿಕ್ಕಿರುವ ಉದ್ದುದ್ದವಾದ ಪಿಲಿಕನ್ ಹಕ್ಕಿಯ ರೆಕ್ಕೆಗಳು. ಕೊರಳಲ್ಲಿ ಹುಲಿ, ಕರಡಿಯ ಉಗುರುಗಳು, ಸೊಂಟದಲ್ಲಿ ಕಪ್ಪಾದ ನಡುಪಟ್ಟಿ ಇದೆ. ಮರ್ಮಾಂಗದ ಮೇಲೆ ಫಳ ಫಳನೆ ಹೊಳೆಯುವ ಗುರಾಣಿಯಂತಹ ಬ್ರಾಸ್ ತಟ್ಟೆ ಇದ್ದು, ಮೀನು ಖಂಡಗಳ ಮೇಲೆ ಕಪ್ಪು ಚರ್ಮದ ಪಟ್ಟಿಗಳನ್ನು ಸುತ್ತಿಕೊಂಡಿದ್ದಾರೆ. ಕೈಯಲ್ಲಿ ನಾಡ ಬಂದೂಕುಗಳಿವೆ.

ನಾವು ಸಮಾರಂಭ ನಡೆಯುವ ಬಸ್ತಿಗೆ ನೇರವಾಗಿ ಹೋಗದೆ, ಮೆರವಣಿಗೆ ಹೊರಟಿರುವವರ ಜೊತೆಯೆ ಹೊರಟೆವು. ಅವರೋ ಸ್ಥಳೀಯ ಭಾಷೆಯಲ್ಲಿ ಕೂಗುತ್ತಾ ಕುಣಿಯುತ್ತಾ ಹೊರಟಿದ್ದಾರೆ. ಶಿಬಿರಗಳ ಎರಿಳಿತಗಳನ್ನು ಸುತ್ತಿ ಬಳಸಿದ ಮೆರವಣಿಗೆ ಬಸ್ತಿಯ ಊರಿನ ಮುಖ್ಯ ದ್ವಾರಕ್ಕೆ ತಲುಪಿದ್ದೆ, ಇನ್ನಷ್ಟು ಜೋರಾಗಿ ಕೂಗಾಡುತ್ತ ಹೆಣ್ಣು ಗಂಡೆನ್ನದೆ ಒಬ್ಬರನ್ನೊಬ್ಬರು ಅಪ್ಪಿಕೊಳ್ಳುತ್ತಾ ಆನಂದ ಭಾಷ್ಪವನ್ನು ಸುರಿಸಿದರು.ನಾಡ ಬಂದೂಕುಗಳು ಆಕಾಶದ ಕಡೆಗೆ ಮುಖ ಮಾಡಿ ಸಿಡಿಯ ತೊಡಗಿದವು. ಹಲವಾರು ವರ್ಷಗಳಿಂದ ವೈಷಮ್ಯ ತುಂಬಿಕೊಂಡಿದ್ದ ಮಂಜುಗೆಡ್ಡೆ ಒಮ್ಮೆಲೆ ಕರಗಿ ಪ್ರೀತಿಯ ಹೊಳೆಯಾಗಿ ಹರಿಯ ತೊಡಗಿತು. ಎಲ್ಲರನ್ನೂ ಬಸ್ತಿಯ ಮುಖ್ಯಸ್ತರು ಆದರದಿಂದ ಬರಮಾಡಿಕೊಂಡರು.

ಅಗಲವಾದ ಚಪ್ಪರದ ಮಧ್ಯೆ ಸಣ್ಣ ವೇದಿಕೆ. ಮುಖ್ಯಸ್ಥರು ಮತ್ತು ಅತಿಥಿಗಳು ವೇದಿಕೆ ಮೇಲೆ ಆಸೀನರಾಗುತ್ತಿದ್ದಂತೆ ನಾಗಾ ಸಮೂಹ ನೃತ್ಯ ಶುರುವಾಯಿತು. ಅವರು ಹಾಡುವ ಹಾಡುಗಳಲ್ಲಿ ತಲೆ ತಲಾಂತರದ ಹಿಂದೆ ಮನುಷ್ಯನೆಂಬ ಪ್ರಾಣಿ, ಭಾಷೆಯನ್ನು ಕಲಿತುಕೊಳ್ಳುವುದರ ಜೊತೆಗೆ ದುಡಿಯುವಾಗ ಆಯಾಸವನ್ನು ಮರೆಯಲು ಹಾಡುತ್ತಿರುವಂತೆ ತೋರುತ್ತಿದೆ. ಆ ಹಾಡುಗಳ ಜೊತೆಗೆ ಚಿಟ್ಟಕಣಿವೆಗಳೆಲ್ಲ ಸೇರಿ ಮಾರ್ದನಿಗೊಳ್ಳುತ್ತಿವೆ.

ಮುಖ್ಯ ಅತಿಥಿಗಳಿಂದ ಅನಾವರಣಗೊಂಡ ಒಂದು ಕೆತ್ತನೆ ಕಲ್ಲು ತನ್ನ ಎದೆಯ ಮೇಲೆ ಈ ರೀತಿ ಬರೆದುಕೊಂಡಿತ್ತು.

"ನಮ್ಮೆರಡೂ ಹಳ್ಳಿಯ ಹಳೆಯ ವೈಷಮ್ಯ ಇಂದಿಗೆ ಮುಕ್ತವಾಗಿ ನಾವಿಬ್ಬರೂ ವೈರತ್ವವನ್ನು ಮರೆತು ಎಂದೆಂದಿಗೂ ಸಹಬಾಳ್ವೆಯಿಂದ ಬಾಳುತ್ತೇವೆಂದು ಪಣ ತೊಡುತ್ತಿದ್ದೇವೆ. ಇನ್ನು ಮುಂದೆ ನಮ್ಮ ಎರಡು ಹಳ್ಳಿಗಳ ಗೆಳೆತನ ಚಿರಕಾಲವೂ ಮುಂದುವರೆಯಲೆಂದು ಪ್ರಾರ್ಥಿಸುತ್ತೇವೆ... ದೇವ ಮಾನವ ಜೀಸಸ್‌ನಲ್ಲಿ" ದಿನಾಂಕ.....

ಈ ಒಪ್ಪಂದಕ್ಕೆ ಸಾಕ್ಷಿ ಎಂಬಂತೆ ಗಿಡ ಮರ ಬೆಟ್ಟ ಕಣಿವೆಗಳೇ ನಿಂತು ನೋಡುತ್ತಿವೆ.

ಇನ್ನೊಂದು ಕಡೆ ವಿಧ ವಿಧವಾದ ಭಕ್ಷ್ಯಗಳ ತಯಾರಿ ನಡೆದಿದೆ. ಆಸೆ ಗಣ್ಣುಗಳಿಂದ ಪುಳಕಗೊಂಡ ಜನಸಮೂಹ ಅದರ ಸುತ್ತಲೂ ನಿಂತು ಏನೋ ಲೆಕ್ಕಾಚಾರ ಹಾಕಿಕೊಳ್ಳುತ್ತಾ ಒಳಗೊಳಗೆ ಖುಷಿಗೊಂಡಿದೆ. ಅಲ್ಲಿದ್ದ ನಾಗ ಒಬ್ಬ,

"ತು ಪ್ಲೇನ್ ಮನು ಮ್ಯಾನ್ಸ್ ಕಾಯ್‌ಬೋ?" (ನೀನು ಬಯಲು ಮನುಷ್ಯ ಮಾಂಸ ತಿನ್ನುತ್ತೀಯಾ) ಎಂದ.

"ಹಮ್ ಸಬ್ ಕಾಯ್‌ಬೊ" (ನಾನು ಎಲ್ಲಾ ತಿನ್ನುತ್ತೇನೆ) ಎಂದೆ.

"ಕುತ್ತಾ ಕಾಯ್‌ಬೋ.. ? ಮಂಕಿ ಕಾಯ್ ಬೋ" (ನಾಯಿ ತಿನ್ನುತ್ತೀಯಾ, ಮಂಗ ತಿನ್ನುತ್ತೀಯಾ) ಕೇಳಿದ. ನಾನು ಸುಮ್ಮನೆ ನಕ್ಕೆ.

"ಇಲ್ಲ ನಿನ್ನಿಂದ ಸಾಧ್ಯವಿಲ್ಲ.."ಎಂದೆ.

"ನೀನೇನಾದರೂ ನಾಗಾ ಹುಡುಗೀನ ಮದುವೆಯಾಗಿದ್ದೀಯೇನು ?" ಕೇಳಿದ.

"ಮಾಡಿಕೊಳ್ಳಬೇಕೆಂದಿದ್ದೇನೆ" ಹೇಳಿದೆ.

"ಓ! ನೀನು ಮದುವೆ ಮಾಡಿಕೊಳ್ಳುವುದು ಯಾವಾಗ ? ಇದನ್ನೆಲ್ಲ ತಿನ್ನುವುದು ಯಾವಾಗ ..? ಅಗೋ ಅಲ್ಲಿ ನೋಡು. ಅದು ಹಂದಿ ಮಾಂಸ, ಇದು ಗೋ ಮಾಂಸ, ಇದು ನೋಡು, ಕೋಳಿ ಪಿಳ್ಳೆ ಮಾಂಸ. ಇಲ್ಲಿ ನೋಡು ವಿಶೇಷವಾಗಿ ತಯಾರು ಮಾಡುತ್ತಿರುವ ನಾಯಿ ಮಾಂಸ ಕೆಂಪಗೆ ತುಂಡುಗಳೆಲ್ಲ ಹೇಗೆ ಕುಣಿಯುತ್ತಿದೆ, ಅಲ್ಲವೆ.. ? ಇದನ್ನ ತಿಂದರೆ ಮೈಯೆಲ್ಲಾ ಒಂದು ರೀತಿಯಾಗಿ ಹಾಗೆ ಗಾಳಿಯಲ್ಲಿ ತೇಲಿ ಹೊದಂತಾಗುತ್ತದೆ. ನಾವು ನತದೃಷ್ಟರು. ಮಂಗಗಳ ಮಾಂಸ ಮಾಡಲಾಗಲಿಲ್ಲ. ನಮ್ಮ ಕಾಡುಗಳಲ್ಲಿ ಅವುಗಳ ಉಪಟಳವೆ ಇಲ್ಲ, ಅಸ್ಸಾಂ ಕಾಡುಗಳಲ್ಲಿವೆ. ಆದರೆ ತರಲಾಗಲಿಲ್ಲ" ಬಹಳ ವ್ಯಥೆಯಿಂದ ಹೇಳಿದ.

ಅಷ್ಟರಲ್ಲಿ ದೊಡ್ಡ ದೊಡ್ಡ ಕಡಾಯಿಗಳಲ್ಲಿ ಅಕ್ಕಿ ಬಿಯರ್‌ನ್ನು ತಂದಿಟ್ಟು ಎಲ್ಲರನ್ನು ಆ ಕಡೆಗೆ ಆಹ್ವಾನಿಸಲಾಯಿತು. ಎಲ್ಲರೂ ಬಿದಿರು ನಳಿಕೆಗಳಲ್ಲಿ ಬಿಯರ್ ತುಂಬಿಕೊಂಡು ಕುಡಿಯತೊಡಗಿದರು. ನನಗೂ, ಶಾಹೂಗು ಪಿಂಗಾಣಿ ಗ್ಲಾಸುಗಳಲ್ಲಿ ತುಂಬಿ ಕೊಟ್ಟರು. ಹುಳಿ ಹುಳಿಯಾದ ಅಕ್ಕಿ ಗಂಜಿ, ಆರೋಗ್ಯಕ್ಕೆ ಬಹಳ ಒಳ್ಳೆಯದಂತೆ. ಸ್ವಲ್ಪ ಸ್ವಲ್ಪವೇ ಕುಡಿದೆವು. ಅಷ್ಟರವರೆಗೂ ಸುಮ್ಮನಿದ್ದ ಶಾಹೂ,

"ಸಾಲಾ ಆಜ್ ಯೇ ಭಿ ಪೀಯೇಂಗೆ ಸ್ವಾಮಿ ಸಾಬ್, ನಾನು ಬರಿ ಕೋಳಿ ಮಾಂಸ ತಿನ್ನುತ್ತೇನೆ, ನೀವು?" ಕೇಳಿದರು. ನಾನು ಏನೂ ಹೇಳಲಿಲ್ಲ.

ಸ್ವಸಹಾಯ ಪದ್ಧತಿಯಿಂದ ನಾಗಾಗಳೆಲ್ಲ ಹಂದಿ, ಗೋಮಾಂಸ ಮತ್ತು ಕುತ್ತಾ ಭಕ್ಷ್ಯಗಳ ಸುತ್ತ ಅಮರಿಕೊಂಡರು. ಕೋಳಿ ಪಿಳ್ಳೆಗಳ ಕಡೆಗೆ ಬಯಲು ಸೀಮೆಯವರು ಮಾತ್ರ ನಿಂತಿದ್ದರು. ಒಂದು ರೀತಿಯಲ್ಲಿ ಒಳ್ಳೆಯದೆ ಆಯಿತು. ನಾನು ಮತ್ತು ಶಾಹು ತಟ್ಟೆ ತುಂಬಿಕೊಂಡು, ಅಕ್ಕಿ ಬಿಯರ್ ಜೊತೆಗೆ ಒಂದು ಕಡೆ ಕುಳಿತುಕೊಂಡೆವು. ಹಂದಿ ಮತ್ತು ಗೋ ಮಾಂಸದ ರುಚಿಯ ಸೆಳೆತ ಎಲ್ಲೋ ಮೂಲೆಯಲ್ಲಿ ಎದ್ದಂತಾಯಿತು. ಆದರೆ ಅವರ ತಯಾರಿ ಯಾವ ರೀತಿ ಇದೆಯೋ ಏನೋ..? ಒರಿಯ ಶಾಹು ಒಂದು ರೀತಿಯ ಬಂಡಾಯಗಾರನೆ ಸರಿ.

"ಸಾಹೂ ಸಾಬ್ ಪೋರ್ಕ್ ತಿನ್ನುತ್ತೀರಾ.?" ಕೇಳಿದೆ.

"ತಿನ್ನುತ್ತೇನೆ. ಆದರೆ ಅವರ ತಯಾರಿ ಹೇಗಿದೆಯೋ ಏನೋ.. ? ಆಮೇಲೆ ಪೋರ್ಕ್ ತಿನ್ನುವುದನ್ನೇ ಬಿಟ್ಟು ಬಿಡಬೇಕಾದರೆ" ನಕ್ಕರು.

ಕೋಳಿ ಮಾಂಸ ಸುಮಾರಾಗಿಯೇ ಇತ್ತು.

"ಆ ರೀತಿ ಇದ್ದರೆ ಬಿಟ್ಟು ಬಿಡೋಣ ನಡೆಯಿರಿ" ಎಂದೆ. ಇಬ್ಬರೂ ಹೋಗಿದ್ದೆ, ಅಲ್ಲಿ ನಿಂತಿದ್ದವನು ಒಂದೊಂದು ಸೌಟು ತುಂಬಾ ಪೋರ್ಕ್ ಹಾಕಿ,

"ಬೀಫ್ ಕಾಯ್‌ಬೋ?" ಎಂದ. ಶಾಹು ಹಿಂದಕ್ಕೆ ತಿರುಗಿಕೊಂಡರು. ಗಂಟಲಿಗೆ ಬಂದಿದ್ದ ಆಸೆಯನ್ನು ಹಾಗೆಯೆ ನುಂಗಿಕೊಂಡು ಅವರ ಹಿಂದೆಯೇ ನಡೆದೆ. ಪರವಾಗಿಲ್ಲ ತಿನ್ನಬಹುದು, ತಿಂದೆವು. ಭರ್ಜರಿ ಊಟ ಮುಗಿಸಿದ ನಾವು ಅಲ್ಲಿಂದ ಬೀಳ್ಕೊಂಡೆವು. ಘಡದ್ ಊಟ, ಬಿಯರ್ ಜೊತೆ ಸೇರಿದ್ದರಿಂದ ಸಣ್ಣದಾಗಿ ಮತ್ತೇರಿತು. ಮನೆ ಸೇರಿಕೊಂಡೆವು.

* * *

ಟುಯಿನ್‌ಸಾಂಗ್ ಮತ್ತು ಸುತ್ತ ಮುತ್ತ ಕೆಲಸ ಮುಗಿಯುತ್ತ ಬಂದಿದ್ದು ಅಲ್ಲಿಂದ ಇನ್ನೂ ಈಶಾನ್ಯಕ್ಕೆ ಅಂದರೆ ಲೋಂಗ್ ಲೆಂಗ್ ಕಡೆ ಕೆಲಸ ಬಾಕಿ ಉಳಿದುಕೊಂಡಿತ್ತು. ಜೊತೆಗೆ ಕ್ರಾಂತಿ ಚಳಿಗಾಲದ ರಜಾ ಕೂಡ ಮುಗಿಯುತ್ತಾ ಬಂದಿತ್ತು. ಒಂದು ದಿನ ಎಂದಿನಂತೆ ಕ್ವಾರ್ಟರ್ಸ್ ಖಾಲಿಮಾಡಿ, ಗಂಟು ಮೂಟೆ ಕಟ್ಟಿಕೊಂಡು ಟುಯಿನ್‌ಸಾಂಗ್‌ನಿಂದ ದಿಮಾಪುರದ ಕಡೆಗೆ ಪ್ರಯಾಣ ಮಾಡಿದೆವು. ಎಲ್ಲವನ್ನೂ ಪ್ಯಾಕ್ ಮಾಡಿಕೊಂಡು ಟ್ರೇಲರ್ ತುಂಬಿಕೊಂಡು ಸಮುದ್ರದ ಅಲೆಗಳಂತಹ ಹಿಮಾಲಯದ ಶಿಖರ, ಕಣಿವೆಗಳನ್ನು ಇಳಿಯುವುದರೊಳಗೆ ಸೂರ್ಯ ಪಶ್ಚಿಮದ ಕಡೆಗೆ ವಾಲಿದ್ದ.

ಮೊಖಿಕ್ ಚುಂಗ್ ದಾಟಿ ಅಸ್ಸಾಂನ ಕೆಳ ತಪ್ಪಲುಗಳನ್ನು ಮುಟ್ಟುವ ಅವಸರದಲ್ಲಿ ನಮ್ಮ ಜೀಪು ಕಾಲು ಮುರಿದುಕೊಂಡಂತೆ ಒಂದು ತಿರುವಿನಲ್ಲಿ ಮುಗ್ಗರಿಸಿ ನಿಂತು ಕೊಂಡಿತು. ಚಾಲಕನಿಗೆ ಸ್ವಲ್ಪ ರಿಪೇರಿ ಗೊತ್ತಿದ್ದರಿಂದ ಅವನ ಮೈ ಕೈಯೆಲ್ಲಾ ಗ್ರೀಸ್ ಮಾಡಿಕೊಂಡು ರಿಪೇರಿ ಮಾಡ ತೊಡಗಿದ. ರಮಣೀಯವಾದ ದೃಶ್ಯಗಳನ್ನು ಆಹ್ಲಾದಕರವಾದ ತಂಗಾಳಿ ಇನ್ನಷ್ಟು ಮರುಪುಗೊಳಿಸಿದ್ದರೂ ನಮ್ಮಿಂದ ಸವಿಯಲಾಗಲಿಲ್ಲ.

ಅಲ್ಲೇ ಹತ್ತಿರದಲ್ಲೇ ಬಿಹಾರಿ ಕೂಲಿಗಳು ರಸ್ತೆ ಕೆಲಸ ಮಾಡುತ್ತಿದ್ದಾರೆ. ರಸ್ತೆ ಪಕ್ಕದಲ್ಲೆ ಇರುವ ಉದ್ದವಾದ ಖಾಲಿ ಟಾರ್ ಡ್ರಮ್‌ಗಳಲ್ಲಿ ನಿರ್ಮಿತವಾದ ಶೆಡ್ಡಿನ ಸುತ್ತ ಕೆಲವು ಬಿಹಾರಿ ಯುವಕರು ಬಿಸಿಲು ಕಾಯುತ್ತಾ ಹರಟೆ ಹೊಡೆಯುತ್ತಿದ್ದಾರೆ. ಇಂತಹ ಕಷ್ಟಕರವಾದ ಕೆಲಸಗಳನ್ನು ಹೆಚ್ಚಾಗಿ ಬಿಹಾರಿಗಳೇ ಮಾಡುವುದು. ಕುತೂಹಲದಿಂದ ಹತ್ತಿರಕ್ಕೆ ಹೋಗಿ ಷಡ್ಡಿನ ಒಳಕ್ಕೆ ಇಣುಕಿ ನೋಡಿದೆ. ಹಳೆ ವಸ್ತುಗಳೆ ತುಂಬಿದ್ದ ಷಡ್ಡಿನಲ್ಲಿ ಸಾಲಾಗಿ ಹಾಕಿರುವ ಹಸಿ ಹಸಿ ಬಿದಿರು ಬೊಂಬುಗಳಿಂದ ಮಾಡಿರುವ ಮಂಚಗಳು, ಅವುಗಳ ಮೇಲೆ ರಜಾಯಿ ಮತ್ತು ಗದ್ದಿಗಳು. ಅಲ್ಲಲ್ಲಿ ನೇತಾಡುತ್ತಿರುವ ಚಿಂದಿ ಬಟ್ಟೆಗಳು, ಚೀಲಗಳು, ತುಟಿಗಳೇ ಇಲ್ಲದ ಮಡಿಕೆ ಕುಡಿಕೆಗಳು. ಮೂಲೆಯಲ್ಲಿ ಎಲ್ಲವನ್ನೂ ಮರೆಯಲೆಂಬಂತೆ ಟ್ರಾನ್ಸಿಸ್ಟರ್ ಒಂದು ಜೋಗುಳ ಹಾಡುತ್ತಿದೆ. ಮಧ್ಯೆ ಮಧ್ಯೆ ಅಲ್ಲಲ್ಲಿ ಚಟ್ಟದ ಮೇಲೆ ಮಲಗಿದಂತೆ ಕಾಣುವ ಕೂಲಿ ಆಳುಗಳು. ಒಟ್ಟಿನಲ್ಲಿ ಎಲ್ಲವೂ ಬಿಹಾರ ರಾಜ್ಯದ ಗೂಡೆ ನಕ್ಷೆಯಂತೆ ಕಾಣುತ್ತಿದ್ದವು.

ಶಾಹು, ಜೀಪಿನ ಸುತ್ತಲು ನಾಯಿ ಮರಿಯಂತೆ ಚಕ್ಕರ್ ಹೊಡೆಯುತ್ತಲೇ ಇದ್ದಾರೆ. ಸುಶೀಲ ಜೀಪು ರಿಪೇರಿಯಾಗದೆ ಹೋದರೆ ಏನು ಮಾಡುವುದು ಎಂದು ಗಾಬರಿ ಗೊಂಡಿದ್ದಾಳೆ. ಸೂರ್ಯ ಇನ್ನೇನು ಪಶ್ಚಿಮದ ಗುಡ್ಡಗಳ ಮೇಲೆ ತನ್ನ ಕಾಲುಗಳನ್ನು ಊರಲ್ಲಿದ್ದಾನೆ ಎನ್ನುವಾಗ ಜೀಪು ಹೊರಡಲು ತಯಾರಾಗಿ ನಮ್ಮನ್ನು ಕರೆಯುವಂತೆ ಶಬ್ದ ಮಾಡಿತು. ರಸ್ತೆಯ ಪಕ್ಕದಲ್ಲಿ

ಕುಳಿತಿದ್ದ ನಾವು ಎದ್ದು ಹತ್ತಿರಕ್ಕೆ ನಡೆದೆವು. ದಿಮಾಪುರ ಇನ್ನೂ ಸುಮಾರು ನೂರೈವತ್ತು ಕಿ.ಮೀಗಳು ದೂರವಿದ್ದು ಕನಿಷ್ಟ ನಾಲ್ಕು ಗಂಟೆಗಳ ಪ್ರಯಾಣವಿದೆ.

ಜೋರ್‌ಹಟ್‌ನಿಂದ ಗೋಲ್‌ಘಾಟ್‌ವರೆಗೆ ರಸ್ತೆ ಏನೇನೂ ಚೆನ್ನಾಗಿಲ್ಲ. ಜೀಪು ಕೇವಲ ಇಪ್ಪತ್ತು ಕಿ.ಮೀಟರ್‌ಗಳ ವೇಗದಲ್ಲಿ ಚಲಿಸುತ್ತಿದೆ.

ಜೀಪು ಅಸ್ಸಾಂನ ಟಿಟ್ಟಬಾ ಎಂಬ ಊರು ತಲುಪಿದ್ದೆ, ರಸ್ತೆ ಬದಿಯಲ್ಲಿ ಸಿಕ್ಕಿದ್ದನ್ನೇ ಕೊಂಡು ತಿಂದು ಅಲ್ಲಿಂದ ಅದೇ ರಾತ್ರಿ ಹೇಗಾದರೂ ಸರಿ ದಿಮಾಪುರ ತಲುಪಲೇಬೇಕೆಂದು ಪ್ರಯಾಣ ಮುಂದುವರಿಸಿದೆವು. ತುಂತುರು ಮಳೆ ಶುರುವಾಗುವುದರ ಜೊತೆಗೆ ಗಾಳಿ ತಂಪೇರಿ, ಮಳೆ ಇನ್ನಷ್ಟು ಜೋರಾಗಿ ಜೀಪಿನ ಒಳಕ್ಕೂ ಪ್ರವೇಶಿಸಿತು.

ರಾತ್ರಿ ಒಂಬತ್ತು ಗಂಟೆಗೆ ಶಾಂತಿಪುರಂ ತಲುಪಿದೆವು. ನಾಗಾಲ್ಯಾಂಡಿನ ಗಡಿ ಇನ್ನೂ ಮೂವತ್ತು ಕಿ.ಮೀ.ಗಳ ದೂರವಿದೆ. ಎಲ್ಲಿ ನೋಡಿದರು ಏನೋ ಗುಸು ಗುಸು ಮಾತು, ಭೀತಿ ತುಂಬಿದ ವಾತಾವರಣ.

"ಗಾಡಿ ಎಲ್ಲಿಗೆ ಹೋಗಬೇಕು ?" ಯಾರೋ ಕೇಳಿದರು.

"ದಿಮಾಪುರಕ್ಕೆ" ಎಂದಿದ್ದೆ,

"ಅರೆ ರಸ್ತೆಯೆಲ್ಲಾ ಬಂದ್ ಆಗಿದೆ. ನಾಳೆ ಬೆಳಿಗ್ಗೆ ಒಂಬತ್ತು ಗಂಟೆವರೆಗೂ ಕರ್ಬಿಯಾಂಗ್ ಲಾಂಗ್‌ನವರು ಬಂದ್ ಘೋಷಿಸಿದ್ದಾರೆ. ಗಾಡಿ ಎಲ್ಲಾದರೂ ಸುಟ್ಟುಬಿಟ್ಟಾರು. ರಾತ್ರಿ ಇಲ್ಲೇ ಎಲ್ಲಾದರೂ ಉಳಿದುಕೊಂಡು ಬೆಳಗ್ಗೆ ಹೋಗಿ" ಎಂದರು.

ಆ ಊರಿನಲ್ಲಿ ಉಳಿದುಕೊಳ್ಳಲು ಹೋಟೆಲು ಕೂಡ ಇರಲಿಲ್ಲ. ಊರಿನ ಹೊರಗಡೆ ಇದ್ದ ಒಂದೇ ವಿಶ್ರಾಂತಿ ಗೃಹಕ್ಕೆ ಕಳ್ಳರಂತೆ ಭಯದಿಂದ ತಲುಪಿ ಕೊಠಡಿ ಬಗ್ಗೆ ವಿಚಾರಿಸಿದೆವು. ಕಾವಲುಗಾರ "ನಿಮ್ಮ ದುರಾದೃಷ್ಟಕ್ಕೆ ಯಾವ ಕೋಣೆಯೂ ಖಾಲಿ ಇಲ್ಲ. ಸಿಟ್ಟಿಂಗ್ ಕೋಣೆ ಮಾತ್ರ ಖಾಲಿ ಇದೆ. ನಿಮಗೆ ಇಷ್ಟವಾದರೆ ಅಲ್ಲೇ ರಾತ್ರಿ ಇರಬಹುದು. ಆದರೆ ಕಂಬಳಿಯಾಗಲಿ ರಜಾಯಿಯಾಗಲಿ ಯಾವುದನ್ನು ಕೇಳಬೇಡಿ" ಎಚ್ಚರಿಸಿದ. ಅಷ್ಟೇ ಸಾಕೆಂದು ಸಿಟ್ಟಿಂಗ್ ಕೋಣೆ ಪ್ರವೇಶಿಸಿದೆವು. ಕೋಣೆಯಲ್ಲಿ ಒಂದೆರಡು ಕುರ್ಚಿಗಳು ಮತ್ತು ಒಂದು ಖಾಲಿ ಬೆಂಚು ಇತ್ತು. ಆಗಲೇ ನಿದ್ದೆ ಮಾಡಿದ್ದ ಕ್ರಾಂತಿಯನ್ನು ಬೆಂಚಿನ ಮೇಲೆ ಮಲಗಿಸಿದೆ. ಸುಶೀಲ ಕೂಡ ಹಿಂದೆ ಮುಂದೆ ನೋಡದೆ ಕ್ರಾಂತಿಯನ್ನು ಸ್ವಲ್ಪ ಸರಿಸಿ ಪಕ್ಕದಲ್ಲೇ ಮಲಗಿಕೊಂಡಳು. ಹೊರಗಿದ್ದ ಶಾಲುವನ್ನು ಸುಶೀಲ ಹೊದ್ದುಕೊಂಡರೆ, ಕ್ರಾಂತಿಗೆ ನನ್ನ ಜಾಕೆಟ್ ಬಿಚ್ಚಿ ಹೊದಿಸಿದೆ. ಹೋಲ್ಡಾಲ್, ರಜಾಯಿ, ಬಟ್ಟೆಗಳೆಲ್ಲ ಟ್ರೇಲರ್‌ಲ್ಲಿ ಇದ್ದು ಈಗ ಬಿಚ್ಚಿದರೆ ಎಲ್ಲವನ್ನೂ ಒಳಕ್ಕೆ ತರಬೇಕು. ಮತ್ತೆ ಬೆಳಗ್ಗೆ ಗಾಡಿಗೆ ತುಂಬಿಸಿ ಕಟ್ಟಬೇಕು. ಮಳೆ, ಚಳಿ, ಕತ್ತಲು ಬೇರೆ.

ಹೇಗಾದರೂ ಆಗಲಿ ಎಂದುಕೊಂಡು ಒಂದು ಕುರ್ಚಿಯನ್ನು ಹತ್ತಿರಕ್ಕೆ ಎಳೆದುಕೊಂಡು ಪಕ್ಕದಲ್ಲಿಯೇ ಕುಳಿತುಕೊಂಡೆ. ಶಾಹು ಇನ್ನೊಂದು ಕುರ್ಚಿಯಲ್ಲಿ ಕುಳಿತುಕೊಂಡರು. ಮೇಲೆ ಒಂದೇ ಒಂದು ಬಲ್ಬು ಮಾತ್ರ ಕಾವಲು ಕಾಯುತ್ತಿದೆ. ಚಾಲಕ ಮತ್ತು ಶರ್ಮ (ಕಾಂಚಾ) ಗಾಡಿಯಲ್ಲೇ ಮಲಗಿಕೊಂಡರು.

ಅದೊಂದು ಘೋರವಾದ ರಾತ್ರಿಯಾಗಿ ಸಮಯಕ್ಕೆ ಗೆದ್ದಲು ಹಿಡಿಯುತ್ತಿತ್ತು. ದೂರದಲ್ಲೆಲ್ಲೋ ಏಳುವ ಸದ್ದಿನ ಅಲೆಗಳು ಯಾವುದೋ ಅನಾಹುತವನ್ನು ಹೊತ್ತು ತರುವಂತೆ ಆಗಾಗ ನಮ್ಮಲ್ಲಿ ಭೀತಿಯನ್ನು ಹುಟ್ಟಿಸುತ್ತಿದ್ದವು. ಅರೆ ನಿದ್ದೆ, ಅರೆ ಎಚ್ಚರ, ಮೈ ಕೊರೆವ ಚಳಿ, ಯಾವುದೋ ಊರು, ಯಾವುದೋ ರಾಜ್ಯ, ಉಸಿರಾಡಿದರೆ ಗೋಡೆಗಳೇ ಎದ್ದು ದಾಳಿ ಮಾಡಿಬಿಡುವಂತಹ ಸನ್ನಿವೇಶ.

ನಸುಕು ಮೂಡುವುದಕ್ಕಿಂತ ಮುಂಚೆಯೇ ಅಂದರೆ ನಾಲ್ಕು ಗಂಟೆಗೆಲ್ಲಾ ಎದ್ದು ಮುಖ ಕೂಡ ತೊಳೆಯದೆ ಹಾಗೆಯೇ ಹೊರಟೆವು. ಯಾರಾದರೂ ಗಾಡಿಯನ್ನು ಅಡ್ಡಗಟ್ಟುವರೋ ಅಥವಾ ಹಿಂದೆ ಅಟ್ಟಿಸಿಕೊಂಡು ಬರುವರೋ ಎಂಬ ಭೀತಿ ಇನ್ನೂ ಹೋಗಿರಲಿಲ್ಲ. ರಾತ್ರಿ ಎಲ್ಲಾ ಕಾವಲು ನಿಂತಿದ್ದ ಕರ್ಬಿಯಾಂಗ್‌ಲಾಂಗ್ ಯುವಕರು ಇಂತಹ ಸುಂದರ ನಸುಕಿನಲ್ಲಿ ಒಮ್ಮೆಯಾದರೂ ಮೈಮರೆತು ಗೊರಕೆ ಹೊಡೆಯುವುದರಲ್ಲಿ ಸಂದೇಹವಿಲ್ಲ. ಆದರೆ ದಾರಿಗೆ ಏನಾದರೂ ವಸ್ತುಗಳನ್ನು ಅಡ್ಡವಾಗಿ ಎಸೆದಿದ್ದರೆ? ನಾಗಾಲ್ಯಾಂಡಿನ ಗಡಿ ತಲುಪುವವರೆಗೂ ಮನಸ್ಸಿಗೆ ಸಮಾಧಾನವಾಗಲಿಲ್ಲ.

ನಾಗಾಲ್ಯಾಂಡಿನ ಗಡಿಯನ್ನು ಕೊನೆಗೂ ತಲುಪಿದ್ದೇ ಜೀಪು ನಿಟ್ಟುಸಿರು ಬಿಟ್ಟು, ಸರಾಗವಾಗಿ ಓಡುತ್ತಿತ್ತು. ಈಗ, ಹಿಂದೆಯೇ ಇನ್ನೊಂದು ಭೀತಿ ಶುರುವಾಗಿತ್ತು. ಸುಶೀಲ ಮತ್ತು ಕ್ರಾಂತಿಯನ್ನು ದೀಮಾಪುರದಲ್ಲಿ ಬಿಟ್ಟು ಮತ್ತೆ ಲೊಂಗ್ ಲೆಂಗ್ ಕಡೆಗೆ ಹೋಗಬೇಕಲ್ಲ ಎನ್ನುವುದು.

* * *

## 19 ದೀಖು ನದಿಯ ಕಡೆಗೆ

ಎರಡು ಮೂರು ದಿನಗಳಲ್ಲಿ ಮನೆಗೆ ಬೇಕಾದ ಸಾಮಾನುಗಳನ್ನೆಲ್ಲಾ ತಂದುಕೊಟ್ಟು ಮತ್ತೆ ಫೀಲ್ಡ್‌ಗೆ ಹೋಗಲು ತಯಾರಿ ಮಾಡಿಕೊಂಡೆ. ನಮ್ಮ ಡೈರೆಕ್ಟರ್ ಕೂಡ ಬೇಗನೆ ಫೀಲ್ಡ್‌ಗೆ ಹೋಗುವಂತೆ ಒತ್ತಾಯ ಮಾಡುತ್ತಿದ್ದರು. ನಾಳೆ ಬೆಳಗ್ಗೆ ಫೀಲ್ಡ್‌ಗೆ ಹೊರಡಬೇಕು, ಅನ್ನುಕೊಳ್ಳುವಷ್ಟರಲ್ಲಿ ಶಾಹೂಗೆ ಭುವನೇಶ್ವರದಿಂದ ತುರ್ತಾಗಿ ತಂತಿ ಬಂದು ರಾತ್ರಿಯೇ ಹೊರಟು ಹೋಗಿದ್ದರು. ಈ ವಿಷಯ ತಿಳಿದಿದ್ದೇ ನನಗೇಕೋ ಸಣ್ಣದಾಗಿ ನಡುಕ ಶುರುವಾಯಿತು. ಹೊಸ ಸ್ಥಳ ಒಬ್ಬನೇ ಹೋಗಬೇಕು. ಬೇರೆ ದಾರಿ ಕಾಣದೆ ಹೊರಟು ನಿಂತೆ.

ಸುಶೀಲ "ಓಯ್ಯೊ ಏನ್ರೀ ಒಬ್ಬರೇ ಹೋಗ್ತಾ ಇದ್ದೀರಿ... ಭಾಯಿ ಸಾಬ್ ಸ್ವಾಮೀಜಿಯನ್ನು ಭದ್ರವಾಗಿ ನೋಡಿಕೊಳ್ಳಿ" ಎಂದಳು ಕಳಕಳಿಯಿಂದ ಚಾಲಕ ತೋಂಗ್‌ಪಾಗ್‌ಗೆ. ನನಗಿನ್ನ ಚಿಕ್ಕವನಾದ ಅವನಿಗೆ ನನ್ನ ಹೊಣೆಯನ್ನು ಒಪ್ಪಿಸಿದ್ದಕ್ಕೆ ನನಗ್ಯಾಕೋ ಸರಿಯೆನಿಸಲಿಲ್ಲ. ಸಧ್ಯಕ್ಕೆ ಸುಮ್ಮನೆ ನಕ್ಕ ಅವನು ಏನೂ ಹೇಳಲಿಲ್ಲ. ಸಮಯ ಕಳೆದಷ್ಟು ಟೆನ್ಷನ್ ಏರುತ್ತಾ ಹೋಗುತ್ತಿತ್ತು. ಎಲ್ಲಾ ಸಾಮಾನುಗಳನ್ನು ತುಂಬಿಕೊಂಡು ಟ್ರೇಲರ್‌ಗೆ ಹಗ್ಗ ಬಿಗಿದು ಜೀಪಿನಲ್ಲಿ ಕುಳಿತುಕೊಂಡೆ.

ಚಾಲಕ ಇಂಜಿನ್ ಚಾಲನೆ ಮಾಡಿದ್ದೇ ಸುಶೀಲ ಮತ್ತು ಕ್ರಾಂತಿ ಪಕ್ಕಕ್ಕೆ ಬಂದು ಕೈ ಬೀಸಿದರು. ಜೀಪು ಮತ್ತೊಮ್ಮೆ ಬಯಲಿಂದ ಬೆಟ್ಟಗಳ ಕಡೆಗೆ ಸಾಗಿತ್ತು. ಮೊಟ್ಟಮೊದಲ ಬಾರಿಗೆ ಬೆಟ್ಟಗಳಲ್ಲಿ ನನ್ನ ಏಕ ಪಾತ್ರಾಭಿನಯ ಪ್ರಾರಂಭಗೊಂಡಿತು. ಲೋಂಗ್‌ಲೆಂಗ್ ನಿಂದ ಸುಮಾರು ಮೂವತ್ತು ಕಿ.ಮೀಟರ್‌ಗಳ ದೂರದಲ್ಲಿ ತೋಂಗ್‌ಪಾಂಗ್‌ನ ಬಸ್ತಿ ಇರುವುದಾಗಿ, ಈ ಬಸ್ತಿಯಿಂದ ಅವನ ಸಂಬಂಧಿ ಒಬ್ಬ ದಿಮಾಪುರಕ್ಕೆ ಬಂದಿದ್ದು ನಾವು ಹೋಗುವಾಗ ನಮ್ಮ ಜೊತೆಯಲ್ಲೇ ಅವನನ್ನು ಕರೆತರುತ್ತೇನೆಂದು ತೋಂಗ್‌ಪಾಂಗ್ ಮೊದಲೇ ತಿಳಿಸಿದ್ದ. ಜೀಪು ಒಂದು ವೃತ್ತದಲ್ಲಿ ನಿಂತುಕೊಂಡ ತಕ್ಷಣ ಆ ಯುವಕ ಗಾಡಿಯ ಹತ್ತಿರಕ್ಕೆ ಬಂದ. ಅವನ ಆಸೆ ನನಗೆ ಅರ್ಥವಾಗಿ ನನ್ನ ಪಕ್ಕದಲ್ಲಿಯೇ ಕುಳಿತುಕೊಳ್ಳಲು ಆಹ್ವಾನಿಸಿದೆ. ನನಗಿನ್ನ ಒಂದೆರಡು ವರ್ಷಗಳ ಚಿಕ್ಕವನಂತೆ ಕಾಣುತ್ತಿದ್ದು ಚೆನ್ನಾಗಿಯೇ ಬಟ್ಟೆ ಧರಿಸಿದ್ದಾನೆ.

ಜೀಪಿನ ಹಿಂದೆ ನಮ್ಮ ಕಾಂಚಾ, ಶರ್ಮಾ ಸಾಮಾನುಗಳ ಮಧ್ಯೆ ಕೋಳಿಪಿಳ್ಳೆಯಂತೆ ಕುಳಿತಿದ್ದಾನೆ. ಶರ್ಮನ ಒಂದು ವಿಶೇಷವೆಂದರೆ ನಮ್ಮ ಜೊತೆ ಫೀಲ್ಡ್ ಮುಗಿಸಿದಾಗ ಒಳ್ಳೆ ತೊಂಡೆಹಣ್ಣಿನಂತೆ ಊದಿಕೊಂಡಿರುತ್ತಾನೆ. ಮಧ್ಯಂತರದಲ್ಲಿ ಅವರ ಊರಿಗೆ ಹೋಗಿ (ನೇಪಾಳ)

ಕೂಲಿನಾಲಿ ಮಾಡಿ ಮತ್ತೆ ಫೀಲ್ಡ್‌ಗೆ ಬರುವಾಗ ಹಪ್ಪಳದಂತಾಗಿರುತ್ತಾನೆ. ಅಡಿಗೆ ಮಾಡುವುದರಲ್ಲಿ ಅವನದು ಭಾರಿ ವೈಭವ. ಹಿಂದಿನ ವರ್ಷ ನಾನು, ಸಾಮು ಫೀಲ್ಡ್‌ಗೆ ಹೋದಾಗ ಹದಿನಾರು ಕೆಜಿಯ ಸಾಸುವೆ ಎಣ್ಣೆಯ ಟಿನ್ನೊಂದನ್ನು ಕೊಂಡುಕೊಂಡಿದ್ದೆವು. ಭೂಪ ಇದನ್ನು ಕೇವಲ ನಲವತ್ತೇ ದಿನಗಳಲ್ಲಿ ಮುಗಿಸಿದ್ದ. ಫೀಲ್ಡ್ ಮುಗಿದಾಗ ಅವನ ಕೆನ್ನೆಗಳಲ್ಲಿ ಎಣ್ಣೆ ಜಿನುಗುತ್ತಿತ್ತು.

ಅದೇ ರಸ್ತೆ, ಅದೇ ದೃಶ್ಯಗಳು, ಅದೇ ಗೋಲಾಘಾಟ್, ಮರಿಯಾಣಿ ದಾಟಿದಮೇಲೆ ಮೊಖಿಕ್‌ಚುಂಗ್ ತಲುಪುವುದಕ್ಕಿಂತ ಮುಂಚೆ ನಮ್ಮ ಜೀಪು ಮುಖ್ಯರಸ್ತೆಯಿಂದ ಸೀಳಿಕೊಂಡಿದ್ದ ಕವಲು ರಸ್ತೆಯಲ್ಲಿ ಇನ್ನೂ ಈಶಾನ್ಯಕ್ಕೆ ದೀಖು ನದಿಯ ಪ್ರಪಾತದ ಕಡೆಗೆ ಇಳಿಯತೊಡಗಿತು. ದಟ್ಟವಾದ ಕಾಡು, ಆಳವಾದ ಇಳಿಜಾರುಗಳು, ಹೇರಳವಾದ ಮೆಕ್ಕಲು ರಾಶಿ. ಸುತ್ತಲೂ ರಾಶಿ ರಾಶಿ ಮೋಡಗಳು ಹೆಪ್ಪುಗಟ್ಟಿ ಗುಡುಗಲು ಪ್ರಾರಂಭಿಸಿದ್ದೇ ಮಳೆ ಹನಿಗಳು ಪಟಪಟನೆ ಉದುರಿದವು. ಇದೆಲ್ಲದರ ನಡುವೆ ದಿನ ಮೊಟಕುಗೊಂಡು ಕತ್ತಲು ಆವರಿಸಿಕೊಳ್ಳುತ್ತಿದ್ದಂತೆ ನನ್ನಲ್ಲಿ ಸಣ್ಣದಾಗಿ ಭಯ ತುಂಬಿಕೊಳ್ಳುತ್ತಿತ್ತು. ನಮ್ಮ ಮಹೇಂದ್ರ ಜೀಪು ತಗ್ಗು ದಿಣ್ಣೆಗಳಲ್ಲಿ ಎದ್ದು ಬಿದ್ದು ಮುಗ್ಗರಿಸುತ್ತಾ ಏದುಸಿರು ಬಿಡುತ್ತಾ ಸಾಗುತ್ತಿದೆ. ಅದೇ ಸಮಯಕ್ಕೆ ಪಕ್ಕದಲ್ಲಿದ್ದ ಯುವಕ,

"ನೋಡಿ ಸಾರ್, ಇದೇ ಸ್ಥಳದಲ್ಲಿ ನಿನ್ನೆಯಲ್ಲಾ ಮೊನ್ನೆ ಸಾಯಂಕಾಲ ನಮ್ಮೂರಿನವರು ಜೀಪಿನಲ್ಲಿ ಬರುತ್ತಿದ್ದಾಗ ಯಾರೋ ಒಂದಿಷ್ಟು ಜನ ಅಡ್ಡಗಟ್ಟಿ ಚೆನ್ನಾಗಿ ಥಳಿಸಿ ಎಲ್ಲಾವನ್ನೂ ದೋಚಿಕೊಂಡರಂತೆ" ಎಂದ.

"ಯಾರು? ಕಳ್ಳರೇ?" ಪ್ರಶ್ನಿಸಿದೆ.

"ಗೊತ್ತಿಲ್ಲ! ಒಂದೇ ದಿನ ಮೂರು ಗಾಡಿಗಳನ್ನು ದೋಚಿದ್ದಾರೆ. ನಮ್ಮೂರಿನ ಒಬ್ಬರು, ಅವರಿಗೆ ಬಹಳ ಧೈರ್ಯ, ಏನೂ ಕೊಡುವುದಿಲ್ಲಾ ಎಂದರಂತೆ. ಅಂದತಕ್ಷಣ, ಚಾಕು ತೆಗೆದು ಹೊಟ್ಟೆ ಸೀಳಿಬಿಟ್ಟನಂತೆ"

"ಆಮೇಲೆ...?"

"ಆಮೇಲೆ ಏನಾಯಿತೋ ಗೊತ್ತಿಲ್ಲ. ಮೊಖಿಕ್ ಚುಂಗ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರಂತೆ" ಎಂದ.

ದೀಖು ನದಿಯ ದಿಬ್ಬಗಳಲ್ಲಿ ನನ್ನ ಮನಸ್ಸಿನೊಳಗಿನ ನಾಯಿಮರಿ ಒಳಗೊಳಗೆ ವಿಲವಿಲನೆ ಕುಯ್‌ಗುಟ್ಟಿತು.

ಒಂದು ತಿಂಗಳ ಹಿಂದೆಯೇ ಲೋಂಗ್ ಲೆಂಗ್ ಜೆಬಿ ಮತ್ತು ಎ.ಡಿ.ಸಿಗೆ ವಸತಿಯ ಬಗ್ಗೆ ಪತ್ರ ಬರೆದಿದ್ದರೂ ಉತ್ತರ ಮಾತ್ರ ಬರಲಿಲ್ಲ. ಜೀಪು ಚಲಿಸುತ್ತಲೇ ಇದೆ. ಆದರೆ ಲೋಂಗ್ ಲೆಂಗ್ ಮಾತ್ರ ಇನ್ನಷ್ಟು ಲಾಂಗ್ ಆಗುತ್ತಲೇ ಹೋಗುತ್ತಿದೆ. ಈಗ ಪೂರ್ತಿ ಕತ್ತಲಾಗಿ ಹೆಡ್‌ಲೈಟ್ ಹೊತ್ತಿಸಿಕೊಂಡ ಜೀಪು, ದೀಖು ಪ್ರಪಾತದಿಂದ ಮೇಲಕ್ಕೆ ಏರುತ್ತಾ, ಏರುತ್ತಾ ಮುಂದೆ ಮುಂದೆ ಹೋಗಿ, ಒಂದೆರಡು ತಿರುವುಗಳಾದ ಮೇಲೆ ನೇರವಾಗಿ ಸಾಗಿ, ಸಣ್ಣಪುಟ್ಟ ದಿಣ್ಣೆಗಳನ್ನು ದಾಟಿ ಒಂದು ಮನೆಯ ಮುಂದೆ ನಿಂತುಕೊಂಡಿತು. ಅಷ್ಟರಲ್ಲಿ ಮಳೆಯ ಹನಿಗಳು ಇನ್ನಷ್ಟು ರಭಸವಾಗಿ ಜೀಪಿನಿಂದ ಇಳಿಯಲೂ ಆಗಲಿಲ್ಲ.

ಚಾಲಕ "ಇದೇ ವಿಶ್ರಾಂತಿ ಗೃಹ" ಎಂದು ಹೇಳಿದ.

"ಇಳಿದು ಯಾರಾದರೂ ಇದ್ದಾರೇನೋ ನೋಡು" ಎಂದೆ. ಅಷ್ಟರಲ್ಲಿ ವಿದ್ಯುತ್ ಹೋಗಿ ಪೂರ್ತಿ ಕತ್ತಲಾದ್ದರಿಂದ, ಹೆಡ್‌ಲೈಟ್‌ಗಳನ್ನು ಹಾಗೆ ಹೊತ್ತಿಸಿಟ್ಟು ಇಳಿದು ಹೋಗಿ ಬಾಗಿಲ ಹತ್ತಿರ ಸದ್ದು ...ಾಡಿದ. ಸುಮಾರು ಹೊತ್ತು ಯಾರೂ ಬರಲಿಲ್ಲ. ಕೊನೆಗೆ ಯಾರೋ ಒಬ್ಬರು ಕತ್ತಲಲ್ಲಿ ಬಾಗಿಲನ್ನು ಸಣ್ಣದಾಗಿ ತೆರೆದು ಏನೋ ಹೇಳಿ ಮತ್ತೆ ಬಾಗಿಲು ಮುಚ್ಚಿಕೊಂಡರು. ಹತ್ತಿರ ಬಂದ ಚಾಲಕ,

"ಸಾಬ್ ವಿಶ್ರಾಂತಿ ಗೃಹ ಖಾಲಿ ಇಲ್ಲವಂತೆ, ಎ.ಡಿ.ಸಿ ಸಾಬ್ ಟುಯಿನ್ ಸಾಂಗ್‌ಗೆ ಹೋಗಿದ್ದಾರಂತೆ ಅವರ ಫ್ಯಾಮಿಲಿಮಾತ್ರ ಇವೆ" ಎಂದ. ಯಾಕೋ ಗ್ರಹಚಾರ ಸರಿಯಿಲ್ಲ ಎನ್ನಿಸಿತು. ಬಹುಶಃ ಎ.ಡಿ.ಸಿ ತನ್ನ ಠಿಕಾಣೆ ಇಲ್ಲೇ ಊರಿರಬಹುದು ಅಥವಾ ಇನ್ನೇನಾದರೂ ಮಾಮ್ಲಾ ಇರಬಹುದು. ಕತ್ತಲು ಬೇರೆ. ಏನು ಮಾಡಬೇಕೋ ಒಂದು ಅರ್ಥವಾಗಲಿಲ್ಲ.

ನನ್ನ ತಲೆಯ ಎಡ ಗೋಳದಲ್ಲಿ ವಿದ್ಯುತ್ ಫ್ಯೂಸ್ ಹೋಗಿ ಕೆಲವು ಕ್ಷಣಗಳು ಕತ್ತಲಾವರಿಸಿದಂತಾಯಿತು, ಸಾವರಿಸಿಕೊಂಡು.

"ತೋಂಗ್ ಪಾಂಗ್ ನಿಮ್ಮ ಬಸ್ತಿ ಎಷ್ಟು ದೂರ ಆಗುತ್ತದೆ?" ಕೇಳಿದೆ.

"ಅರೇ ಸಾಬ್. ಬಹಳ ದೂರ ಆಗುತ್ತದೆ. ಕತ್ತಲು. ಮಳೆ ಬೇರೆ" ಎಂದ.

ಪಕ್ಕದಲ್ಲಿದ್ದ ಯುವಕ,

"ನಮ್ಮಣ್ಣನ ಮನೆ ಇದೇ ಬಸ್ತಿಯಲ್ಲಿದೆ, ಹೋಗೋಣ ಬನ್ನಿ" ಎಂದ. ಜೆಬಿಯ ಜೊತೆ ತಪ್ಪಿಹೋದ ನಾನು ಒಮ್ಮೆಲೆ,

"ಆಯಿತು" ಎಂದೆ. ಜೀಪು ನಲ್ವಾರು ನಿಮಿಷಗಳಲ್ಲಿ ಒಂದು ಮನೆಯ ಮುಂದೆ

ನಿಂತಿತು. ಆ ಯುವಕ ಮನಗೆ ಕತ್ತಲಲ್ಲಿ ದಾರಿ ತೋರಿಸುತ್ತಾ ನಿಧಾನವಾಗಿ ನೆಲವನ್ನೇ ಕತ್ತರಿಸಿ ಮಾಡಿದ್ದ ಮೆಟ್ಟಿಲುಗಳ ಮುಖಾಂತರ ಇನ್ನಷ್ಟು ಎತ್ತರಕ್ಕೆ ಕರೆದೊಯ್ದು. ಅಷ್ಟೇನು ವಿಶಾಲವಲ್ಲದ ಹಜಾರ, ಅದನ್ನು ದಾಟಿದ ಮೇಲೆ ಅಡಿಗೆಮನೆ ಒಳಕ್ಕೆ ಆಹ್ವಾನಿಸಿದ.

ಒಂದು ಮಗುವಿನ ಜೊತೆ ಒಲೆಯ ಮುಂದೆ ಕುಳಿತಿದ್ದ ಹೆಂಗಸು ನಾನು ಒಳಕ್ಕೆ ಹೋಗಿದ್ದೆ ಬಟ್ಟೆಗಳನ್ನು ಸರಿಪಡಿಸಿಕೊಂಡು ಮುಗುಳುನಗುವಿನ ಜೊತೆಗೆ ಬಿದಿರು ಮಣೆ ತೋರಿಸಿ "ಬೈಬಿ" ಎಂದಳು. ಕುಳಿತುಕೊಂಡೆ. ಸಾಕಷ್ಟು ಸಂಕೋಚ ತುಂಬಿಕೊಂಡಿರುವ, ಬೇಗನೆ ಗೆಳೆತನ ಮಾಡಿಕೊಳ್ಳುವಂಥಹ ಸರಳವಾದ ಮುಖ. ಮೈಪೂರ್ತಿ ನೆನೆಯದಿದ್ದರೂ ಸಾಕಷ್ಟು ನೆನೆದು ನಡುಕ ಶುರುವಾಗಿದ್ದ ನನಗೆ ಅಡಿಗೆ ಮನೆ ಹಿತವಾಗಿ ತೋರಿತು. ಅಷ್ಟರಲ್ಲಿ ಆ ಯುವಕ ಇನ್ನೊಬ್ಬರ ಜೊತೆ ಒಳಕ್ಕೆ ಬಂದು "ಇವರೇ ನಮ್ಮಣ್ಣ" ಎಂದು ಪರಿಚಯಿಸಿದ. ಕರಚಾಲನೆ ಮಾಡಿದೆ. ಪಕ್ಕದಲ್ಲೇ ಕುಳಿತುಕೊಂಡು ವಿಷಯವನ್ನು ಟಿಪ್ಪಣಿಯಾಗಿ ಸಂಗ್ರಹಿಸಿಕೊಂಡರು.

ಅಷ್ಟರಲ್ಲಿ ತೊಂಗ್‌ಪಾಂಗ್ ಮತ್ತು ಶರ್ಮ ಟ್ರೇಲರ್ ಬಿಟ್ಟಿ, ಬೇಕಾಗಿದ್ದ ಸಾಮಾನುಗಳನ್ನು ಒಳಕ್ಕೆ ತಂದಿದ್ದರು. ಸ್ವಲ್ಪ ಸಮಯದ ನಂತರ ಆ ಯುವಕ ಮತ್ತೊಮ್ಮೆ ಒಳಕ್ಕೆ ಬಂದು ನನ್ನನ್ನ ಇನ್ನೊಂದು ಕೋಣೆಯೊಳಕ್ಕೆ ಕರೆದೊಯ್ದು ಅದೊಂದು ಸಣ್ಣ ಕೋಣೆ. ಕೋಣೆ ತುಂಬಾ ಸಾಮಾನುಗಳು. ಗೋಡೆಗಳ ಮೇಲೆ ಹಲವು ಫೋಟೋಗಳ ಮಧ್ಯೆ ಎದ್ದು ಕಾಣುವ ಏಸು ಕ್ರಿಸ್ತನ ಫೋಟೋ. ಅದಕ್ಕೆ ಬಣ್ಣ ಬಣ್ಣಗಳ ಬೆಳಕಿನ ಹಾರ.

ದಣಿದ ದೇಹಕ್ಕೆ ವಿಶ್ರಾಂತಿ ನೀಡಲೆಂಬಂತೆ ಚರ್ಮಗಳನ್ನು ಚೆಲ್ಲಿ ಮಲಗಿರುವ ಹಾಸಿಗೆ. ಹಾಸಿಗೆ ಮೇಲೆ ಒಂದು ಕಂಬಳಿ. ಈ ಹಾಸಿಗೆ ನನಗಾಗಿಯೇ ಇರಬೇಕು ಎಂದು ಕೊಳ್ಳುವಷ್ಟರಲ್ಲಿ,

"ನೀವಿಲ್ಲಿ ವಿಶ್ರಾಂತಿ ತೆಗೆದುಕೊಳ್ಳಿ, ಅಡಿಗೆ ತಯಾರಾದ ಮೇಲೆ ಕರೆಯುತ್ತೇನೆ" ಎಂದ ಯುವಕ ನನ್ನ ಪ್ರತಿಕ್ರಿಯೆಗೂ ಎದುರು ನೋಡದೆ ಬಾಗಿಲಲ್ಲಿದ್ದ ಪರದೆ ಇಳಿ ಬಿಟ್ಟು ಹೊರಗಡೆಗೆ ನಡೆದೆ ಬಿಟ್ಟ.

ಆ ಮನೆಯಲ್ಲಿ ಬಹುಶಃ ಇನ್ನೊಂದು ಕೋಣೆ ಮತ್ತು ಹಾಲಿರಬಹುದು. ಈ ಕೋಣೆಯಲ್ಲಿ ಯಾರು ಮಲಗುತ್ತಿದ್ದರೋ ನನಗೆ ಬಿಟ್ಟುಕೊಟ್ಟಿದ್ದಾರೆ. ಈ ಘಳಿಗೆಗೆ ಕೇವಲ ಕೆಲವೇ ನಿಮಿಷದ ಹಿಂದೆ ನನ್ನ ಠಿಕಾಣಿ ಸಮಯದ ಲೋಲಾಕಿನಂತೆ ಅಲ್ಲಾಡಿ ಬಿಟ್ಟಿತ್ತು. ಆದರೆ ಈಗ ಅವರ ಆತಿಥ್ಯಕ್ಕೆ ಅಭಾರಿಯಾಗಿಬಿಟ್ಟಿದ್ದೆ. ಬಟ್ಟೆ ಬದಲಿಸಿ ನನ್ನ ರಜಾಯಿಯ

ಒಳಗ ಸೇರಿಕೊಂಡೆ. ಮೈಯೆಲ್ಲಾ ಸಡಿಲಗೊಂಡು ಬೆಚ್ಚಗಾಗಿ ನಿದ್ದೆಯ ದಡದಲ್ಲಿ ಈಜಾಡುತ್ತಿದ್ದಂತೆ. ಬಾಗಿಲು ತಟ್ಟಿದ ತೋಂಗ್‌ಪಾಂಗ್.

"ಖಾನಾ ಖಾನೆ ಕಾ ಆಯಿಬಿನ ಸಾಬ್" ಎಂದ. ಹಸಿವಿನಿಂದ ತತ್ತರಿಸಿ ಹೋಗಿದ್ದ ನಾನು ಅಡಿಗೆ ಕೋಣೆಯೊಳಕ್ಕೆ ಹೋದೆ.

ಒಲೆಯ ಸುತ್ತ ಸಣ್ಣ ಸಣ್ಣ ಬಿದಿರು ಮಣೆಗಳ ಮೇಲೆ ಎಲ್ಲರೂ ಕುಳಿತಿದ್ದಾರೆ ನಾನೂ ಒಂದರ ಮೇಲೆ ಕುಳಿತುಕೊಂಡೆ. ಬೆನ್ನು ಮೇಲೆ ಪಾತ್ರೆಯೊಂದನ್ನು ಹೊತ್ತಿರುವ ಒಲೆ, ಕೆಂಪು ಕೆಂಡಗಳನ್ನು ತುಂಬಿಕೊಂಡು ಒಳಗೊಳಗೆ ಧಗಿಸುತ್ತಿದೆ. ಮುಂದೆ ಕುಳಿತಿರುವ ಹೆಂಗಸು ತಟ್ಟೆಗಳಿಗೆ ಊಟ ಬಡಿಸುತ್ತಿದ್ದಂತೆ ಮೊದಲ ತಟ್ಟೆಯನ್ನು ತೋಂಗ್ ಪಾಂಗ್ ನನಗೆ ಎತ್ತಿ ಕೊಟ್ಟ. ನಾನು ಪಕ್ಕದಲ್ಲಿ ಕುಳಿತಿರುವ ಮನೆಯ ಒಡೆಯನಿಗೆ ಕೊಡಲು ಹೋದೆ.

"ಇಲ್ಲ ನೀವು ತೆಗೆದುಕೊಳ್ಳಿ ನಮ್ಮ ಊಟ ನಿಮಗೆ ಇಷ್ಟವಾಗುತ್ತದೋ ಇಲ್ಲವೋ ಗೊತ್ತಿಲ್ಲ" ಸಂದೇಹ ವ್ಯಕ್ತ ಪಡಿಸಿದ.

"ಹಾಗೇನು ಇಲ್ಲ, ನಾನು ಎಲ್ಲವನ್ನೂ ತಿನ್ನುತ್ತೇನೆ" ಎಂದೆ. ತಟ್ಟೆಯಲ್ಲಿ ನಾಗಾ ಅಕ್ಕಿಯ ಕೆಂಪಾದ ಅನ್ನ ಮತ್ತು ಇಲ್ಲೈ ಪತ್ತದ (ಸಾಸುವೆ ಜಾತಿಯ ಒಂದು ಸೊಪ್ಪು) ಅರೆ ಬೆಂದ ಹಸಿರು ಪಲ್ಯ. ಗಿಣ್ಣುಗಳಲ್ಲಿ ನೀಲಿ ಬಣ್ಣದ (ಒಂದು ರೀತಿಯ ಸೋಯಾ ಬೀಜದ) ಸಾಂಬಾರು ಮತ್ತು ಗೊಜ್ಜು. ಗೊಜ್ಜು ಹೆಚ್ಚು ಕಡಿಮೆ ಕೋಲಾರ ಜಿಲ್ಲೆಯಲ್ಲಿ ರಾಗಿ ಮುದ್ದೆಗೆ ಮಾಡುವ ಗೊಜ್ಜಿನಂತಿದ್ದು ಜೊತೆಯಲ್ಲಿ ಒಣ ಮೀನುಗಳು ಇವೆ.

ದಕ್ಷಿಣ ಭಾರತದ ಹವಾಗುಣ ತಿಂಡಿ ತಿನಿಸುಗಳ ಬಗ್ಗೆ ಮಾತನಾಡುತ್ತ ಊಟ ಮಾಡ ತೊಡಗಿದೆವು. ಅನ್ನ ಒಳ್ಳೆಯ ರುಚಿ ಇದ್ದು, ಸೊಪ್ಪು ಮಾತ್ರ ಹಸಿ ಹಸಿಯಾಗಿ ಅರೆಬೆಂದಿದ್ದು, ಕಹಿ ಮತ್ತು ಸಿಹಿಯ ಸಂಗಮವಾಗಿತ್ತು. ಅದರ ರುಚಿ ಮೊದಲೇ ನೋಡಿದ್ದ ನನಗೆ ತಿನ್ನಲು ಕಷ್ಟವಾಗಲಿಲ್ಲ. ಆದರೆ ನೀಲಿ ಸಾಂಬಾರನ್ನು ತಿನ್ನಲು ಆಗಲೇ ಇಲ್ಲ. ಅವರು ಏನೆಂದು ಕೊಳ್ಳುವರೋ ಎಂಬ ಭಯದಿಂದ ಒಂದೊಂದೇ ಸೋಯಾ ಕಾಳುಗಳನ್ನು ತಿಂದೆ. ಅದರ ಬಣ್ಣವೇ ಗಾಬರಿ ಹುಟ್ಟಿಸುತ್ತಿತ್ತು. ಇನ್ನು ಗೊಜ್ಜು, ಗೊಜ್ಜೇನೊ ಚೆನ್ನಾಗಿಯೇ ಇತ್ತು. ಆದರೆ ಒಣ ಮೀನುಗಳ ಜೊತೆ ರುಚಿಸಲಿಲ್ಲ. ಒಣ ಮೀನುಗಳನ್ನು ನಿಧಾನವಾಗಿ ಬೇರ್ಪಡಿಸಿ ಅನ್ನದ ಜೊತೆಗೆ ಗೊಜ್ಜನ್ನು ಕಲಿಸಿಕೊಂಡೆ.

ಊಟ ಮುಗಿಸಿದ ನಂತರ ತೋಂಗ್ ಪಾಂಗ್ ಅಗಲವಾದ ಪಾತ್ರೆಯಲ್ಲಿರಿಸಿದ್ದ ನೀರಿನಲ್ಲಿ ತನ್ನ ತಟ್ಟೆಯನ್ನು ಅದ್ದಿ ತೊಳೆಯ ತೊಡಗಿದ. ನಾನು ಅದೇ ನೀರಿನಲ್ಲಿ ತೊಳೆಯ

ಬೇಕೋ ಅಥವಾ ಅವರೇ ತೊಳೆದುಕೊಳ್ಳುವರೋ ಒಂದೆರಡು ಕ್ಷಣಗಳು ಗೊಂದಲಗೊಂಡೆ. ಅಷ್ಟರಲ್ಲಿ ನನ್ನ ತಟ್ಟೆ ತೆಗೆದುಕೊಂಡ ತೋಗ್‌ಪಾಂಗ್ ಅದೇ ಪಾತ್ರೆಯಲ್ಲಿಟ್ಟು ತೊಳೆದೇ ಬಿಟ್ಟ. ಒಂದೆರಡು ಕ್ಷಣ ತಬ್ಬಿಬ್ಬಾದ ನಾನು ಯಾವ ರೀತಿಯಲ್ಲಿ ಪ್ರತಿಕ್ರಿಯೆ ವ್ಯಕ್ತಪಡಿಸಬೇಕೋ ಗೊತ್ತಾಗಲಿಲ್ಲ. ಅನಂತರ ತೋಂಗ್ ಪಾಂಗ್ ಹಿಂದೆಯೇ ಹೊರಕ್ಕೆ ನಡೆದು ಹೋಗಿ ಕೈ ತೊಳೆದುಕೊಂಡೆ. ಆಗಲೇ ಸುಮಾರು ಹತ್ತು ಗಂಟೆ ರಾತ್ರಿಯಾಗಿದ್ದು ಎಲ್ಲರೂ ಮಲಗಿಕೊಳ್ಳಲು ತಯಾರಾದರು. ಸಾಮಾನ್ಯವಾಗಿ ನನಗೆ ಹೊಸ ಜಾಗದಲ್ಲಿ ಮೊದಲ ದಿನ ರಾತ್ರಿ ನಿದ್ದೆಯೆ ಬರುವುದಿಲ್ಲ. ಆದರೆ ಇಲ್ಲಿ ಮಲಗಿದ ತಕ್ಷಣವೆ ನಿದ್ದೆಗೆ ಜಾರಿಕೊಂಡಿದ್ದೆ.

ಬೆಳಿಗ್ಗೆ ಜ್ಞಾಪಕ ಬಂದಿದ್ದೇ ಎದ್ದು ನೋಡುತ್ತೇನೆ. ಎಲ್ಲವೂ ಬೆಳ್ಳಂ ಬೆಳಕಾಗಿ ಬೆಟ್ಟದ ತುದಿಯಲ್ಲಿದ್ದೇನೆ. ಬೇಗನೆ ಮುಖ ತೊಳೆದುಕೊಂಡು ತಯಾರಾದೆ. ರಾತ್ರಿ ಮಾತನಾಡಿಕೊಂಡ ಹಾಗೆ ಎ.ಡಿ.ಸಿಯ ಕಛೇರಿಗೆ ತೆರಳಿದೆವು. ಎ.ಡಿ.ಸಿ ಇನ್ನೂ ಬಂದಿಲ್ಲದ ಕಾರಣ ಅವರಿಗಾಗಿ ಒಂದು ಕೋಣೆಯಲ್ಲಿ ಕಾಯತೊಡಗಿದೆ.

ಅದೊಂದು ಮುರುಕಲು ಬಿದ್ದ ಕೋಣೆಗಳ ಕಛೇರಿಯಾಗಿತ್ತು. ಕೈ ಕಾಲುಗಳನ್ನು ಮುರಿದುಕೊಂಡ ಕುರ್ಚಿಮೇಜುಗಳು, ಅಲ್ಲಲ್ಲಿ ಚೆಲ್ಲಾಡಿರುವ ವಸ್ತುಗಳು, ಉಗಿದು ಉಗಿದು ಕೆಂಪಾಗಿರುವ ಮೂಲೆ ಗೋಡೆಗಳು ಕಛೇರಿಯ ವ್ಯವಸ್ಥೆಯನ್ನು ಎತ್ತಿ ತೋರಿಸುತ್ತಿತ್ತು.

ಒಬ್ಬ ಬಿಹಾರಿ ಗುಮಾಸ್ತ ನನ್ನ ಆಗಮನದ ಬಗ್ಗೆ ವಿಚಾರಿಸಿಕೊಂಡು ಸ್ವಲ್ಪ ಹೊತ್ತು ಕಾಯುವಂತೆ ತಿಳಿಸಿದ. ಒಂದು ಮೂಲೆಯಲ್ಲಿ ಮಲೆಯಾಳಿ ಯುವತಿಯೊಬ್ಬಳು ಆಗಾಗ ನನ್ನ ಕಡೆಗೆ ನೋಡುತ್ತಾ ಟೈಪ್ ಮಾಡುತ್ತಿದ್ದಾಳೆ. ಈ ವಿಷಯ ಮೊದಲೆ ತಿಳಿದಿದ್ದರೆ ಸ್ವಲ್ಪ ಚೆನ್ನಾಗಿಯೇ ಡ್ರೆಸ್ ಮಾಡಿಕೊಂಡು ಬರಬಹುದಿತ್ತಲ್ಲ ಎಂದುಕೊಂಡೆ.

ಈ ಶಿಬಿರಗಳಲ್ಲಿ ಯಾರನ್ನಾದರೂ ಸರಿ, ತೊಟ್ಟರೆ ಸಾಕು ಪೆವಿಕಾಲ್‌ನಂತೆ ಮೆತ್ತಿಕೊಳ್ಳುತ್ತಾರೆ ಎನ್ನುವುದು ಸುಳ್ಳಲ್ಲ. ಅದೂ ಹೇಳಿ ಕೇಳಿ ಮಲೆಯಾಳಿ ನನಗೆ ಮದುವೆ ಆಗದೆ ಇದ್ದಿದ್ದರೆ ಚೆನ್ನಾಗಿತ್ತು ಎಂದುಕೊಂಡೆ. ಅದೆಲ್ಲ ಸುಳ್ಳು, ಮದುವೆ ಆಗಿದ್ದರೂ ಅಷ್ಟೇ ಆಗದಿದ್ದರೂ ಅಷ್ಟೇ, ಅದೊಂದು ಸ್ಕಿಲ್ ಎಲ್ಲರಿಗೂ ಬರುವುದಿಲ್ಲ. "ಕುಣಿಯಲಾರದ ಬಡ್ಡಿಗೆ ನೆಲಡೊಂಕೆಂದು" ಸುಮ್ಮನಾದೆ.

ಜೀಪೊಂದು ಕಛೇರಿಯ ಮುಂದೆ ಬಂದು ನಿಂತ ತಕ್ಷಣ, ಒಬ್ಬ ಯುವಕ ಇಳಿದು ಮುಂದೆಯೇ ಇದ್ದ ಕೋಣೆಯೊಳಕ್ಕೆ ಹೋದ. ಆ ಯುವಕನ ಹಿಂದೆಯೇ ಮೂವರು ಹಳ್ಳಿಗರು ಒಳಕ್ಕೆ ಹೋದರು. ಬಿಹಾರಿ ಗುಮಾಸ್ತ ನನ್ನ ಕಡೆಗೆ ನೋಡಿ "ಬಂದಿದ್ದಾರೆ ನೋಡಿ" ಎಂದ.

ಕೋಣೆಯ ಒಳಕ್ಕೆ ಹೋಗಿ ವ್ಹಿಸಿಟಿಂಗ್ ಕಾರ್ಡ್ ಕೊಟ್ಟೆ. ಕೈ ಕುಲುಕಿ ಎದುರಿಗಿದ್ದ ಕುರ್ಚಿ ತೋರಿಸಿದ, ಕುಳಿತುಕೊಂಡೆ. ವ್ಹಿಸಿಟಿಂಗ್ ಕಾರ್ಡ್ ನೋಡಿ ನನ್ನ ಹೆಸರನ್ನು ವಿಚಿತ್ರವಾಗಿ ಓದಿದ. ಪಕ್ಕದಲ್ಲಿದ್ದ ಹಳ್ಳಿಗರೂ ತಿರುವಿಸಿ ತಿರುವಿಸಿ ನೋಡಿದರು. ಅನಂತರ ಸುಮಾರು ಹೊತ್ತು ತಮ್ಮ ಸ್ಥಳೀಯ ಬುಡಕಟ್ಟು ಭಾಷೆ ಫ್ರೋಮ್‌ನಲ್ಲಿ ಏನೇನೋ ಮಾತನಾಡಿಕೊಳ್ಳುತ್ತಾ ನನ್ನ ಇರುವಿಕೆಯನ್ನೇ ಮರೆತೇಬಿಟ್ಟರು.

ನಾಗಾಗಳಲ್ಲಿಯೇ ಅತ್ಯಂತ ಹಿಂದುಳಿದ "ಫೋಮ್" ಬುಡಕಟ್ಟು ಜನರಿರುವ ಬಸ್ತಿಯೇ ಲೋಂಗ್‌ಲಿಂಗ್ ಪ್ರದೇಶ. ಎಷ್ಟು ಹೊತ್ತಾದರೂ ಯಾರೂ ಎದ್ದೇಳಲಿಲ್ಲ. ಬೇರೆ ವಿಧಿಯಿಲ್ಲದೆ ಅವರ ಮಾತಿನ ಮಧ್ಯೆ ವಸತಿಯ ಬಗ್ಗೆ ಹೇಳಿಕೊಂಡೆ.

"ನನಗೇನೇ ಮನೆಯಿಲ್ಲ, ನಾನೇ ಅತಿಥಿಗೃಹದಲ್ಲಿದ್ದೇನೆ. ನಾನೇನು ಮಾಡಲು ಸಾಧ್ಯವಿಲ್ಲ" ಎಂದುಬಿಟ್ಟ. ಈ ಫೋಮ್ ಅಧಿಕಾರಿಯ ಕೈಯಲ್ಲಿ ಏನೂ ಆಗುವುದಿಲ್ಲ ಎಂದುಕೊಂಡು ಪೋಲೀಸರಿಗಾಗಿ ಬಸ್ತಿಯ ಹೊರಗಡೆ ಕಟ್ಟುತ್ತಿರುವ (ಇನ್ನೂ ಪೂರ್ತಿ ಆಗದ) ಮನೆಗಳನ್ನು ನೋಡಿ ಬರಲು ತೋಂಗ್ ಪಾಂಗ್ ಮತ್ತು ಯುವಕನ ಜೊತೆಗೆ ಹೊರಟೆ. ಈ ಮನೆಗಳ ವಿಷಯ ರಾತ್ರಿಯೆ ತಿಳಿದುಕೊಂಡಿದ್ದೆ.

ಅರ್ಧ ಕಿ.ಮೀಟರ್ ದೂರದ ಉತ್ತರಕ್ಕೆ ಬೆಟ್ಟದ ಇಳಿಜಾರಿನಲ್ಲಿ ಮೂರೇ ಮೂರು ಮನೆಗಳಿದ್ದು ಕಿಟಕಿ ಬಾಗಿಲುಗಳೂ ಇರಲಿಲ್ಲ. ವಿದ್ಯುತ್ ಇಲ್ಲವೇ ಇಲ್ಲ.

ನೀರಿನ ಬಗ್ಗೆ ಕೇಳಿದಾಗ ಅಲ್ಲಿಂದ ಪಶ್ಚಿಮಕ್ಕೆ ಕೈ ತೋರಿಸಿದ ಯುವಕ, ಆ ತಪ್ಪಲುಗಳ ಮಧ್ಯದಲ್ಲಿ ಹರಿಯುವ ತೊರೆಯಿಂದ ಹೊತ್ತು ತರಬೇಕೆಂದ.

ಆ ಮನೆಗಳಿಗೆ ಸುಮಾರು ಇನ್ನೂರು ಮೀಟರುಗಳ ದೂರದಲ್ಲಿ ಗ್ರಾಮೀಣ ಬ್ಯಾಂಕೊಂದಿದ್ದು ರಾತ್ರಿ ಇಬ್ಬರು ಪೋಲೀಸರು ಕಾವಲಿರುವುದಾಗಿ ಮತ್ತು ಅಲ್ಲಿಂದ ಉತ್ತರ ಪಶ್ಚಿಮಕ್ಕೆ ಇನ್ನೊಂದು ಗುಡ್ಡದ ಮೇಲೆ ಸುಮಾರು ಅರ್ಧ ಕಿ.ಮೀಟರ್ ದೂರದಲ್ಲಿ ಅಸ್ಸಾಂ ರೈಫಲ್ಸ್‌ನ ಶಿಬಿರ ಇರುವುದಾಗಿ ತಿಳಿಯಿತು. ಇವೆರಡೂ ಇರುವುದರಿಂದ ಸ್ವಲ್ಪ ಧೈರ್ಯವಾಯಿತು.

ಅಸ್ಸಾಂ ರೈಫಲ್ಸ್‌ನ ಶಿಬಿರದಲ್ಲಿ ಉಳಿದುಕೊಳ್ಳುವ ಯೋಚನೆ ಬಂತು. ಅಲ್ಲಿ ಮನೆಗಳು ಖಾಲಿ ಇವೆಯೋ ಇಲ್ಲವೋ ಗೊತ್ತಿಲ್ಲ. ಅದೂ ಅಲ್ಲದೆ ಈ ಮಿಲಿಟರಿ ಜನರಿಂದ ದೂರವಿರುವುದೇ ಲೇಸು. ಈ ಮಿಲಿಟರಿಯವರಿಗೂ ಸ್ಥಳೀಯರಿಗೂ ಅಷ್ಟಕಷ್ಟೆ. ಮಿಲಿಟರಿಯವರ ಜೊತೆ ಸ್ನೇಹವಿರಿಸಿಕೊಂಡರೆ ನಾಗಾ ಉಗ್ರವಾದಿಗಳಿಗೆ ಸಂದೇಹ ಬರುತ್ತದೆ.

ಜೊತೆಗೆ ಇಲ್ಲೆಲ್ಲ ಉಗ್ರವಾದಿಗಳ ಚಟುವಟಿಕೆಗಳು ತೀವ್ರವಾಗಿ ನಡೆಯುತ್ತಿದ್ದು, ಮೊದಲ ದಿನವೇ ಅವರ ಬಗ್ಗೆ ಮಾತನಾಡುವುದು ಸರಿಯಲ್ಲ ಎಂದು ಸುಮ್ಮನಾದೆ. ಈ ಶಾಹ ಬೇರೆ ಒಳ್ಳೆ ಸಮಯದಲ್ಲಿ ಕೈಕೊಟ್ಟಿದ್ದರು.

ಮೂರು ಮನೆಗಳನ್ನೂ ನೋಡಿದೆ. ಎಲ್ಲವೂ ಒಂದೇ ರೀತಿಯಾಗಿವೆ. ಇಷ್ಟು ದೂರ ಬಂದು ಹಿಂದಕ್ಕೆ ಹೋಗುವುದಂತೂ ಸರಿಯಲ್ಲ. ಹೋಗುವುದಕ್ಕೆ ಒಳ್ಳೆಯ ನೆಪವಾದರೂ ಬೇಕಲ್ಲವೆ ? ನಮ್ಮ ಹಳ ತಲೆಮಾರಿನ ನಿರ್ದೇಶಕರು ಮಾತನಾಡಿದರೆ ನಿಮಗಾದರೂ ಜೀಪಿದೆ, ನಮ್ಮ ಕಾಲದಲ್ಲಿ ಬುಲಕ್ ಕಾರ್ಟ್‌ಗಳಲ್ಲಿ ಕೆಲಸ ಮಾಡಿದ್ದೇವೆ ಎನ್ನುತ್ತಿದ್ದರು.

ತೋಂಗ್‌ಪಾಂಗ್ ಜೊತೆಗೆ ಗಾಡಿಯಲ್ಲಿ ಹೋಗಿ ಜಿಬಿ ಹತ್ತಿರ ಅಪ್ಪಣೆ ಪಡೆದುಕೊಂಡು ಸಾಮಾನುಗಳ ಸಮೇತ ಮಧ್ಯದಲ್ಲಿದ್ದ ಮನೆಗೆ ಗೃಹಪ್ರವೇಶ ಮಾಡಿದೆವು. ತೋಂಗ್‌ಪಾಂಗ್ ಇಬ್ಬರು ಕೆಲಸದಾಳುಗಳ ಜೊತೆಗೆ ಮನೆಯನ್ನೆಲ್ಲಾ ಗುಡಿಸಿ ರೆಡಿಮಾಡಿಸಿದ. ದೂರದಲ್ಲಿ ಹರಿಯುವ ಝರಿಯಿಂದ ನೀರನ್ನು ತರಲಾಯಿತು. ಶರ್ಮ ಕೊನೆಯ ಕೋಣೆಯನ್ನು ಅಡಿಗೆ ಕೋಣೆಯನ್ನಾಗಿ ಪರಿವರ್ತಿಸುತ್ತಿದ್ದಂತೆ, ಮಧ್ಯದಲ್ಲಿದ್ದ ಕೋಣೆಯ ಕಿಟಿಕೆಗಳಿಗೆ ಏನೇನೂ ಅಡ್ಡವಿಟ್ಟು ಫೀಲ್ಡ್ ಮಂಚದ ಮೇಲೆ ಹಾಸಿಗೆ ಹಾಸಿ ರೆಡಿಮಾಡಿದೆ. ಮುಂದಿದ್ದ ಕೋಣೆಯನ್ನು ತೋಂಗ್‌ಪಾಂಗ್ ತನಗಾಗಿ ರೆಡಿಮಾಡಿಕೊಳ್ಳುತ್ತಿದ್ದ. ಈ ರಿಮೋಟ್ ಸ್ಥಳದಲ್ಲಿ ದಿನಗಳನ್ನು ಹೇಗೆ ಕಳೆಯಬೇಕೋ ಅರ್ಥವಾಗಲಿಲ್ಲ.

ಕೋಲಾರ ಚಿನ್ನದ ಗಣಿಗಳ ಪಕ್ಕದಲ್ಲಿರುವ ಬ್ಯಾಟರಾಯನ ಹಳ್ಳಿ ಎಲ್ಲಿ? ಈ ನಾಗಾಲ್ಯಾಂಡಿನ ಶಿಖರಗಳೆಲ್ಲಿ? ಎರಡು ಮೂರು ಸಾವಿರ ಹಣಬಿಟ್ಟರೆ ಬೇರೇನೂ ಬೆಲೆ ಬಾಳುವ ವಸ್ತುಗಳು ನನ್ನಲಿರಲಿಲ್ಲ. ಯಾರಾದರೂ ಬಂದು ಜೋರಾಗಿ ಏನೇ ಕೇಳಿದರೂ ಕೊಟ್ಟು ಬಿಡಬೇಕೆಂದು ಮೊದಲೇ ನಿಶ್ಚಯಿಸಿ ಬಿಟ್ಟಿದ್ದೆ.

ಕತ್ತಲು ಮೂಡುತ್ತಿದ್ದಂತೆ ಭಯ ಗಟ್ಟಿಗೊಳ್ಳುತ್ತ ಹೋಗುತ್ತಿದ್ದು, ಎಲ್ಲಿಯೂ ಬೆಳಕಿನ ಸೂಚನೆಯೇ ಇರಲಿಲ್ಲ. ಬೆಳಕು ಬರಬೇಕಾದರೆ ಆ ಶಿಖರಗಳ ಮೇಲೆ ನಕ್ಷತ್ರಗಳೆ ಮೂಡಿ ಬರಬೇಕು. ಹಾಸಿಗೆ ಸೇರಿ ಇದ್ದ ಒಂದರೆರಡು ಪುಸ್ತಕಗಳನ್ನು ಲ್ಯಾಂಟೀನ್ ಬೆಳಕಿನಲ್ಲಿ ಓದತೊಡಗಿದೆ. ಶರ್ಮಾ ಅಡಿಗೆ ಕೋಣೆಯಲ್ಲಿ ಹಿಂದಿ ಹಾಡುಗಳ ಜೊತೆಗೆ ತರಕಾರಿಯನ್ನು ಚಾಕುವಿನಲ್ಲಿ ಕಚಕಚನೆ ತುಂಡರಿಸುತ್ತ ಅಡಿಗೆ ತಯಾರಿಸುತ್ತಿದ್ದ. ತೋಂಗ್‌ಪಾಂಗ್ ಎಲ್ಲಿಯೋ ಹೊರಗಡೆ ಹೋಗಿದ್ದ. ಬೇರೇನನ್ನೂ ಮಾಡಲು ಸಾಧ್ಯವಾಗದೆ, ಸಮಯವನ್ನೂ ಸಾಯಿಸಲಾಗದೆ ಹಾಸಿಗೆಯಲ್ಲೇ ಬಿದ್ದುಕೊಂಡಿದ್ದೆ. ಶರ್ಮಾ ಊಟ ಬಡಿಸಿದ್ದ ತಿಂದು ಮಲಗಿಬಿಟ್ಟೆ.

ಸುಮಾರು ರಾತ್ರಿಯಾದ ಮೇಲೆ ತೋಂಗ್‌ಪಾಂಗ್ ಯಾರೋ ಜೊತೆಯಲ್ಲಿ

ವಾಪಸ್ಸು ಬಂದು ರಾತ್ರಿಯೆಲ್ಲ ಮಾತನಾಡುತ್ತಲೇ ಇದ್ದ. ಬೆಳಗ್ಗೆ ಜ್ಞಾಪಕ ಬಂದಾಗ ಆ ರಾತ್ರಿ ಕಳೆದುಹೋಗಿತ್ತು.

ಹತ್ತಿರವೇ ಇದ್ದ ಇನ್ನೊಂದು ಸಮತಟ್ಟಾದ ಶಿಖರದ ಮೇಲಿದ್ದ ಅಸ್ಸಾಂ ರೈಫಲ್ಸ್‌ನ ಶಿಬಿರಕ್ಕೆ ಹೋಗುವ ಮನಸ್ಸಾಗಿ ಜೀಪನ್ನು ಮುಖ್ಯದ್ವಾರದಲ್ಲಿ ನಿಲ್ಲಿಸಿ ಕಾವಲು ಗಾರನಿಗೆ ನನ್ನಲ್ಲಿದ್ದ ವ್ಹಿಸಿಟಿಂಗ್ ಚೀಟಿಯನ್ನು ಕೊಟ್ಟೆ. ಕಾವಲುಗಾರ ಒಳಕ್ಕೆ ಹೋಗಿ ಬಂದ ನಂತರ ಒಳಕ್ಕೆ ಆಹ್ವಾನಿಸಿದ. ಗಾಡಿಯನ್ನು ಅಲ್ಲೇ ಬಿಟ್ಟು ಒಳಕ್ಕೆ ಹೋದೆ. ಸುತ್ತಿಬಳಸಿ ಒಂದು ಬ್ಯಾರಾಕ್ಸ್ ಹತ್ತಿರಕ್ಕೆ ಕರೆದುಕೊಂಡು ಹೋಗಿ ಕಾವಲುಗಾರ ಪಕ್ಕಕ್ಕೆ ನಿಂತು ಒಳಕ್ಕೆ ಹೋಗುವಂತೆ ಸೂಚಿಸಿದ.

ಒಬ್ಬ ಒಳ್ಳೆ ಫಿಜಿಕ್ ಇರುವ ನನ್ನಷ್ಟೇ ವಯಸ್ಸಿನ ಎತ್ತರದ ಕಪ್ಪು ಮುಖದ ಅಧಿಕಾರಿ ಎದ್ದು ನಿಂತು ಕೈಕುಲುಕಿ ಬಹಳ ಲವಲವಿಕೆಯಿಂದ "ನಾನು ಭಟ್ಟಾಚಾರ್ಯ" ಎಂದು ಹೇಳಿ ಎದುರಿಗೆ ಕುಳಿತುಕೊಳ್ಳಲು ಆಹ್ವಾನಿಸಿದ. ಅದೊಂದು ಸಣ್ಣಕೋಣೆ. ಎಲ್ಲವೂ ಮಿಲಿಟರಿ ಅಚ್ಚುಕಟ್ಟು. ಬಹಳ ಲವಲವಿಕೆಯಿಂದ ಬಹಳ ದಿನಗಳಾದ ಮೇಲೆ ಸಂಧಿಸಿದ ಹಳೆಯ ಗಳೆಯರಂತೆ ಮಾತನಾಡಿಕೊಳ್ಳುತ್ತಿದ್ದೇವೆ. ಮಾತಿನ ಜೊತೆ ನನ್ನ ಕೆಲಸದ ಬಗ್ಗೆ ತಿಳಿದುಕೊಂಡ ಭಟ್ಟಾಚಾರ್ಯ, "Any how, you are the realy deserved people for this country, working in such a remote areas without any security and fecilities.. I don't have any problem, you see..." ಎಂದವನೇ ತನ್ನ ಪಿಸ್ತೂಲನ್ನ ಎತ್ತಿ ತೋರಿಸಿದ. ಈ ಮಾತುಗಳನ್ನು ಯಾಕಾದರೂ ನನಗೆ ಹೇಳುತ್ತಿರುವನೋ. ಬಹುಷಃ ನನ್ನ ಬಗ್ಗೆ ಕನಿಕರ ಮೂಡಿ ಆ ರೀತಿಯಾಗಿ ಹೇಳಿರಬಹುದು, ಎಂದುಕೊಂಡೆ.

ಎದುರಿಗಿರುವ ಗೋಡೆಯ ಮೇಲೆ ನೇತಾಕಿದ್ದು ಒಬ್ಬ ಜವಾನನ ಭಾವಚಿತ್ರದ ಕೆಳಗೆ ಈ ರೀತಿಯಾಗಿ ಬರೆದಿತ್ತು.

"ನರಬಹದೂರ್ - 22 ವರ್ಷ, ಇತ್ತೀಚಿನ ಅಸ್ಸಾಂ ರೈಫಲ್ಸ್ ಮತ್ತು ಭಯೋತ್ಪಾದಕರ ನಡುವೆ ನಡೆದ ಹೋರಾಟದಲ್ಲಿ ವೀರ ಸಾವನ್ನಪ್ಪಿದ ವೀರಯೋಧ"

"ಈ ಹೋರಾಟ ಎಲ್ಲಿ ನಡೆದಿದ್ದು ?" ಕೇಳಿದೆ.

"ಇಲ್ಲೆ ಈ ಬಸ್ತಿಯಲ್ಲೇ ಹದಿನೈದು ದಿನಗಳಾಯಿತಷ್ಟೇ ಎನ್.ಎಸ್.ಸಿ.ಎನ್, (ನಾಗಾ ಉಗ್ರಗಾಮಿಗಳು) ನವರಿಗೂ ಈ ಹಳ್ಳಿಯವರಿಗೂ ಸಂಬಂಧವಿದೆ. ನದಿಯ ಆ ಕಡೆಗಿರುವ ಬರ್ಮಾಗಡಿಯಲ್ಲಿ ಅವರ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿವೆ. ಆ

ರಾತ್ರಿ ಇಬ್ಬರು ಎನ್‌ಎನ್‌ಸಿಎನ್‌ಗಳು ಒಂದು ಮನೆಯಲ್ಲಿ ಇರುವುದಾಗಿ ತಿಳಿಯಿತು. ಮನೆಯನ್ನು ಸುತ್ತುವರೆದು ಹೊರಕ್ಕೆ ಬರುವಂತೆ ಆಜ್ಞೆ ಮಾಡಿದೆವು, ಬರಲಿಲ್ಲ. ಬಹದೂರ್ ಕಿಟಕಿಯ ಪಕ್ಕ ಕಾಯುತ್ತಿದ್ದ. ಇನ್ನಿಬ್ಬರು ಜವಾನರು ರೈಫಲ್ಸ್ ಹಿಡಿದು ಬಾಗಿಲಲ್ಲೆ ನಿಂತಿದ್ದರು. ಗಾಢವಾದ ಕತ್ತಲು, ಬಹದೂರ್ ಕಿಟಕಿಯಲ್ಲಿ ಇಣುಕಿ ನೋಡಿದ್ದೆ ತಡ, ಗೋಲಿಯೊಂದು ಅವನ ಮುಖವನ್ನು ಸೀಳಿಕೊಂಡು ಹೋಯಿತು. ಅದರ ಜೊತೆಯೇ ಎನ್‌ಎಸ್‌ಸಿಎನ್ ಯುವಕರು ಕಿಟಕಿಯಿಂದ ಹೊರಕ್ಕೆ ಹಾರಿ ಶಿಖರದ ಇಳಿಜಾರಿನಲ್ಲಿ ಮಾಯವಾಗಿಬಿಟ್ಟರು. ನಮ್ಮ ಯೋಜನೆ ತಡವಾಗಿತ್ತು. ಬಹದೂರ್ ಉಳಿಯಲಿಲ್ಲ.." ಭಟ್ಟಾಚಾರ್ಯ, ಒಂದು ನಿಟ್ಟುಸಿರಿಟ್ಟ.

ಎದುರಿಗಿದ್ದ ಕಾಫಿ ತಣ್ಣಗಾಗಿತ್ತು. ಕಾಫಿ ಕುಡಿದಾದ ಮೇಲೆ ಜೀಪಿನ ಹತ್ತಿರದವರೆಗೂ ಬಂದ ಭಟ್ಟಾಚಾರ್ಯ ನನ್ನನ್ನು ಬೀಳ್ಕೊಟ್ಟರು. ಜೊತೆಯಲ್ಲೇ ಒಂದು ಮಿಲಿಟರಿ ರಮ್ ತರುವುದನ್ನು ಮರೆಯಲಿಲ್ಲ. ಹಣ ಕೊಟ್ಟರೆ ತೆಗೆದುಕೊಳ್ಳಲಿಲ್ಲ. ನನ್ನ ಮನಸ್ಸು ಭಯದ ಜೊತೆಗೆ ಇನ್ನಷ್ಟು ಗೊಂದಲಗೊಂಡಿತು.

ಎಷ್ಟು ದಿನಾಂತ ಕುಳಿತಿರುವುದು, ಫಿಲ್ಡ್ ಕೆಲಸ ಶುರು ಮಾಡಲೇಬೇಕು, ಫೀಲ್ಡ್ ಡೈರಿ ತುಂಬಬೇಕು. ಇಬ್ಬರು ಆಳುಗಳನ್ನು ಜೊತೆಗೆ ಕರೆದುಕೊಂಡು ನಕ್ಷೆಯನ್ನು ನೋಡುತ್ತಾ ಹೊರಟೆ. ಏನೇನೂ ಹೊಸದಲ್ಲದ ಜಿಯಾಲಜಿ. ಹತ್ತಿರದಲ್ಲೇ ಆಓಮ್ಸ್ ರಾಜರ ಗುಹೆ ಇದೆ ಎಂದು ತಿಳಿದು ಅದನ್ನು ನೋಡಲು ಹೊರಟೆ. ಅದೊಂದು ಕಡಿದಾದ ಕತ್ತರಿಸಿ ನಿಲ್ಲಿಸಿದಂತಿರುವ ಶಿಲೆಗಳಿರುವ ಸ್ಥಳ. ಒಬ್ಬರು ಮಾತ್ರ ಹೆಜ್ಜೆಗಳ ಮೇಲೆ ಹೆಜ್ಜೆಗಳನ್ನಿಟ್ಟು ನಡೆಯುವಷ್ಟು ಇಕ್ಕಟ್ಟಾದ ದಾರಿ. ಕೆಳಕ್ಕೆ ಇಣುಕಲು ಕೂಡ ಧೈರ್ಯ ಇಲ್ಲದಷ್ಟು ಕಡಿದಾದ ಪ್ರದೇಶ. ಹಾಗೂ ಹೀಗೂ ಆ ದಾರಿಯಲ್ಲೇ ನಡೆದು ಗುಹೆಯ ಒಳ ಹೊಕ್ಕೆವು. ಅದೊಂದು ಎರಡಂತಸ್ತಿನ ನಾಲ್ಕು ಕೋಣೆಗಳ ಕುಸಿದು ಕುಳಿತಿರುವ ವಸತಿ.

ಬರ್ಮಾ ದೇಶದ ಕಡೆಯಿಂದ ಚಿಂದ್‌ವಿನ್-ಇರ್‌ವಾಡಿ ಕಣಿವೆಗಳ ಮುಖಾಂತರ ಉತ್ತರ ಈಶಾನ್ಯದ ಕಡೆಗೆ ನುಗ್ಗಿಬಂದ ಆಓಮ್ಸ್ ಜನ ಎದುರಾದ ಅಂದಿನ ಬುಡಕಟ್ಟು ಜನರನ್ನು ಕತ್ತರಿಸಿ, ಬೇಯಿಸಿ ಅವರ ಮಾಂಸವನ್ನು ಅವರ ಜನರಿಗೆ ತಿನ್ನಿಸಿ ಚಂಗೀಸ್‌ಖಾನ್‌ಗಿಂತ ಕ್ರೂರವಾಗಿಯೇ ನಡೆದುಕೊಂಡರೆಂದು ಇತಿಹಾಸದಿಂದ ತಿಳಿದುಬರುತ್ತದೆ.

ಆಗ ಬಂದ ಜನ ಈಗಿನ ಬ್ರಹ್ಮಪುತ್ರಾ ನದಿಯ ಇಕ್ಕೆಲುಬುಗಳಲ್ಲಿ ಹರಡಿಕೊಂಡಿದ್ದಾರೆ. ಈ ವಿಷಯ ತಿಳಿದುಕೊಂಡಿರುವ ಕೆಲವು ನಾಗಾಗಳು ಅವರೆಲ್ಲಾ ಒಳ್ಳೆ ಫಲವತ್ತಾದ ನೆಲೆಯಲ್ಲಿ ನೆಲೆಸಿದ್ದಾರೆ, ನಾವು ಮಾತ್ರ ಇಂದಿಗೂ ಶಿಖರಗಳಲ್ಲೇ ಉಳಿದಿದ್ದೇವೆ ಎಂದು ನೊಂದುಕೊಳ್ಳುತ್ತಾರೆ.

ಅಲ್ಲಿಂದ ಸುಮಾರು ದೂರ ನಡೆದು ಬಂದು ಜೀಪಿನಲ್ಲಿ ಕುಳಿತುಕೊಂಡೆವು. ಜೀಪು ಇಳಿದೂ ಹತ್ತಿ, ಸುತ್ತಿ ಬಳಸಿ ಸಾಗುತ್ತಿದೆ. ಅದೊಂದು ಕಡಿದಾದ ಎರಡು ಶಿಖರಗಳ ನಡುವೆ ಹರಿಯುತ್ತಿರುವ ನದಿ. ಜೀಪು ಒಂದು ಶಿಖರದ ಸೊಂಟದಿಂದ ಇಳಿಯುತ್ತ ಬಂದು ಹರಿಯುವ ನದಿಗೆ ಅಡ್ಡವಾಗಿ ಕಟ್ಟಿರುವ ಬಿದಿರು ಸೇತುವೆ ದಾಟಿ ಇನ್ನೊಂದು ಶಿಖರದ ಸೊಂಟಕ್ಕೆ ಏರಬೇಕು.

ಅದಕ್ಕಿಂತ ಮುಂಚೆ, ಜೀಪು ಇಳಿಜಾರಿನಲ್ಲಿ ಇಳಿಯಲು ಶುರುವಾಗಿತ್ತು. ಡ್ರೈವರ್ ತನ್ನ ಹಿಡಿತವನ್ನು ಕಳೆದುಕೊಂಡವನಂತೆ ಬ್ರೇಕನ್ನು ಒಮ್ಮೆಲೆ ಒತ್ತಿದ. ಬ್ರೇಕ್ ಪಟ್ಟನೆ ಒಡೆಯಿತು. ಜೀಪು ಇಳಿಜಾರಿನಲ್ಲಿ ಇನ್ನಷ್ಟು ವೇಗವಾಗಿ ನುಗ್ಗಿತು. ಯಾವ ರೀತಿಯ ಉದ್ವೇಗವನ್ನೂ ತೋರಿಸದ ತೋಂಗ್‌ಪಾಂಗ್ ಸ್ಟೀರಿಂಗನ್ನು ಹಿಡಿದುಕೊಂಡು ಜೀಪು ದಾರಿಯಿಂದ ಹೊರಕ್ಕೆ ಹೋಗದಂತೆ ನೋಡಿಕೊಂಡ.

ಜೀಪು ವೇಗವಾಗಿ ಮುನ್ನುಗ್ಗಿ ಬಿದಿರು ಸೇತುವೆಯನ್ನು ದಾಟಿ ಸ್ವಲ್ಪ ದೂರ ಮೇಲಕ್ಕೆ ಹತ್ತಿ ವೇಗ ಕಳೆದುಕೊಂಡು ಹಿಂದಕ್ಕೆ ಬಂದು ಮತ್ತೆ ಮುಂದಕ್ಕೆ ಉಯ್ಯಾಲೆ ಆಡಿ ನಿಧಾನವಾಗಿ ನಿಂತುಕೊಂಡಿತು. ನನ್ನ ಹೃದಯ ಉಯ್ಯಾಲೆ ಆಡುತ್ತಲೇ ಇತ್ತು. ಆ ಅಪಘಾತವೇನಾದರೂ ಒಂದೆರಡು ನಿಮಿಷಗಳ ಹಿಂದೆಯೋ ಮುಂದೆಯೋ ಸಂಭವಿಸಿದ್ದರೆ ಏನಾಗುತ್ತಿತ್ತೋ ಏನೋ..? ಅಯ್ಯೋ ದೇವರೆ" ಎಂದುಕೊಂಡೆ.

ಇದಕ್ಕಿನ್ನು ಮುಂಚೆ ಒಮ್ಮೆ ಕೋಹಿಮಾದಿಂದ ಹಿಂದಕ್ಕೆ ಬರುವಾಗ ಕೇವಲ ಕೆಲವು ಅಡಿಗಳ ಅಂತರದಲ್ಲಿ ಆಗಬೇಕಾಗಿದ್ದ ಬಾರಿ ಅಪಘಾತದಿಂದ ಪಾರಾಗಿದ್ದೆವು. ನಾನು, ಶಾಹು ಕೋಹಿಮಾದಿಂದ ವಾಪಸ್ಸು ಬರುವಾಗ ಶರ್ಮಾ ತನ್ನ ಜೊತೆಗೆ ತಂದಿದ್ದ ಬುತ್ತಿಯನ್ನು ತಿನ್ನಲು ಜೀಪನ್ನು ನಿಲ್ಲಿಸುವಂತೆ ಡ್ರೈವರ್‌ಗೆ ಹೇಳಿದ. ನಾನು "ಏಯ್ ಹಾಗೆ ತಿನ್ನೋ" ಎಂದು ಗದರಿದೆ. ಶಾಹು "ತೋಂಗ್‌ಪಾಂಗ್, ಹೋದರೆ ಹೋಗಲಿ ನಿಲ್ಲಿಸು" ಎಂದರು. ಜೀಪು ಒಂದು ತಿರುವಿನಲ್ಲಿ ನಿಂತುಕೊಂಡಿತು. ಎಡಗಡೆ ಆಳವಾದ ಇಳಿಜಾರಿನಲ್ಲಿ ಹಾವಿನಂತೆ ಹರಿಯುತ್ತಿರುವ ನದಿ. ಬಲಗಡೆ ಹೆಗಲನ್ನು ಕತ್ತರಿಸಿ ಕೊಂಡಿರುವ ತಪ್ಪಲುಗಳು.

ರಸ್ತೆಯ ಪಕ್ಕದಲ್ಲಿರುವ ಕಲ್ಲು ಬೆಂಚಿನ ಮೇಲೆ ಕುಳಿತುಕೊಂಡು ಜೀಪಿನ ಚಕ್ರಗಳನ್ನು ನೋಡುತ್ತೇನೆ. ಎಡಗಡೆ ಇರುವ ಮುಂದಿನ ಚಕ್ರದ ನಾಲ್ಕು ಜೋಲ್ಟ್‌ಗಳು ಕೇವಲ ಎರಡೋ ಮೂರೋ ಎಳೆಗಳ ಮೇಲೆ ನಿಂತಿವೆ. ನಮ್ಮ ಜೀವಗಳು ಕೇವಲ ಎರಡೋ ಮೂರೋ ಸುತ್ತುಗಳಲ್ಲಿ ನಿಂತುಬಿಟ್ಟಿದ್ದವು. ಅದೇನು ಆಶ್ಚರ್ಯವೋ! ಅದೇನು ಮಾಯವೋ! ಬದುಕಿ ಉಳಿದಿದ್ದೆವು.

ಒಂದು ದಿನ ಸಾಯಂಕಾಲ ಒಬ್ಬನೇ ಹೊರಗಡೆ ಕುಳಿತುಕೊಂಡು ಮಹಾತ್ಮ

ಗಾಂಧಿಯ "ಎಕ್ಸ್‌ಪೆರಿಮೆಂಟ್ ವಿಥ್ ಟ್ರೂತ್" ಪುಸ್ತಕವನ್ನು ಓದುತ್ತಿದ್ದೇನೆ. ಒಬ್ಬ ಇಪ್ಪತ್ತೈದರ ಗಡಿಯಲ್ಲಿರುವ ನಾಗಾ ಯುವಕ ಹತ್ತಿರ ಬಂದಿದ್ದ ಕುಕ್ಕುರುಗಾಲಿನಲ್ಲಿ ಕುಳಿತುಕೊಂಡ. ತಲೆ ಕೆಳಕ್ಕೆ ಹಾಕಿಕೊಂಡು ಒಂದು ಕಡ್ಡಿಯಿಂದ ನೆಲವನ್ನು ಗೀರುತ್ತಾ ಮಧ್ಯೆ ಮಧ್ಯೆ ನನ್ನ ಕಡೆಗೆ ನೋಡತೊಡಗಿದ.

ಬಹುಶಃ ತೋಂಗ್‌ಪಾಂಗ್‌ನನ್ನೋ ಅಥವಾ ಶರ್ಮಾನನ್ನೋ ನೋಡಲು ಬಂದಿರಬಹುದೆಂದು ನನ್ನ ಪಾಡಿಗೆ ನಾನು ಓದುತ್ತಲೇ ಇದ್ದೆ.

" ಯಾವೂರು ನಿನ್ನದು?" ನೇರವಾಗಿ ಕೇಳಿದ. ಹೇಳಿದೆ.

"ನೀನ್ಯಾರು..?"

"ನಾನೊಬ್ಬ ಜಿಯಾಲಜಿಸ್ಟ್"

"ಯಾವ ಇಲಾಖೆ"?

"ಜಿ.ಎಸ್.ಐ. ಕೇಂದ್ರ ಸರ್ಕಾರ"

"ಈ ಜೀಪು ಎಲ್ಲಿಯದು ?"

"ನಮ್ಮ ಇಲಾಖೆಯದು, ದಿಮಾಪುರದಿಂದ ತಂದಿದ್ದೇನೆ" ಹೇಳಿದೆ.

"ನಾಗಾಲ್ಯಾಂಡ್ ಎಂದರೆ ಮೊದಲಕ್ಷರ "ಎನ್" ಇರಬೇಕು. ಎಮ್ ಇದೆಯಲ್ಲ?" ಎಂದ.

"ಅದಾ, ಅದು ಮೇಘಾಲಯದ ನೋಂದಣಿ ಹೊಂದಿದೆ. ನಮ್ಮ ಉತ್ತರ ಈಶಾನ್ಯ ವಲಯದ ಮುಖ್ಯ ಕಛೇರಿ ಷಿಲ್ಲಾಂಗಿನಲ್ಲಿದೆ, ಆದುದರಿಂದ ನಮ್ಮ ಗಾಡಿಗಳ ನೋಂದಣಿ ಎಲ್ಲಾ ಮೇಘಾಲಯದ ಹೆಸರಿನಲ್ಲಿರುತ್ತವೆ" ಎಂದೆ.

"ಇಲ್ಲಿ ಏನೇನು ಸಿಗುತ್ತದೆ ?" ಕೇಳಿದ.

"ಸದ್ಯಕ್ಕೆ ಏನೂ ಸಿಕ್ಕಿಲ್ಲ, ಏನಾದರೂ ಸಿಗುತ್ತೋ ಇಲ್ಲವೋ ನೋಡಬೇಕು"

"ಬೇಕಾದಷ್ಟು ಜನ ಬಂದು ನೋಡಿದ್ದಾರಲ್ಲ?" ಮತ್ತೆ ಪ್ರಶ್ನಿಸಿದ.

"ನೋಡಿರಬಹುದು, ಆದರೆ ನಾವು ಬಂದಿರುವುದು ಇದೇ ಮೊದಲು, ಮೈನ್ಸ್ ಅಂಡ್ ಜಿಯಾಲಜಿ, ನಾಗಾಲ್ಯಾಂಡಿನವರು ಬಂದಿರಬಹುದು" ಎನ್ನುವಷ್ಟರಲ್ಲಿ,

"ಅವರೋ ತಿಂದು ತಿಂದು ಕೊಬ್ಬಿ ಹೋಗಿರುವ ಹಂದಿಗಳು" ಅದೆಲ್ಲಾ ಹಾಳಾಗಿ ಹೋಗಲಿ ಈ ತಲೆಹರಟೆ ಪ್ರಶ್ನೆಗಳೆಲ್ಲಾ ಯಾತಕ್ಕೆ ಇವನಿಗೆ ಎಂದುಕೊಂಡು ಅವನನ್ನೊಮ್ಮೆ ನೋಡಿದೆ. ನನ್ನ ಕಡೆಯೇ ದುರುಗುಟ್ಟಿಕೊಂಡು ನೋಡುತ್ತಿದ್ದಾನೆ. ಎಲಾ ಇವನ ಎಂದುಕೊಂಡೆ.

"ಇಲ್ಲೇನು ಕೆಲಸ..? ಬಹಳ ಅಧಿಕಾರಿಗಳು ಬಂದು ಹೋಗಿದ್ದಾರೆ, ಯಾವ ಅಧಿಕಾರಿಗಳು ಬಂದರೂ ಅಷ್ಟೇ, ಬರದೆ ಇದ್ದರೂ ಅಷ್ಟೇ ನಮ್ಮ ತೊಂದರೆಗಳು ನಮಗೆ ಇದ್ದೇ ಇದೆ. ಸಾಲಾ ನೀನೂ ಅಷ್ಟೇ ಮಸ್ತೀ... ಮಜಾ ಮಾಡಿ ಹಣ ಮಾಡಿಕೊಂಡು ಹೋಗ್ತೀಯಾ" ಎಂದವನೆ ಎದ್ದು ನಡೆದೇ ಬಿಟ್ಟ.

ನನಗ್ಯಾಕೋ ಸಣ್ಣಗೆ ನಡುಕ ಶುರುವಾಗಿ ಇವನು ಅವನೇ (ಉಗ್ರಗಾಮಿ) ಎನ್ನುವುದರಲ್ಲಿ ಸಂದೇಹವಿಲ್ಲ ಸಧ್ಯಕ್ಕೆ ಅಷ್ಟಕ್ಕೆ ಬಿಟ್ಟನಲ್ಲ ಎಂದುಕೊಂಡು ಇಲ್ಲಿಂದ ಆದಷ್ಟು ಬೇಗ ಕಾಲು ಕೀಳುವುದೆ ಸರಿಯಾದ ಉಪಾಯ ಎಂದುಕೊಂಡೆ. ಮತ್ತೆ ಇನ್ನೆರಡು ದಿನ ಟ್ರ್ಯಾವರ್ಸ್ ತೆಗೆದುಕೊಂಡು ತೋಂಗ್‌ಲೆಂಗ್‌ನಿಂದ ಕೆಳಗಿಳಿಯಲು ತಯಾರಿ ಮಾಡಿಕೊಳ್ಳುತ್ತಿದ್ದಂತೆ ಶಾಹು ಕೂಡ ಜೊತೆ ಸೇರಿಕೊಂಡರು. ಅಲ್ಲಿಂದ ಇನ್ನಷ್ಟು ದಕ್ಷಿಣ ಪಶ್ಚಿಮಕ್ಕೆ ದೀಖು ನದಿಯ ಇನ್ನೊಂದು ಹಳ್ಳಿಗೆ ಕ್ಯಾಂಪ್ ಶಿಫ್ಟ್ ಮಾಡಿ ಮೆಲ್ಲಗೆ ಉಸಿರಾಡತೊಡಗಿದೆವು. ಜರಿಪೇಮ ಎಂಬ ಹಳ್ಳಿಯ ವಿಶ್ರಾಂತಿ ಗೃಹದಲ್ಲಿ ಉಳಿದುಕೊಂಡು ಅಲ್ಲಿಂದ ಸುತ್ತಲು ಟ್ರಾವರ್ಲ್ಸ್ ತೆಗೆದುಕೊಂಡು ಕೆಲಸ ಮುಗಿಸಿ ನೇರವಾಗಿ ದಿಮಾಪುರ ಸೇರಿಕೊಂಡೆವು.

ಮುಂದಿನ ವರ್ಷ ಟುಯಿನ್‌ಸಾಂಗ್ ಮತ್ತು ಮೋನ್ ಜಿಲ್ಲೆಗಳಲ್ಲಿ ಸಂಶೋಧನೆ ನಡೆಯಬೇಕಿತ್ತು. ಆದರೆ ಎರಡು ಬುಡಕಟ್ಟುಗಳ ನಡುವೆ ನಡೆಯುತ್ತಿದ್ದ ಘೋರ ರಕ್ತಪಾತದಿಂದ ಸಂಶೋಧನೆಯನ್ನು ಒಂದು ವರ್ಷ ಮುಂದಕ್ಕೆ ಹಾಕಲಾಯಿತು. ಅಷ್ಟರಲ್ಲಿ ನನಗೂ ಬೆಂಗಳೂರಿಗೆ ವರ್ಗವಾಗಿ ಗಂಟು ಮೂಟೆಯನ್ನು ಕಟ್ಟಿಕೊಂಡು ಬೆಂಗಳೂರು ತಲುಪಿಯೇ ಬಿಟ್ಟೆ.

ಈಗ ಬೆಂಗಳೂರಿಗೆ ಬಂದ ಮೇಲೆ ಹೊರಗಡೆಯೇ ಇನ್ನಷ್ಟು ವರ್ಷಗಳು ಇದ್ದಿದ್ದರೆ ಚೆನ್ನಾಗಿತ್ತು ಎನಿಸುತ್ತಿದೆ.

* * *

ಈ ಮಾಲೆಯಲ್ಲಿ ಇದೀಗ "ಅಲೆಮಾರಿಯ ಹೆಜ್ಜೆಗಳು" ಎಂಬ ಪ್ರವಾಸಕಥನ ಪ್ರಕಟವಾಗುತ್ತಿರುವುದು ಹರ್ಷದ ಸಂಗತಿ. ಇದರ ಲೇಖಕರಾದ ಶ್ರೀ ಎಂ. ವೆಂಕಟಸ್ವಾಮಿ ಅವರು ಭಾರತೀಯ ಭೂ ವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಯ ಭೂವಿಜ್ಞಾನಿಗಳಾಗಿ ದಶಕಗಳ ಕಾಲದಿಂದ ಕಾರ್ಯ ನಿರ್ವಹಿಸಿದ್ದಾರೆ. ಭಾರತದ ಹಲವಾರು ಕಡೆ ತಮ್ಮ ಪದನಿಮಿತ್ತ ಕಾರ್ಯ ನಿರ್ವಹಿಸಿರುವ ಇವರು ತಾವು ಪರಿಚಯಿಸಿದ ಮತ್ತು ದರ್ಶಿಸಿದ ಪ್ರದೇಶಗಳನ್ನು ಒಬ್ಬ ವಿಜ್ಞಾನಿಯ ಕಣ್ಣಿನಿಂದ ಹಾಗೂ ಪ್ರವಾಸಿಯ ಕಣ್ಣಿನಿಂದ ಅವಲೋಕಿಸಿ ಅಲ್ಲಿನ ಸ್ವಾರಸ್ಯಗಳನ್ನು ಈ ಕೃತಿಯಲ್ಲಿ ಕಂಡರಿಸಿದ್ದಾರೆ. ನಮ್ಮಲ್ಲಿ ಹಲವಾರು ಶ್ರೇಷ್ಠ ಪ್ರವಾಸಕಥನಗಳು ಪ್ರಕಟವಾಗಿವೆ.

ಆದರೆ ಈ ಪ್ರವಾಸಕಥನ ವಿಶಿಷ್ಟ ರೀತಿಯದು. ಬೇರೆ ಬೇರೆ ಪ್ರದೇಶಗಳ ಸೌಂದರ್ಯ ಮತ್ತು ಸಾಂಸ್ಕೃತಿಕ ವೀಕ್ಷಣೆಯ ಉದ್ದೇಶದಿಂದ ಈ ಲೇಖಕರು ಅಲ್ಲಿ ಪ್ರವಾಸ ಮಾಡಿಲ್ಲ. ಇವರ ಪ್ರವಾಸ ಸರಳ ಸುಲಭವಾದುದಲ್ಲ. ಶ್ರದ್ಧೆ, ಸಾಹಸಶೀಲತೆ, ಸಂಶೋಧನಾದೃಷ್ಟಿ, ವಾಸ್ತವ ಪರಿಶೀಲನೆಪ್ರಜ್ಞೆ, ಹಾಗೂ ಅನುಭವ ಪ್ರಾಮಾಣ್ಯಗಳನ್ನು ಗರ್ಭೀಕರಿಸಿಕೊಂಡ ವಸ್ತುನಿಷ್ಠ ಬರವಣಿಗೆ. ಆದ್ದರಿಂದ ಈ ಕೃತಿಯಲ್ಲಿ ಇತಿಹಾಸಕಾರನ ವಾಸ್ತವಪ್ರಜ್ಞೆ, ವಿಜ್ಞಾನಿಯ ಅನ್ವೇಷಣೆ ದೃಷ್ಟಿ, ಜೀವನ ಕುತೂಹಲಿಯ ರಹಸ್ಯ, ಶೋಧಕ ಪ್ರವೃತ್ತಿ, ಸೌಂದರ್ಯಾರಾಧಕನ ಸೃಜನಶೀಲ ಪ್ರತಿಭೆ, ಚಿತ್ರಕಾರನ ಕುಶಲ ಕುಸುರಿ ಮುಂತಾದವು ಇಲ್ಲಿ ಮೇಳವಿಸಿದೆ.

ಡಾ.: ಎಚ್. ಜೆ. ಲಕ್ಕಪ್ಪಗೌಡ
ಅಧ್ಯಕ್ಷರು,
ಕನ್ನಡ ಪುಸ್ತಕ ಪ್ರಾಧಿಕಾರ,
ಬೆಂಗಳೂರು.

ISBN 81-7713-055-2